# ಮಹಿಳಾ ಅಧ್ಯಯನ

ಸಂಪುಟ ೯ ಸಂಚಿಕೆ ೨
ಜುಲೈ–ಡಿಸೆಂಬರ್ ೨೦೦೭



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಮಹಿಳಾ ಅಧ್ಯಯನ

ಸಂಪಾದಕರು

ಡಾ. ಶೈಲಜ ಹಿರೇಮಠ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**MAHILA ADHYAYANA**
Bi-Annual, Vol.- 9, issue-2, July-December-2007

*Edited* by
**Dr. Shailaja Hiremath**
Head of the Department of Women's Studies
Kannada University, Hampi, Vidyaranya 583 276

*Published by*
**Dr. A. Mohana Kuntar**
Director, Prasaranga
Kannada University, Hampi, Vidyaranya 583 276

Impression : 2009 Pages : viii + 158 Price : Rs. 50/-

www.kannadauniversity.org

ಅರ್ಧವಾರ್ಷಿಕ ಪತ್ರಿಕೆ, ಸಂಪುಟ ೯, ಸಂಚಿಕೆ ೨, ಜುಲೈ-ಡಿಸೆಂಬರ್-೨೦೦೭





ಬಿಡಿ ಪ್ರತಿ ಬೆಲೆ : ರೂ. ೫೦.೦೦

ವಾರ್ಷಿಕ ಚಂದಾ : ವ್ಯಕ್ತಿಗಳಿಗೆ ರೂ. ೮೦.೦೦
ಸಂಸ್ಥೆಗಳಿಗೆ ರೂ. ೧೦೦.೦೦

ತ್ರೈವಾರ್ಷಿಕ ಚಂದಾ : ವ್ಯಕ್ತಿಗಳಿಗೆ ರೂ. ೨೦೦.೦೦
ಸಂಸ್ಥೆಗಳಿಗೆ ರೂ. ೨೫೦.೦೦

*ಮುಖಪುಟ* : ಕೆ.ಕೆ. ಮಕಾಳಿ

*ಅಕ್ಷರ ಸಂಯೋಜನೆ*
ವಿದ್ಯಾರಣ್ಯ ಗಣಕ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

*ಮುದ್ರಣ*
ಸ್ನೇಹಾ ಪ್ರಿಂಟರ್ಸ್, ಬೆಂಗಳೂರು

*ಪುಸ್ತಕ ದೊರೆಯುವ ಸ್ಥಳ*
ಸರಸ್ವತಿ ಪುಸ್ತಕ ಮಾರಾಟ ಮಳಿಗೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ ೫೮೩ ೨೭೬ , ದೂರವಾಣಿ : ೦೮೩೯೪-೨೪೧೩೧೩

ಪ್ರಸಾರಾಂಗ ಪುಸ್ತಕ ಮಾರಾಟ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಪ್ರಾದೇಶಿಕ ಕಚೇರಿ
ಸರ್ಕಾರಿ ಮುದ್ರಣ ತಂತ್ರಜ್ಞಾನ ಸಂಸ್ಥೆ ಕಟ್ಟಡ
ಅರಮನೆ ರಸ್ತೆ, ಬೆಂಗಳೂರು ೫೬೦ ೦೦೧
ದೂರವಾಣಿ : ೦೮೦-೨೨೩೭೨೩೮೮

# ಸಂಪಾದಕೀಯ

ಶೈಲಜ ಹಿರೇಮಠ

ಎಫ್. ಡಬ್ಲ್ಯೂ. ಬೈನ್‌ರವರು ತಮ್ಮ 'ಡಿಜಿಟ್ ಆಫ್ ದಿ ಮೂನ್" ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ: 'ಸ್ವಸ್ತ್ರೀ (Swasthri) ಸ್ತ್ರೀಯನ್ನು ಸೃಷ್ಟಿಸಲು ಪ್ರಾರಂಭಿಸಿದಾಗ ಆತನಿಗೆ ಪುರುಷನನ್ನು ಸೃಷ್ಟಿಸುವುದರಲ್ಲೇ ಎಲ್ಲಾ ಸಾಮಗ್ರಿಗಳೂ ಮುಗಿದು ಹೋಗಿದ್ದವು. ಗಟ್ಟಿಯಾದ ಯಾವ ವಸ್ತುವೂ ಸಿಗದ ಕಾರಣ ಅವನು ಇಕ್ಕಟ್ಟಿಗೆ ಸಿಕ್ಕಿ ಸ್ತ್ರೀಯನ್ನು ಮೃದುವಾದ ವಸ್ತುಗಳಿಂದ ಸೃಷ್ಟಿಸಿ ಅವಳನ್ನು ಅಬಲೆಯನ್ನಾಗಿ ಮಾಡಿದನು. ಚಂದ್ರನ ಗುಂಡು ಆಕಾರ, ಲತೆಯ ಬಳಕು, ಬಳ್ಳಿಯ ಬಳುಕು ಮತ್ತು ಕಂಪನ, ಜೊಂಡಿನ ದುರ್ಬಲತೆ, ಪುಷ್ಪದ ವಿಕಾಸ, ಎಲೆಗಳ ಹಗುರ, ಆನೆಯ ಸೊಂಡಿಲಿನ ಚೂಪು, ಹರಿಣಿಗಳ ದೃಷ್ಟಿ, ದುಂಬಿಯ ಝೇಂಕಾರ, ಸೂರ್ಯ ರಶ್ಮಿಯ ಸಂತಸ ಹಾಗೂ ಉಲ್ಲಾಸ, ಮೇಘಗಳ ರೋದನ, ಮೊಲದ ಅಂಜಿಕೆ, ನವಿಲಿನ ವೈಯಾರ, ಗಿಣಿಯ ಆಂತರ್ಯದ ಮೃದುತ್ವ, ವಜ್ರದ ಕಠಿಣತೆ, ಮಧುವಿನ ಮಧುರತೆ, ಹುಲಿಯ ಕ್ರೂರತೆ, ಅಗ್ನಿಯ ಬೆಳಕು, ನೀಲಕಂಠ ಪಕ್ಷಿಯ ವಟಗುಟ್ಟುವಿಕೆ, ಕೋಗಿಲೆಯ ಮೇಲುಧ್ವನಿ, ಬಕಪಕ್ಷಿಯ ಬೂಟಾಟಿಕೆ, ಚಕ್ರವಾಕ ಪಕ್ಷಿಯ ವಿಧೇಯತೆ - ಇವುಗಳೆಲ್ಲವೂ ಸೇರಿದಂತೆ ಸೃಷ್ಟಿಕರ್ತ ಸ್ತ್ರೀಯನ್ನು ರೂಪಿಸಿ ಮಾನವನಿಗೆ ನೀಡಿದ" (ಎಫ್. ಡಬ್ಲ್ಯೂ. ಬೈನ್ ಉದ್ಧೃತ : ವೆಂಕಟರಾಯಪ್ಪ ಕೆ.ಎನ್. "ಸ್ತ್ರೀ ಮತ್ತು ಸಮಾಜ" ೧೯೭೧, ಮೈಸೂರು ವಿಶ್ವವಿದ್ಯಾಲಯ, ಮೈಸೂರು).

ನಾನು ಮೇಲಿನ ಮಿಥ್‌ನ ವಿಶ್ಲೇಷಣೆಗೆ ತೊಡಗುವುದಿಲ್ಲ. ಸಂಪಾದಕೀಯ ಬರವಣಿಗೆಯ ಮಿತಿಗೆ ತೊಡಕಾಗುವುದೆಂದು ಉದ್ದೇಶಪೂರ್ವಕವಾಗಿಯೇ ಕೈಬಿಟ್ಟಿದ್ದೇನೆ. ಮೇಲೆ ಉಲ್ಲೇಖಿಸಿದ ಮಿಥ್‌ಗಳಂಥವು ಎಲ್ಲ ಧರ್ಮಗಳಲ್ಲೂ, ಎಲ್ಲ ಜಾತಿಗಳಲ್ಲೂ ಇವೆ. ಹೆಣ್ಣಿನ ಮೊದಲ ಮುಟ್ಟು, ತಿಂಗಳ ಮುಟ್ಟು, ಬಸಿರು, ಬಾಣಂತನಗಳಂತಹ ಜೈವಿಕ ಪ್ರಕ್ರಿಯೆಯ ಕುರಿತು ಬಗೆ ಬಗೆಯ ಕಥೆಗಳು, ನಂಬಿಕೆಗಳು, ಸಂಪ್ರದಾಯಗಳು, ಆಚರಣೆಗಳು ರೂಢಿಯಲ್ಲಿವೆ. ಇಂತಹ ಮಿಥ್‌ಗಳು, ನಂಬಿಕೆ-ಸಂಪ್ರದಾಯ-ಆಚರಣೆಗಳು ಕೇವಲ ಹೆಣ್ಣಿನ ದೇಹ ಸಂರಚನೆಯ ಕುರಿತು ಮಾತನಾಡುತ್ತವೆ ಎಂದು ಹೇಳಲಾಗುವುದಿಲ್ಲ; ಆಯಾ ಧರ್ಮ ಜಾತಿಗಳಲ್ಲಿನ ಲಿಂಗಾಧಾರಿತ ಅಸಮಾನತೆಯ ಮೇಲೆ, ಶೋಷಣೆಗಳ ಮೂಲ ನೆಲೆಗಳ ಮೇಲೆ ಬೆಳಕು ಚೆಲ್ಲುತ್ತಿರುತ್ತವೆ.

ಹೆಣ್ಣಿನ ಕುರಿತಿರುವ ಮಿಥ್‌ಗಳು ಕೇವಲ ಮಿಥ್‌ಗಳಾಗಿ ಉಳಿಯುವುದಿಲ್ಲ; ಬದಲಿಗೆ ಹೆಣ್ಣಿನ ಬಗೆಗೆ ತಾತ್ವಿಕತೆಯನ್ನು ನಿರ್ವಚಿಸುತ್ತಿರುತ್ತವೆ, ನಿರೂಪಿಸುತ್ತಿರುತ್ತವೆ. ಹೀಗೆ ನಿರ್ವಚಿಸಲ್ಪಟ್ಟ ತಾತ್ವಿಕತೆಯು ನಂಬಿಕೆ, ಆಚರಣೆ ಹಾಗೂ ಸಂಪ್ರದಾಯಗಳ ಮೂಲಕ ಜಾರಿಗೊಳ್ಳುತ್ತಿರುತ್ತವೆ. ಹೆಣ್ಣಿನ ಬಗೆಗಿನ ಮಿಥ್‌ಗಳು ವೈಚಾರಿಕ ಆಕೃತಿಗಳನ್ನು ಹಾಗೂ ಇವುಗಳಿಗೆ ಸಂಬಂಧಿಸಿರುವ ನಂಬಿಕೆ, ಸಂಪ್ರದಾಯ ಆಚರಣೆಗಳು ಪ್ರಾಯೋಗಿಕ ಆಕೃತಿಗಳನ್ನು ಹೊಂದಿದ್ದು ಎರಡೂ ಒಟ್ಟೊಟ್ಟಿಗೆ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುತ್ತಿರುತ್ತವೆ. ವಿವಾಹ ಮತ್ತು ಕುಟುಂಬಗಳೇ ಹೆಣ್ಣಿನ ಶೋಷಣೆಯ ಮೂಲ ನೆಲೆಗಳು ಎಂದು ಇದುವರೆಗಿನ ಮಹಿಳಾ ಅಧ್ಯಯನಗಳು, ಸ್ತ್ರೀವಾದಿ ಅಧ್ಯಯನಗಳು ಹೇಳುತ್ತಿವೆ. ಆದರೆ ಹೆಣ್ಣಿನ ದೇಹರಚನೆಯ ಕುರಿತಿರುವ ಮಿಥ್‌ಗಳೇ ತಮ್ಮ ವೈಚಾರಿಕ ಆಕೃತಿಗಳ ಮೂಲಕ ವಿವಾಹ, ಕುಟುಂಬ, ದೇವದಾಸಿಯಂತಹ ವ್ಯವಸ್ಥೆಗಳನ್ನು ಸೃಷ್ಟಿಸುತ್ತ, ಇವುಗಳನ್ನೇ ಪ್ರಾಯೋಗಿಕ ನೆಲೆಗಳನ್ನಾಗಿಸಿಕೊಂಡು ಶೋಷಣೆಯ ತೀವ್ರತೆಯನ್ನು ಹೆಚ್ಚಿಸುತ್ತಿರುತ್ತವೆ. ಇನ್ನಷ್ಟೇ ಇವುಗಳ ಕುರಿತು ಗಂಭೀರವಾದ ಅಧ್ಯಯನಗಳು ನಡೆಯಬೇಕಿದೆ.

ಪ್ರಮೋದ ಮುತಾಲಿಕ್ ಅವರಂತಹ ಹಿಂದೂ ಕೋಮುವಾದಿಗಳು ಕಟ್ಟಿಕೊಳ್ಳುತ್ತಿರುವ ಹಿಂದುತ್ವ ನಿರ್ವಚನದಲ್ಲಿ ಇದಕ್ಕನುಗುಣವಾಗಿ ಅವರು ರೂಪಿಸಿಕೊಳ್ಳುತ್ತಿರುವ ಪಬ್ ಸಂಸ್ಕೃತಿಯ ವಿರೋಧ, ಪ್ರೇಮಿಗಳ ದಿನಾಚರಣೆಯ ವಿರೋಧ ಮೊದಲಾದ ಕಾರ್ಯಕ್ರಮಗಳಲ್ಲಿ, ತಾತ್ವಿಕತೆಗಳಲ್ಲಿ ಹೆಣ್ಣಿನ ದೇಹದ ಕುರಿತಿರುವ ಪಾರಂಪರಿಕ ಮಿಥ್‌ಗಳ, ಇವುಗಳಿಗೆ ಸಂಬಂಧಿಸಿದ ನಂಬಿಕೆ, ಸಂಪ್ರದಾಯ ಆಚರಣೆಗಳ ಗಾಢ ಪ್ರಭಾವವಿದೆ. ಅಂಥ ಹಿಂದುತ್ವವನ್ನು ವಿರೋಧಿಸುವ ಅವಸರದಲ್ಲಿ ನಿರ್ಮಲಾ ವೆಂಕಟೇಶ್ ಅಂಥವರು "ಹೆಣ್ಣುಮಕ್ಕಳು ಪಬ್‌ಗಳಿಗೆ ಹೋದರೆ ತಪ್ಪೇನು?" ಎಂದರು. ರೇಣುಕಾ ಚೌದರಿಯಂಥವರು ಪ್ರಮೋದ ಮುತಾಲಿಕ್ ಅವರಿಗೆ ಹುಡುಗಿಯರ ಒಳ ಉಡುಪು (ಚಡ್ಡಿ, ಬ್ರಾ) ಕಳುಹಿಸಿ, ಪಿಂಕ್ ಚಡ್ಡಿ ಬೇಡವೆಂದರೆ ಬೇರೆ ಬಣ್ಣದ ಚಡ್ಡಿ ಕಳುಹಿಸುವುದಾಗಿ ಛೇಡಿಸಿದರು. ಪ್ರಮೋದ ಮುತಾಲಿಕ್‌ರಂತಹ ಹಿಂದೂ ಕೋಮುವಾದಿಗಳು, ತಾಲಿಬಾನಿಗಳಂತಹ ಮುಸ್ಲಿಂ ಕೋಮುವಾದಿಗಳು ಧರ್ಮದ ಹೆಸರಿನಲ್ಲಿ ಕಟ್ಟಿಕೊಳ್ಳುತ್ತಿರುವ ನಿರ್ವಚನಗಳು, ಇದಕ್ಕನುಗುಣವಾಗಿ ಅವರೇ ರೂಪಿಸಿಕೊಳ್ಳುತ್ತಿರುವ ಹಾಗೂ ರೂಢಿಸಲು ಒತ್ತಾಯಿಸುತ್ತಿರುವ ನೀತಿ ನಿಯಮಗಳು, ಶರಿಯತ್‌ಗಳು ಮಹಿಳೆಯರ ಬಾಳನ್ನು ಕತ್ತಲದಂಚಿಗೆ ತಳ್ಳುತ್ತಿವೆ. ಮಹಿಳೆಯರ ಬಿಡುಗಡೆಯ ಆಶಯದಲ್ಲಿ, ಭಿನ್ನ ಬದುಕಿನ ಕನಸಿನ ಆಸೆಯಲ್ಲಿ ರೇಣುಕಾ ಚೌದರಿ, ನಿರ್ಮಲಾ ವೆಂಕಟೇಶ್ ಅಂಥವರು ಅವರಿಗರಿವು ಇಲ್ಲದಂತೆ ಜಾಗತಿಕ ಮಾರುಕಟ್ಟೆಯ ಅಪೇಕ್ಷೆಗನುಗುಣವಾಗಿ ಹೆಣ್ಣಿನ ದೇಹವನ್ನು ನಿರ್ವಚಿಸುತ್ತಿದ್ದಾರೆ. ಪಬ್‌ಗೆ ಮಹಿಳೆಯರು ಹೋಗುವುದನ್ನು ಸಮರ್ಥಿಸಿಕೊಳ್ಳುವುದಿರಬಹುದು. ಪ್ರೇಮಿಗಳ ದಿನಾಚರಣೆಯಂದು ಹೆಣ್ಣುಮಕ್ಕಳ ಒಳಉಡುಪುಗಳನ್ನು ಮಾರುಕಟ್ಟೆಗೆ ತರುವುದಿರಬಹುದು. ಇವುಗಳೆರಡೂ ಹೆಣ್ಣಿನ ದೇಹವನ್ನು ಬಂಡವಾಳವಾಗಿಸಿಕೊಂಡು ಹಣಗಳಿಸುತ್ತಿರುವ ಜಾಗತಿಕ ಮಟ್ಟದ ಬಂಡವಾಳಶಾಹಿಗಳಿಗೆ ಪೂರಕವಾಗಿವೆ.

ಇಂತಹ ಸೂಕ್ಷ್ಮಗಳನ್ನು ಮಹಿಳಾ ಪರವಾಗಿರುವವರು, ಸ್ತ್ರೀವಾದಿಗಳು, ಮಹಿಳಾ ಅಧ್ಯಯನ ಕಾರರು ಗಮನಿಸದೇ ಹೋದರೆ ಲಿಂಗ ಸಮಾನತೆಯ ಕನಸು ಕನಸಾಗಿಯೇ ಉಳಿಯುವುದು.

ಪ್ರಸ್ತುತ ಸಂಚಿಕೆಯಲ್ಲಿ ಲೇಖನಗಳನ್ನು ಸಾಹಿತ್ಯ, ಅನುಭಾವ, ಸಮುದಾಯ ಮತ್ತು ಶಿಕ್ಷಣ ಹಾಗೂ ಅನುವಾದಗಳೆಂದು ನಾಲ್ಕು ನೆಲೆಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಸಮಯಕ್ಕೆ ಸರಿಯಾಗಿ ಲೇಖನಗಳನ್ನು ಒದಗಿಸಿ ಮಹಿಳಾ ಅಧ್ಯಯನ ಪತ್ರಿಕೆಯ ನಿರಂತರತೆಗೆ ಕಾರಣವಾದ ಲೇಖಕರೆಲ್ಲರಿಗೂ ಕೃತಜ್ಞತೆಗಳು. ಈ ಸಂಚಿಕೆಯನ್ನು ರೂಪುಗೊಳಿಸುವುದಕ್ಕೆ ಹುರುದುಂಬಿಸಿದ ನಮ್ಮ ನೆಚ್ಚಿನ ಕುಲಪತಿ ಡಾ. ಬಿ.ಎ. ವಿವೇಕ ರೈ ಅವರಿಗೆ ಎಷ್ಟು ಕೃತಜ್ಞತೆಗಳನ್ನು ಸಲ್ಲಿಸಿದರೂ ಸಾಲದು. ಡಿ.ಟಿ.ಪಿ., ಮುದ್ರಣ, ರಕ್ಷಾಕವಚದ ಸಿದ್ಧತೆ ಎಲ್ಲವನ್ನೂ ಪ್ರೀತಿಯಿಂದ ಪೂರ್ಣ ಗೊಳಿಸಿದ ಪ್ರಸಾರಾಂಗದ ಬಳಗಕ್ಕೆ ಪ್ರೀತಿಯ ಕೃತಜ್ಞತೆಗಳನ್ನು ಸಲ್ಲಿಸುತ್ತಾ ಈ ಸಂಚಿಕೆಯನ್ನು ಸಹೃದಯರಿಗೆ ಒಪ್ಪಿಸುತ್ತಿದ್ದೇನೆ.

# ಪರಿವಿಡಿ

# ಮಾರಿದೇವತೆ, ಜನ್ನ ಮತ್ತು ಅಮೃತಮತಿ

ಸಬಿತಾ ಬನ್ನಾಡಿ

**'ಮಾರಿ'** ಎಂಬ ಹೆಣ್ಣು ದೇವತೆಯ ಶಕ್ತಿಯ ಬಗೆಗೆ ಬೆರಗಾಗುತ್ತದೆ. ಈಕೆಯ ಬಗೆಗಿನ ಭಯವೂ ಕನ್ನಡ ಸಾಹಿತ್ಯದ ಸಮೃದ್ಧಿಗೆ ಕಾರಣವಾಯಿತು ಎಂಬ ಗುಮಾನಿಯೊಂದು ನಮ್ಮನ್ನು ಹೊಕ್ಕರೆ ಅದು ಅಕಾರಣವಾಗಿರಲಾರದು! ವಚನಕಾರರನ್ನು ಕಾಡಿದ್ದ ಮಾರಿ, ಜನ್ನನ ಯಶೋಧರ ಚರಿತೆಗೆ ಧಾತುವಾದಳು. ಮಾರಿದೇವತೆ ಇಲ್ಲದ ಯಶೋಧರ ಚರಿತೆ ಬೆಂತರನಿಲ್ಲದ ಹಿಟ್ಟಿನ ಹುಂಜವಾಗುತ್ತಿತ್ತು! ಕನ್ನಡದ ಚಿಂತಕರನ್ನು ಅಮೃತಮತಿ ಬೆಂಬಿಡದೆ ಕಾಡಿದ್ದಾಳೆ. ಶೀರ್ಷಿಕೆಯ ಹೆಸರು ಹೊತ್ತ ಯಶೋಧರ ಮಂಕಾಗಿ ಬಿಟ್ಟಿದ್ದಾನೆ. ಆದರೆ, ಯಶೋಧರ ಚರಿತೆಯನ್ನು ಓದಿದಾಗಲೆಲ್ಲಾ ನನ್ನನ್ನು ಕಾಡಿದವಳು ಈ ಮಾರಿದೇವತೆ.

ಯಶೋಧರ ಚರಿತೆಯೆಂಬ ಪುಟ್ಟ ಕಾವ್ಯ ತನ್ನ ವಿಶಿಷ್ಟತೆಯನ್ನು ಕೇವಲ ಭಾಷೆ, ಶೈಲಿ, ವಸ್ತುವಿಗಾಗಿಯಷ್ಟೇ ಪಡೆದುಕೊಂಡಿಲ್ಲ. ಅದು ತನ್ನ ಸಂಕೀರ್ಣತೆಗಾಗಿ ವಿಶಿಷ್ಟವೆನಿಸಿ ಕೊಳ್ಳುತ್ತದೆ. ಈ ಸಂಕೀರ್ಣತೆಯ ಸೆಲೆಗೆ ಕೃತಿಯ ಹುಟ್ಟಿನ ಕಾಲವೂ ಇಂಬು ನೀಡಿದಂತಿದೆ. ಮತ-ಮತಗಳ ನಡುವೆ ಇದ್ದ ಮೇಲಾಟದ ಜೊತೆಗೇ, ಹೆಚ್ಚು ಕಷ್ಟವಿಲ್ಲದೆ ಇನ್ನೊಂದು ಮತವನ್ನು ಸ್ವೀಕರಿಸಬಹುದಾದ ಸುಲಲಿತ ಸ್ಥಿತಿಯೊಂದು ಮಧ್ಯಕಾಲದಲ್ಲಿ ಕಾಣಸುತ್ತದೆ. ಹೀಗಾಗಿ ಹಲವು ಬಾಹ್ಯ ಕಾರಣಗಳಿಗಾಗಿ ಜನ ತಮ್ಮ ಮತಗಳನ್ನು ಬದಲಿಸಿಕೊಳ್ಳುತ್ತಿದ್ದರು. ರಾಜನ ಮತ ಬದಲಾದಂತೆ, ಪ್ರಜೆಗಳಲ್ಲೂ ಆದ್ಯತೆಗಳು ಬದಲಾಗುವ ಸಾಧ್ಯತೆ ಇತ್ತು. ಆದರೆ, ಇವೆಲ್ಲದರ ಆಚೆ ಇದ್ದವಳೆಂದರೆ ಮಾರಿದೇವತೆ. ರಾಜರು, ದೇವಸ್ಥಾನಗಳು, ಮಠಗಳು ಮೊದಲಾದ ಎಲ್ಲ ಸಾಂಸ್ಥಿಕ ಹಿಡಿತಗಳಾಚೆಗೆ ಮಾರಿ ಸದಾ ಜನಪದೀಯ ನೆಚ್ಚಿನ ದೇವತೆಯಾಗಿ ಪ್ರವಹಿಸುತ್ತಲೇ ಇದ್ದಳು, ಇದ್ದಾಳೆ. ಇದು ಮತವನ್ನೂ ತಮ್ಮ ಕೃತಿಗಳ ಮೂಲ ಸೆಲೆಗಳನ್ನಾಗಿಸಿಕೊಂಡ ಕವಿಗಳ ಚಿತ್ತವನ್ನು ಅತ್ತಿಯ ಹಣ್ಣಾಗುವಂತೆ ಮಾಡಿದೆ. ಕನ್ನಡ ಸಾಹಿತ್ಯದಲ್ಲಿ ಇದನ್ನು ಯಶೋಧರ ಚರಿತೆಯಲ್ಲಿ ಪ್ರಧಾನವಾಗಿ ಕಾಣಬಹುದು. ಸಮಯ ಪರೀಕ್ಷೆಯಲ್ಲಿಯೂ ಈ ಸುಳಿವಿದೆ. ವಚನಗಳನ್ನಂತೂ ಇನ್ನೂ ಪ್ರಧಾನ ಆಕರಗಳಾಗಿ ಈ ವಿಚಾರದಲ್ಲಿ ಬಳಸಿಕೊಳ್ಳಬಹುದು.

ಜೈನಧರ್ಮದ ಹಿನ್ನೆಲೆಯಲ್ಲಿ ನೋಡುವುದಾದರೆ, ಜನ್ನನ ಕಾಲ ಬಹಳ ಆತಂಕದ ಕಾಲ. ಅದಕ್ಕೂ ಹಿಂದೆ ಬರೆದ ಜೈನ ಧರ್ಮೀಯ ಕವಿಗಳಿಗೆ ಈ ಆತಂಕ ಇರಲಿಲ್ಲ. ಅವರದ್ದು

ಗೆದ್ದ ಕುದುರೆಯ ಮೇಲಣ ಪಯಣವಾಗಿತ್ತು. ಆದರೆ, ಜನ್ನನ ಅವಧಿಗಾಗಲೇ ಕುದುರೆಗೆ ಕಾಲು ಸೋತ ಅನುಭವ ಆಗತೊಡಗಿತ್ತು. ಇದನ್ನು ನಯಸೇನನ ಧರ್ಮಾಮೃತದಲ್ಲೂ ಗುರುತಿಸಬಹುದು. ಜನ್ನನ ಕಾಲ ಆತಂಕದ ಕಾಲವೇಕೆಂದರೆ, ಆಗ ಜೈನ ಧರ್ಮ ಪೂರ್ತಿ ಕಳೆಗುಂದಿರಲಿಲ್ಲ. ಆದರೆ, ಕೆಳೆಗುಂದುವ ಲಕ್ಷಣಗಳನ್ನು ತೋರುತ್ತಿದ್ದ ಕಾಲ ಅದಾಗಿತ್ತು. ಜೈನ ಸವಣರ ಟೀಕೆ, ಆಚರಣೆಗಳ ಟೀಕೆ ವ್ಯಾಪಕವಾಗಿ ಅದಕ್ಕೆ ಸೂಕ್ತ ಉತ್ತರ ಕೊಡಲು ಈ ಕವಿಗಳು ಹವಣಿಸುವುದನ್ನು ನೋಡಿದಾಗ ಇದು ಸ್ಪಷ್ಟವಾಗುತ್ತದೆ. ಜನ್ನ ಯಶೋಧರ ಚರಿತೆಯಲ್ಲಿ ಮುಖಾಮುಖಿಯಾಗುತ್ತಿರುವುದು ವೈಷ್ಣವ, ಶೈವರ ಜೊತೆಗಲ್ಲ. ಬದಲಿಗೆ ಮಾರಿ ಮಸಣಿಯರ ಜೊತೆಗೆ, ವೀರಶೈವ ಚಳುವಳಿಯ ಬಿಸಿ ಜನ್ನನಿಗೆ ತಾಗಿತ್ತೋ ಇಲ್ಲವೋ ತಿಳಿದಿಲ್ಲವಾದರೂ, ಆತನ ಪರಿಸರದಲ್ಲಿ ಬಹುಸಂಖ್ಯಾತ ಸಾಮಾನ್ಯ ಜನರು ಜೈನಕ್ಕಿಂತಲೂ ಮಾಂಸಾಹಾರಿ ಮಾರಿಯ ಆಕರ್ಷಣೆಗೆ ಒಳಗಾದಂತೆ ಕಾಣುತ್ತದೆ. ಹೀಗಾಗಿ ಯಶೋಧರ ಚರಿತೆಯಲ್ಲಿ ಮಾರಿಯ ಆರಾಧಕ ಮಾರಿದತ್ತನೇ ಪ್ರತಿ ನಾಯಕ. ಜೈನನಾಗಿದ್ದು ಎಲ್ಲಾ ಸಲ್ಲಕ್ಷಣಗಳನ್ನು ಒಳಗೊಂಡಿದ್ದ ಸುಂದರಾಂಗ ಯಶೋಧರನಿಗಿಂತಲೂ, ಮದ್ಯಮಾಂಸ, ಒರಟುತನ, ರೂಪಹೀನತೆಗಳನ್ನು ಹೊಂದಿದ ಮಾವುತನನ್ನು ಒಲಿದ ಅಮೃತಮತಿಯೇ ಖಳನಾಯಕಿ.

ಮಧ್ಯಕಾಲದಲ್ಲಿ ಒಂದೇ ಕುಟುಂಬದಲ್ಲಿ ಹಲವು ಮತಗಳ ದೇವತೆಗಳನ್ನು ಭಿನ್ನ ವ್ಯಕ್ತಿಗಳು ಆರಾಧಿಸುತ್ತಿದ್ದರು. ಗಂಡ ಶಿವಭಕ್ತನಾದರೆ, ಹೆಂಡತಿ ಮಾರಿಮಸಣೆಯ ಭಕ್ತೆಯಾಗ ಬಹುದಿತ್ತು ಅಥವಾ ಜೈನಳಾಗಬಹುದಿತ್ತು ಅಥವಾ ವಿಷ್ಣು ಭಕ್ತೆಯೂ ಆಗಬಹುದಿತ್ತು. ಮಕ್ಕಳು ತಮ್ಮಿಚ್ಛೆಯ ಮತ ಸ್ವೀಕರಿಸಬಹುದಿತ್ತು. 'ಅನ್ಯದೈವವ ಪೂಜಿಸುವ ಸತಿ ಮನೆಯೊಳಗಿದ್ದರೆ ಶ್ವಾನನಿಂದ ಕಷ್ಟವಲ್ಲಾ' ಎಂಬ ಚೆನ್ನ ಬಸವಣ್ಣನ ಅಸಹನೆಯ ಕಿಡಿ ಇಲ್ಲಿಂದಲೇ ಹುಟ್ಟಿದ್ದು. 'ಗಂಡ ಶಿವಭಕ್ತ, ಹೆಂಡತಿ ಮಾರಿ ಮಸಣೆಯ ಭಕ್ತೆ' ಎನ್ನುತ್ತಾನೆ ದಾಸಿಮಯ್ಯ. 'ಅರೆಗುಲಿವೆಂಡಿರ್' ಎಂದು ಹೆಂಗಸರನ್ನು, ಹೆಂಡತಿಯರನ್ನು ಸಮಯ ಪರೀಕ್ಷೆಯ ಬ್ರಹ್ಮಶಿವ ದೂಷಿಸುವುದೂ ಇದಕ್ಕೇ. ಮತಗಳು ಸಂಸ್ಥೆಗಳಾಗ ತೊಡಗಿದಂತೆ ಎಲ್ಲರನ್ನು ತನ್ನ ಕಕ್ಷೆಗಳಿಗೆ ತಂದುಕೊಳ್ಳುವ ಮಹತ್ವಾಕಾಂಕ್ಷೆಗೆ ಕೈ ಹಾಕಿದ ಸೂಚನೆಗಳಿವು. ಯಶೋಧರನ ಕುಟುಂಬದ ಈ ವೈವಿಧ್ಯತೆಯನ್ನೇ ನೋಡೋಣ-ಯಶೋಧರ ಹಾಗೂ ಆತನ ತಂದೆ ಯಶೌಘ ಜೈನ ಮತಾವಲಂಬಿಗಳು. ಯಶೋಧರನ ತಾಯಿ ಚಂದ್ರಮತಿ ಜೈನಗಳಾಗಿದ್ದರೆ ದೇವಿಗೆ ಪ್ರಾಣಿ ಬಲಿ ಕೊಡುವಂತೆ ಮಗನಿಗೇಕೆ ಹೇಳುತ್ತಿದ್ದಳು? ಎಂಬ ಪ್ರಶ್ನೆ ಸಹಜ. ಆದರೆ, ಆಕೆಯ ಬಗೆಗೂ ನಿಶ್ಚಿತ ಮಾತು ಇಲ್ಲ. ಅಮೃತಮತಿಯ ಮತ ಯಾವುದೆಂಬ ಉಲ್ಲೇಖವಾಗಲೀ ಸೂಚನೆಯಾಗಲೀ, ಕೃತಿಯಲ್ಲೆಲ್ಲೂ ಇಲ್ಲ. ಆದರೆ ಆಕೆ ಮಾಂಸಾಹಾರಿ (ಇಡೀ ಕೃತಿಯಲ್ಲಿ ಆಕೆ ಯಾವುದೇ ದೇವರನ್ನು ನೆನಪಿಸಿಕೊಳ್ಳುವುದಿಲ್ಲ!). ಯಶೋಧರನ ಮಗ ಯಶೋಮತಿ. ಆತನ ಪತ್ನಿ ಕುಸುಮಾವಳಿ. ಈ ಕುಸುಮಾವಳಿ ಮಾರಿದತ್ತನ ತಂಗಿ. ಯಶೋಧರ, ಚಂದ್ರಮತಿಯರು ಅಭಯರುಚಿ, ಅಭಯ ಮತಿಯರಾಗಿ

ಇದೇ ಯಶೋಮತಿ ಕುಸುಮಾವಳಿಯರ ಹೊಟ್ಟೆಯಲ್ಲಿ ಹುಟ್ಟುತ್ತಾರೆ. ಮಾರಿದತ್ತ ಇವರ ಸೋದರ ಮಾವನಾಗುತ್ತಾನೆ. ಯಶೋಮತಿಯೂ ಮಾಂಸಾಹಾರಿ. ಮಾರಿಗೆ ಹರಕೆ ಹೊರುವವನು. ಅಂದರೆ,

ಪರಸಿ ನಡೆದು ಮೃಗಮಂ ಪಡೆ ದೊಂ
ದೆರ್ಮೆಯ ಪೋರಿಯನಿಕ್ಕಿದ-
ನೂರ್ಮಾರಿಗೆ ಮತ್ತಮದನೆ ಮಹಳಕ್ಕಿತ್ತಂ (೩:೫೭)

ಅಂದರೆ, ಯಶೋಧರನ ಜೈನಮತ ಅವನ ಮಗನ ಕಾಲದಲ್ಲಿ ಮಾರಿದೇವತೆಯ ಅಧೀನಕ್ಕೆ ಹೋಗುವ ಸೂಚನೆ ಇದೆ. ಈ ಅವಘಡವನ್ನು ತಪ್ಪಿಸುವ ಜವಾಬ್ದಾರಿ ಜನ್ನನ ಹೆಗಲ ಮೇಲಿದೆ. ಅದಕ್ಕಾಗಿ ಯಶೋಧರನ ಮೊಮ್ಮಗನ ಕಾಲಕ್ಕೆ ಜೈನಧರ್ಮದ ಹಿರಿಮೆಯನ್ನು ಮನಗಾಣಿಸಬೇಕಾಗಿದೆ!

ಮಾರಿಯ ಆರಾಧಕರು ಅಧಿಕಾರ ಸ್ಥಾನವನ್ನು ಅನುಭವಿಸುತ್ತಿದ್ದರೆಂಬ ವಿವರ ಸ್ವತಃ ಕೃತಿಯ ಆರಂಭದಲ್ಲಿ ಬರುತ್ತದೆ. ರಾಜಪುರದ ವರ್ಣನೆ ಮಾಡುತ್ತಾ, ಸುಖ ಸಮೃದ್ಧಿ ಸಂತೋಷದ ನೆಲೆಯಾದ ಈ ದೇಶವನ್ನು ಆಳುತ್ತಿದ್ದವನು ಮಾರಿದತ್ತನಾಗಿದ್ದ. ಆತ ಪೂಜಿಸುತ್ತಿದ್ದ ದೇವತೆ ಚಂಡ ಮಾರಿದೇವತೆಯಾಗಿದ್ದಳು ಎಂದು ಕವಿ ವರ್ಣಿಸುತ್ತಾನೆ. ಇಲ್ಲಿ ಗಮನಿಸಬಹುದಾದ ವಿವರಣೆ ಎಂದರೆ ಇಲ್ಲಿನ ಪ್ರಜೆಗಳೂ ಸುಖ ಸಂತೋಷದಲ್ಲಿದ್ದರು ಎಂಬ ಹೇಳಿಕೆ.

ಇಲ್ಲಿಂದ ನಂತರದಲ್ಲಿ ಕವಿ ಬದುಕಿನ ಮೌಲ್ಯಗಳನ್ನು ಪುನರ್‌ವ್ಯಾಖ್ಯಾನ ಮಾಡತೊಡಗಲು ಪೀಠಿಕೆ ಹಾಕುತ್ತಾನೆ. ಜನ ಸುಖವಾಗಿದ್ದರು. ಆದರೆ ಅದು ಸುಖವಲ್ಲ ಎಂಬ ನೆಲೆಯಿಂದ ಕವಿ ಹೊರಡುತ್ತಾನೆ. ಜೈನಮತದ ತಾತ್ವಿಕತೆಯಿಂದ ಹೊರಡುವ ಹಿಂಸೆಯ ಲೇಪವಿಲ್ಲದ ಸುಖ ಸೌಂದರ್ಯದ ಕಡೆಗೆ ಜನರ ಮನ ಒಲಿಸುವ ಹೊಣೆಯನ್ನು ನಿಭಾಯಿಸ ಹೊರಡುವ ಕೃತಿ ಈ ಕಾರಣಕ್ಕೇ ಸಂಕೀರ್ಣವಾಗತೊಡಗುತ್ತದೆ.

ಜನ ಆರಾಧಿಸುವ ಚಂಡಮಾರಿ ದೇವತೆ 'ಅನೇಕ ಜೀವಹತಿ ತನಗೆ ಸುಖೋದ್ದೀಪಮೆನಿಸುವ ಪಾಡ ಕಳಾಪಂಡಿತೆ'ಯಾಗಿರುವವಳು. ಅಲ್ಲಿನ ರಾಜ ಹಾಗೂ ಜನರು ಆಕೆಗೆ ಜೀವಬಲಿ ಕೊಡದಿದ್ದಲ್ಲಿ ಅವರೆಲ್ಲರನ್ನೂ ಸಂಪೂರ್ಣವಾಗಿ ಆಹುತಿ ತೆಗೆದುಕೊಳ್ಳುವಳು (೧:೩೫). ಅತ್ಯಂತ ಸೂಕ್ಷ್ಮವಾಗಿ ಗಮನಿಸಬೇಕಾದ ಅಂಶವೆಂದರೆ ಕವಿ ಅವಳ ಆರಾಧಕರನ್ನು ದೂಷಿಸುವುದಕ್ಕಿಂತ, ಆಕೆಯನ್ನೇ ಅದಕ್ಕೆ ಹೊಣೆ ಮಾಡುವುದು. ಆಕೆಯ ಬಗೆಗಿನ ಭೀತಿಯಿಂದ ಪ್ರಕೃತಿಯೂ ಆ ಹಿಂಸೆಗೆ ಪೂರಕವಾಗಿ ಬರುತ್ತಿದೆ ಎಂಬ ಅದ್ಭುತ ವಿವರಗಳು ಜನ್ನ ಪ್ರತಿಭೆಯಿಂದ ಹೊರಹೊಮ್ಮುತ್ತವೆ. ಆ ಪರಿಸರದ ಜನ ಹಿಂಸೆಯನ್ನು ಆಚರಿಸಲೇಬೇಕಾದ ಒತ್ತಡದೊಳಗಿದ್ದಾರೆ. ಮೃದು ಕೋಮಲ ಹೂವುಗಳೂ, ಎಳೆಯ ಚಂದ್ರನೂ ಪ್ರೇಮವನ್ನು ನೆನಪಿಸುವವರಾಗದೆ ಇಲ್ಲಿ ಮಾಂಸದ ತುಂಡುಗಳಂತೆ, ಸಿರದ ಗಾಳಗಳಂತೆ ಕಂಗೊಳಿಸುತ್ತಾರೆ. ಅಂತಹ ಸನ್ನಿವೇಶದಲ್ಲಿ ರಾಜನೂ, ಜನರೂ 'ತಂತಮಗೆ ಚಂಡ ಮಾರಿಗೆ ಸಂತಸಮಂ

ಮಾಡಲೆಂದು ಜಾತ್ರೆಗೆ ನೆರೆದರ್'. ಚಂಡ ಮಾರಿಗೆ ಸಂತಸ ಮಾಡದೆ ತಮ್ಮ ಸಂತಸವಿಲ್ಲದ ಅನಿವಾರ್ಯತೆ ಅವರನ್ನು ಬಾಧಿಸುತ್ತಿದೆ. ಇದರ ಪರಿಣಾಮ ಮನುಷ್ಯರು ಕ್ರೂರಿಗಳಾಗುತ್ತಾರೆ (ಇವೆರಲ್ಲ ಪಾಪದ ಜೋಳದ ಬೆಳೆಸಿಂಗೆ ಬೆರ್ಚು ಕಟ್ಟಿದ ತೆರದವರು). ಹೀಗಾಗಿ ಮುಂದೆ ಬರುವ ಮಾರಿ ದೇವಾಲಯದಲ್ಲಿನ ಬೀಭತ್ಸ ವರ್ಣನೆಗಳು ನೋಡುವ ಕಣ್ಣಿನ ಹಿಂಸೆಗಳಾಗಿ ವರ್ಣಿತವಾಗುತ್ತವೆ. ಜನರ ಜೀವಭಯದ ಫಲಗಳಾದ ಈ ಹಿಂಸೆಗಳಿಗೆ ಪ್ರತಿಯಾಗಿ ಜನ್ನ ಜೀವ ಭಯವನ್ನು ಮೀರಿದ ಅಭಯರುಚಿ, ಅಭಯಮತಿಯರನ್ನು ಎದುರು ನಿಲ್ಲಿಸುತ್ತಾನೆ. ಹಿಂಸೆಯನ್ನು ನಿರಾಕರಿಸುವ ಜೈನಧರ್ಮವು ಬದುಕನ್ನು ನೋಡುವ ಕ್ರಮದ ಉನ್ನತಿಯನ್ನು ಅಭಯರುಚಿಯ ಮೂಲಕ ಮನಗಾಣಿಸುತ್ತಾನೆ. ಹಿಂಸೆಯ ಮುಳ್ಳನ್ನು ಹಿಂಸಾಕಥನದ ಸೂಜಿಯ ಮುಖಾಂತರ ತೆಗೆಯುತ್ತಾನೆ.

ಈ ನಿಟ್ಟಿನಲ್ಲಿ ಆತ ಸೃಷ್ಟಿಸುವ ಅಮೃತಮತಿಯ ಪಾತ್ರಕ್ಕೆ ವಿಶಿಷ್ಟ ಶಕ್ತಿ ಇದೆ (ಅಥವಾ ಆತ ಸಂಸ್ಕೃತಿ-ಪ್ರಾಕೃತಿಗಳಿಂದ ಪ್ರೇರಿತನಾಗಿ ಪುನರ್‌ಸೃಷ್ಟಿಸಿದ ಪಾತ್ರಕ್ಕೆ). ಅಮೃತಮತಿ ಮಾವುತನಿಗೊಲಿದ ನಂತರದಲ್ಲಿ ಬಾಳಿದ ಬಾಳು ಎಂತಹದು ಎಂಬುದು ಇಲ್ಲಿ ಮುಖ್ಯ. ಮಾವುತನಿಗೆ ಅವಳು ಒಲಿದಾಗ ಮಾರಿದತ್ತನೂ ಆ ಗಂಡನನ್ ಅಪ್ಪಿದ ತೋಳ್ ಪೋಗಂಡನನ್ ಅಪ್ಪಿತೇ ಎಂದು ಪಶ್ಚಾತ್ತಾಪ ಪಡುವುದು ಆ ಕೃತಿಯನ್ನೋದಿದವರೆಲ್ಲರಲ್ಲೂ ಅದೇ ತೀವ್ರತೆ ಹೊಂದುವಂತೆ ಜನ್ನ ಅಷ್ಟಾವಂಕನನ್ನು ವರ್ಣಿಸಿದ್ದಾನೆ ನಿಜ. ಆದರೆ, ಆ ನಂತರದ ಘಟನೆಗಳು ಹೇಳುತ್ತಿರುವುದೇನು? ಜನ್ನನ ಸಂದಿಗ್ಧ ಇಲ್ಲಿದೆ. ತಾಯಿಯ ಮಾತಿನ ಪಾಶಕ್ಕೆ ಬಲಿಯಾಗಿ ಯಶೋಧರ ಹಿಟ್ಟಿನ ಹುಂಜ ಬಲಿಕೊಟ್ಟ ನಂತರ ಸಂಕಲ್ಪ ಹಿಂಸೆಗಾಗಿ ನಾನಾ ಜನ್ಮ ತಾಳಿದಾಗಲೂ ಸುಖವಾಗಿದ್ದನೇ? ಇಡೀ ಕಾವ್ಯ ಸುಖ, ಸೌಂದರ್ಯ, ಹಿಂಸೆಗಳನ್ನು ಈ ಸಂದರ್ಭದಲ್ಲಿ ಮರುವ್ಯಾಖ್ಯಾನಕ್ಕೊಡ್ಡುವ ಪರಿ ಅಚ್ಚರಿ ಹುಟ್ಟಿಸುವಷ್ಟು ಗಾಢವಾಗಿದೆ.

ಮಾವುತನಿಗೆ ಮನಕೊಟ್ಟ ಮೇಲೆ ಲೋಕದ ಕಣ್ಣಿಗಷ್ಟೇ ಅಮೃತಿಮತಿ ಅಸುಖಿ. ಆಕೆಗಲ್ಲ. ಆಕೆಗೆ ಆನಂತರ ಯಶೋಧರನ ಪ್ರೀತಿಯ ಹೂವಿನೇಟೇ ಹಿಂಸೆಯಾಗುತ್ತದೆಯೇ ಹೊರತು, ಮಾವುತನ ಚಾಟಿಯೇಟಲ್ಲ. ಆತನ ಕುರುಡವು ಲೋಕಕ್ಕೇ ಹೊರತು ಆಕೆಗಲ್ಲ. ಲೋಕಕ್ಕೆ ಪೊಲ್ಲಮೆ, ಆಕೆಗೆ ಲೇಸೆನಿಸುತ್ತದೆ. ಅಭಯರುಚಿ ಪ್ರಾಣಿ ಹಿಂಸೆಯ ಬಗ್ಗೆ ಮಾತಾಡಿದರೆ, ಅಮೃತಮತಿ ಸಂಬಂಧಗಳ ನಡುವಣ ಹಿಂಸೆಯನ್ನು ಅನಾವರಣ ಮಾಡುತ್ತಾಳೆ. ಅಷ್ಟಾವಂಕ ಅಮೃತ ಮತಿಯರನ್ನು ಕೊಲ್ಲಲು ಹೊರಟ ಯಶೋಧರ ಮನಸ್ಸು ಬದಲಿಸುವಾಗ, ತನ್ನ ಸಮಾನರೊಂದಿಗೆ ಹೋರಾಡಿ ಕೊಲ್ಲುವುದು ಧರ್ಮ ಇದಲ್ಲ ಅಂದುಕೊಳ್ಳುವಾಗ ಮತ್ತೆ ಹಿಂಸೆ-ಅಹಿಂಸೆಯ ದ್ವಂದ್ವ ಅವನನ್ನು ಕಾಡುತ್ತದೆ. ಆದರೆ, ಒಮ್ಮೆ ಅಷ್ಟಾವಂಕನನ್ನು ಒಪ್ಪಿಕೊಂಡ ಮೇಲೆ ಅಮೃತಮತಿಗೆ ಯಾವ ದ್ವಂದ್ವವೂ ಕಾಡುವುದಿಲ್ಲ.

ಯಶೋಧರನೋ ತನ್ನ ಇನ್ನಿತರ ಜನ್ಮಗಳಲ್ಲೂ ಅಮೃತಮತಿಯ ಮೇಲಣ ದ್ವೇಷದಿಂದ ದುಃಖಿತನಾಗುತ್ತಾನೆ. ತನ್ನ ಅರಮನೆಯ ತನ್ನ ಹಾಸಿಗೆಯಲ್ಲೇ ಆಕೆ ಅಷ್ಟಾವಂಕನ ಜೊತೆ

ಬಾಳುವೆ ಮಾಡುವುದನ್ನು ನವಿಲಾಗಿ ನೋಡಿ ಸಂಕಟಪಟ್ಟುಕೊಳ್ಳುತ್ತಾನೆ. ಇಲ್ಲಿ ಮತ್ತೆ ವಿಶೇಷವೆನ್ನಿಸುವುದು ಮಗ ಯಶೋಮತಿಯ ಪ್ರತಿಕ್ರಿಯೆ. ಆತನಿಗೆ ತಾಯಿಯ ಈ ಪರಿಯ ಬಗ್ಗೆ ಯಾವ ವಿರೋಧವೂ ಇಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಆಕೆ ಕುಷ್ಠರೋಗಿಯಾಗಿರುವ ಕಾರಣಕ್ಕಾಗಿ ಮದ್ಯಮಾಂಸಗಳ ಪ್ರಮಾಣಗಳನ್ನು ಕಡಿಮೆ ಮಾಡುವಂತೆ ಸೂಚಿಸುತ್ತಾನೆಯೇ ಹೊರತು ಆ ಬಗ್ಗೆ ಆತನಿಗೆ ವಿರೋಧವಿಲ್ಲ. ತಾಯಿ ಬಯಸಿದಳೆಂದು ಕೋಣನ ಮಾಂಸವನ್ನು ಕಳುಹಿಸುತ್ತಾನೆ. ಕೋಣದ ಹಿಂದಣ, ಮುಂದಣ ಕಾಲುಗಳನ್ನು ಕಟ್ಟಿ, ಅಡಿಮೇಲಾಗಿ ತೂಗಾಡಿಸಿ ಕೆಳಬದಿಯಿಂದ ದೀಪದ ಜ್ವಾಲೆಯನ್ನು ಕೋಣದ ಹೆಗಲಿನ ಭಾಗಕ್ಕಷ್ಟೇ ತಾಗುವಂತೆ ಉರಿಸಿ, ಕೊಬ್ಬು ತುಂಬಿದ ಮಾಂಸವನ್ನು ಮಾತ್ರ ಅಲ್ಲಿಂದ ತೆಗೆದು ಅದರೊಳಗೆ ಉಪ್ಪು ಮೆಣಸು ಸಾಸಿವೆಯನ್ನು ತಳ್ಳಿ ಒಂದೇ ರೀತಿಯ ಉರಿಯಿಂದ ಬೇಯಿಸಿ, ಈ ಬೆಂದ ಮಾಂಸವನ್ನು ಮುಚ್ಚಿಟ್ಟು ತಾಯಿಗೆ ಕಳುಹಿಸುತ್ತಾನಂತೆ ಯಶೋಮತಿ! (೩:೬೯,೭೦) ಯಶೋಮತಿ ತಾನೂ ಯಥೇಚ್ಛ ಮಾಂಸಾಹಾರ ಸೇವಿಸುತ್ತಾನೆ. ಮಾಂಸದ ಆಸೆಗೆ ಗರ್ಭಿಣಿ ಆಡನ್ನೂ ಕೊಲ್ಲುತ್ತಾನೆ (೩:೫೫). ಬೇಟೆಗೆ ಹೋದಾಗ ಎದುರಾದ ಸುದತ್ತಾಚಾರ್ಯ ಮುನಿಗಳನ್ನು ನೋಡಿ ಸಿಟ್ಟಾಗಿ ನಾಯಿಗಳನ್ನು ಛೂ ಬಿಡುತ್ತಾನೆ. ವ್ಯಾಪಾರಿಯೊಬ್ಬ ಹೀಗೆ ಮಾಡುವುದು ತಪ್ಪು, ಅವರ ಚರಣಕ್ಕೆರಗಿ ಎಂದಾಗ, 'ಸ್ನಾನ ಮಾಡಿಯಾಗಲಿ ನೀರಲ್ಲಿ ಮುಳುಗಿಯಾಗಲಿ ಗೊತ್ತೇ ಇಲ್ಲದೆ ದುರ್ವಾಸನೆಯ ಮುದ್ದೆಗೆ ನಾನು ಮಣಿಯಬೇಕೇ?' ಎನ್ನುತ್ತಾನೆ.

'ಮಿಂದುಂ ಮುಳುಕಿಯು
ಮರಿಯದ ಮಣಕಿನ ಬಣಂಬೆಗಾನೆ ಱಗುವೆನೇ'

ಅಲ್ಲದೆ, 'ಕೆಟ್ಟನಾತವನ್ನು ಕಂಡ ಕಾರಣ ಇಂದಿನ ಬೇಟೆಯಲ್ಲಿ ಒಂದೇ ಒಂದು ಮೃಗ ಕೂಡ ಬೀಳಲಿಲ್ಲ' (೪:೫೦) ಎಂದು ಧಿಕ್ಕರಿಸುತ್ತಾನೆ. ಇದಲ್ಲದೆ, ತನ್ನ ತಂದೆ-ಅಜ್ಜಿಯರಿಗೆ ಬ್ರಾಹ್ಮಣರನ್ನು ಕರೆಸಿ ಶ್ರಾದ್ಧ ಮಾಡಿಸುತ್ತಾನೆ (೩:೫೨). ಈ ವಿವರಗಳು ಸೂಚಿಸುವುದೇನು? ಇಲ್ಲಿನ ಯಾವ ಆಚರಣೆಗಳೂ ಜೈನಮತಕ್ಕೆ ಸಂಬಂಧಿಸಿಲ್ಲ.

ಜನ್ನ ಇವರೆಲ್ಲರ ಬದುಕಿನ ಕ್ರಮವನ್ನು ಪಶುಪ್ರವೃತ್ತಿಯ ಬದುಕೆಂಬಂತೆ ವಿಪರೀತ ವರ್ಣನೆ ಮಾಡತೊಡಗುವಾಗಲೂ, ಅವರೆಲ್ಲ ದುಃಖಿಗಳೆಂಬಂತೆ ಚಿತ್ರಿಸಲಾಗುವುದಿಲ್ಲ. ಬದುಕಿನ ಈ ಪರಿಗಳಲ್ಲೇ ಸೊಗಸನ್ನೂ, ಸುಖವನ್ನೂ ಕಾಣುತ್ತಿರುವ ಇವರ ದೃಷ್ಟಿಯಲ್ಲೇ ತೊಂದರೆ ಇದೆ ಎಂಬ ನಿರೂಪಣೆಯ ಕಡೆ ಆತನ ಗಮನವಿದೆ. ಯಶೋಧರ-ಚಂದ್ರಮತಿಯರು ಹಲವು ಪ್ರಾಣಿಗಳಾಗಿ ಬಾಳುವ ಬದುಕಿಗೂ, ಈ ಮನುಷ್ಯರು ಬದುಕುವ ರೀತಿಗೂ ಯಾವ ವ್ಯತ್ಯಾಸವೂ ಕವಿಗೆ ಕಾಣುವುದಿಲ್ಲ. ಆದರೆ, ಇವರೆಲ್ಲ ಸುದತ್ತಾಚಾರ್ಯರ ಹೆಸರನ್ನು ಹೇಳಿದರೂ ಇವೆಲ್ಲದರಿಂದ ಮುಕ್ತಿ ಪಡೆಯುತ್ತಾರೆ ಎಂದು ಜನ್ನ ಹೇಳುವಾಗ, ಅದಕ್ಕೆ

ಯಾವ ಆಧಾರವೂ ಇರುವುದಿಲ್ಲ ಮತ್ತು ಈ ಸೂಕ್ಷ್ಮದ ಭಯ ಸೂಕ್ಷ್ಮ ಪ್ರಜ್ಞೆಯ ಕವಿಗಿರುವ ಎಲ್ಲ ಸಾಧ್ಯತೆಗಳೂ ಇವೆ. ಧರ್ಮಾಮೃತದಲ್ಲಿಯಂತೆ ಇಲ್ಲಿಯೂ ಈ ಯತಿಗಳು ಹಲವು ದಿನ ಸ್ನಾನವಿಲ್ಲದೆ ದುರ್ವಾಸನೆಯಿಂದಿರುವ ಬಗ್ಗೆ, ಆ ಕುರಿತ ಟೀಕೆಯ ಬಗ್ಗೆ ಸ್ಪಷ್ಟೀಕರಣ ಕೊಡುವ ಕವಿಯ ಧಾವಂತದಲ್ಲಿ ಇದನ್ನು ಗುರುತಿಸಬಹುದು.

ಹೀಗೆ ಸಮರ್ಥಿಸಲು ಕವಿ ಪಡುವ ಕಷ್ಟ ಈ ಪದ್ಯದಲ್ಲಿ ಎದ್ದು ಕಾಣುತ್ತದೆ.

ತನುವಾರ್ಗಮಶುಚಿ ಶುದ್ಧಾ
ತ್ಮನೆ ಶುಚ ಕಾಗೆಯವೊಲೇನೊ ಮಿಂದವನೇಂ ಶು
ದ್ಧನೆ ಸಂಸ್ಕಾರ ಶತೇನಾ
ಪಿನ ಗೂಥಃ ಕುಂಕುಮಾಯತೇ ಎಂದಜೆಯಾ (೪:೫೧)

ಹೀಗೆ ಇಡೀ ಕಾವ್ಯ ತಾನೊಪ್ಪದ ಲೋಕದೃಷ್ಟಿಯ ಜೊತೆ ತಾನು ನಂಬುವ ಲೋಕ ದೃಷ್ಟಿಯು ಸಂಘರ್ಷಿಸುವ ಕಥಾನಕವಾಗಿದೆ. ಮಾರಿಯ ಆರಾಧಕರ ಪಶುಪ್ರವೃತ್ತಿಯೇ ಅಮೃತಮತಿಯ ಪ್ರವೃತ್ತಿಯೂ ಆಗಿ ಕವಿಗೆ ಕಾಣುವುದರಿಂದಲೇ, ತನ್ನ ಕಥಾನಾಯಕನ ಮೂಲಕ ಹಿಂಸೆಯ ಮರುವ್ಯಾಖ್ಯಾನ ಮಾಡ ಹೊರಡುವಾಗ ಅಮೃತಮತಿಯ ವಿಕ್ಷಿಪ್ತ ವ್ಯಕ್ತಿತ್ವವನ್ನು ಕಟ್ಟಲು ಕವಿ ಹವಣಿಸುತ್ತಾನೆ. ಆದರೆ, ಮತ್ತೆ ಅಮೃತಮತಿ ಆತನ ಕೈಯಿಂದ ಜಾರಿಕೊಳ್ಳುತ್ತಾಳೆ. ಮಾತ್ರವಲ್ಲ ಜೈನದಂತಹ ಎಲ್ಲಾ ಸಂಸ್ಥೀಕೃತ ಮತಗಳ ಕೈಗಳಿಂದ ಮಾರಿಯೂ ಜಾರಿ ಹೋಗುತ್ತಾಳೆ.

ಮಾರಿಯ ವರ್ಣನೆಯೊಂದಿಗೆ ಆರಂಭವಾಗುವ ಕೃತಿ ಮಾರಿಯ ಪರಿವರ್ತನೆಯೊಂದಿಗೆ ಮುಕ್ತಾಯಗೊಳ್ಳುತ್ತದೆ. ಅಮೃತಮತಿಯನ್ನು ನರಕಕ್ಕೆ ಅಟ್ಟುವ ಕವಿ, ಯಶೋಮತಿ, ಮಾರಿದತ್ತರು ಜೈನದ ತತ್ತ್ವಗಳನ್ನು ಒಪ್ಪಿಕೊಳ್ಳುವವರನ್ನಾಗಿ ಬದಲಿಸುತ್ತಾನೆ. ಇಲ್ಲಿ ಮತ್ತೆ ಕುತೂಹಲ ಹುಟ್ಟಿಸುವ ವಿಷಯವೆಂದರೆ, ಮಾರಿ ಸಸ್ಯಾಹಾರಿಯಾಗಿ ಬದಲಾಗುವುದು. ಕವಿ ಇಂತಹ ಬದಲಾವಣೆಯನ್ನು ಮಾಡುವ ಅಗತ್ಯವಾದರೂ ಏನಿತ್ತು ಅನ್ನಿಸದೇ ಇರದು. ಮಾರಿಯ ಹಾಗೂ ಮಾರಿ ಭಕ್ತರ ಮೇಲುಗೈಯ ದ್ಯೋತಕ ಇದಾಗಿರಬಹುದು ಎನಿಸುತ್ತದೆ. ಕೊನೆಗೂ ಮಾರಿಯನ್ನು ನಿರಾಕರಿಸಲಾಗುವುದಿಲ್ಲ. ಕನಿಷ್ಟ ಆಕೆ ಜೈನದ ಪ್ರಮುಖ ಲಕ್ಷಣವೊಂದನ್ನಾದರೂ ಒಳಗೊಳ್ಳುವವಳಾದರೆ ಅಷ್ಟರಮಟ್ಟಿಗೆ ತಮ್ಮ ಗೆಲುವು ಎಂದು ಭಾವಿಸುವ ಅಸಹಾಯ ಸ್ಥಿತಿಗೆ ಕವಿ ಒಳಪಟ್ಟಿರಬಹುದೇ? ಮಾರಿ ಪ್ರತ್ಯಕ್ಷಳಾಗಿ ಭಕ್ತರಿಗೆ ಹೇಳುವ ಮಾತುಗಳು ಇಂತಿವೆ :

ಪ್ರಜೆಯೆಲ್ಲಂ ಜಲಗಂಧ
ಸ್ರಜ ತಂಡುಲ ಧೂಪ ದೀಪ ಚರು ತಾಂಬೂಲ
ವ್ರಜದಿಂ ಪೂಜಿಸುವುದೇ ಜೀ
ವಜಾತದಿಂದೆನಗೆ ಬಲಿಯ ನಿತ್ತೊಡೆ ಮುನಿವೆಂ (೪:೭೩)

ಮಾರಿಯನ್ನು ಪೂಜಿಸಬೇಕು. ಆದರೆ ಬಲಿ ಕೊಡಬಾರದು, ಬಲಿಕೊಟ್ಟರೆ ತಾನು ಸಿಟ್ಟಾಗುತ್ತೇನೆ ಎಂದು ಆಕೆಯ ಬಾಯಿಯಿಂದಲೇ ಬೆದರಿಕೆಯನ್ನು ಒಡ್ಡಲಾಗುತ್ತದೆ. ಮಾರಿಯ ಹಿಂಸಾಪ್ರವೃತ್ತಿಗೆ ಜನ್ನ ಸೂಚಿಸುವ ಪರಿಹಾರವಿದು. ಲೌಕಿಕದ ಅಭೀಪ್ಸೆ-ಧರ್ಮದ ತಾತ್ವಿಕತೆಗಳ ತಿಕ್ಕಾಟಗಳು ಇಂತಹ ಸುಲಭ ಪರಿಹಾರದಲ್ಲಿ ಇಲ್ಲವೆಂಬುದು ಜನ್ನನಿಗೂ ಅರಿವಿದೆಯಾದರೂ ಆತ ತನ್ನ ಪ್ರಯತ್ನಗಳನ್ನು ಅಷ್ಟು ಸುಲಭವಾಗಿ ಬಿಡಲಾರದ ಕವಿ ಮತ್ತು ಈ ಎಲ್ಲಾ ಸಂಕೀರ್ಣತೆಗಳನ್ನು ಇಟ್ಟುಕೊಂಡು ಗೆಲ್ಲುವ ಕವಿ.

# ಕೇಳಯ್ಯ ಹುಲಿರಾಯ, ನಾನು ಮೆಟ್ಟಿದ ಭೂಮಿ ಬೆಳೆವುದು

ಆರ್. ತಾರಿಣಿ ಶುಭದಾಯಿನಿ

'ಗೋವಿನ ಹಾಡು' ಕನ್ನಡದ ಕಥನಗಳಲ್ಲಿ ಬಹುವಾಗಿ ಓದಿಸಿಕೊಂಡಿರುವಂತದ್ದು. ಅಲ್ಲಿ ಬರುವ ಪುಣ್ಯಕೋಟಿಯೆಂಬ ಹಸು, ಅರ್ಬುತನೆಂಬ ಹುಲಿಗಳು ಓದುಗರಿಗೆ ನಿರಂತರ ವಾಗಿ ಸಂಕೇತಗಳಾಗಿ ಒದಗುತ್ತ ಬಂದಿರುವುದನ್ನು ನೋಡಿದಾಗ ಅದೊಂದು ಉತ್ತಮ ಸಾಂಸ್ಕೃತಿಕ ಪಠ್ಯ ಎಂದು ಒಪ್ಪಬಹುದಾಗಿದೆ. ಹಸು-ಹುಲಿಗಳು ವೈರುಧ್ಯದ ಅಂಶಗಳನ್ನು ಹೊಂದಿರುವ ಎರಡು ಪ್ರಾಣಿ ಸಂಕೇತಗಳು. ಅವುಗಳ ದ್ವಂದ್ವಾತ್ಮಕ ಸ್ವರೂಪಗಳ ಕಾರಣ ದಿಂದಲೇ ಅವು ಕಾಲದ ವಿಶ್ಲೇಷಣೆಗೊಳಪಡುವ ಸಂದರ್ಭದಲ್ಲಿ ನಿರಂತರ ಸಂಕೇತಗಳಾಗುವ ಅವಕಾಶ ಹೊಂದಿವೆ. ಅಲ್ಲದೆ ಪಠ್ಯದ ನೇಯ್ಗೆಯನ್ನು ನೋಡಿದರೆ, ಎರಡು ಧ್ರುವಗಳ ಇರುವಿಕೆಯ ಒತ್ತಡವನ್ನು ಸೂಚಿಸುವಂತಿದೆ. ಹೀಗಿರುವಲ್ಲಿ ಕಾಲ-ದೇಶಗಳ ಸಾಂದರ್ಭಿಕ ಒತ್ತಡಗಳು, ಸಂಸ್ಕೃತಿ ಮತ್ತು ಸಮಾಜದ ಪುನಾರಚನೆಯನ್ನು ಮಾಡುವಂತಹ ಒಳನೋಟಗಳ ಹುಡುಕಾಟದಲ್ಲಿರುತ್ತ ವೈರುಧ್ಯಗಳ ಸ್ಥಿತಿಯನ್ನು ತಮ್ಮ ತಮ್ಮ ನೆಲೆಗಟ್ಟಿನಲ್ಲಿ ಅನುಸಂಧಾನ ಮಾಡುವ ಸಾಧ್ಯತೆಗಳಿರುತ್ತವೆ. ಸಂಸ್ಕೃತಿ ಪಠ್ಯಗಳಲ್ಲಿರಬಹುದಾದ ಬಹುಮುಖತ್ವವನ್ನು ಕಡೆಗಣಿಸಿದೆ, ಬೇರೆ ಬೇರೆ ನೆಲೆಗಳಿಂದ ಪಠ್ಯವನ್ನು ನೋಡುವುದರಿಂದ ಅದರ ಅರ್ಥ ಮತ್ತು ಸಮಕಾಲೀನ ಸಂದರ್ಭಕ್ಕೆ ಒಗ್ಗುವ ಗುಣಗಳನ್ನು ವ್ಯಾಪಕವಾಗಿ ಹಿಗ್ಗಿಸಿಕೊಳ್ಳುವ ಅವಕಾಶಗಳು ಇರುತ್ತವೆ. ಪುನರ್ ಪರಿಶೀಲನೆಯ ಕ್ರಮಗಳಾದರೋ ಸಾಮಾಜಿಕ, ಸಾಂಸ್ಕೃತಿಕ ಪಲ್ಲಟಗಳ ಕಾರಣಗಳಿಂದಲೇ ಪ್ರೇರಿತವಾಗುತ್ತವೆಯಲ್ಲವೆ? ಈ ಹಿನ್ನೆಲೆಯಲ್ಲಿ 'ಗೋವಿನ ಹಾಡು' ಕಥನವು ಬೇರೆ ಬೇರೆ ನೆಲೆಗಳಿಂದ ವಿಶ್ಲೇಷಣೆಗೊಳಪಡುತ್ತಾ ಬಂದಿರುವುದು ಗಮನಾರ್ಹ. ಓದುಗರ ಓದು ಕಾಲ ದೇಶಗಳ ಒತ್ತಡಗಳಿಗೆ ಪಕ್ಕಾಗಿ ತಮ್ಮದೇ ಆದ ಧೋರಣೆಗಳನ್ನು ಹೊಂದಿರುವ ಸಾಧ್ಯತೆಗಳನ್ನೂ ಈ ಕಥನ ಹೇಳುತ್ತ ಇರುವುದು ಕುತೂಹಲ ಹುಟ್ಟಿಸುತ್ತದೆ.

ಸಾಮಾನ್ಯವಾಗಿ, ಮೊದಲ ಓದಿನಲ್ಲಿ 'ಗೋವಿನ ಹಾಡು' ಒಂದು ಶಿಶು ಕವನವಾಗಿ ಓದಲ್ಪಡುತ್ತದೆ. ಹಸುವಿನ ಮೇಲೆ ಎರಗಲು ಬಂದ ಹುಲಿ ಕ್ರೂರಿಯಾಗಿದ್ದು, ಹಸುವಿನ 'ಸತ್ಯವೇ ನಮ್ಮ ತಾಯಿ-ತಂದೆ, ಸತ್ಯವೇ ನಮ್ಮ ಬಂಧು ಬಳಗ' ಎಂಬ ನೀತಿಯಿಂದ ಅದರ ಮನಸ್ಸು ಪರಿವರ್ತನೆಗೊಂಡು ಸಾಯುತ್ತದೆ. ನೀತಿ ಮತ್ತು ಕಲೆಯು ನೀಡಬಹುದಾದ ರಂಜನೆಯು ಮೊದಲ ಓದಿಗೆ ಸಿಕ್ಕು ಬಿಡುತ್ತದೆ.

ಕಥೆ ಇಲ್ಲಿಗೆ ಮುಗಿಯುವುದಿಲ್ಲ. ಪುನರ್‌ಪರಿಶೀಲನೆಗಳು, ಪುನರ್‌ಓದುಗಳು ಕಾವ್ಯದ ಅರ್ಥವನ್ನು ಸದಾ ನಿರಚನೆಗೊಳಿಸುತ್ತಿರುತ್ತವೆ ಮತ್ತು ಹೊಸ ಅರ್ಥಗಳನ್ನು ಸ್ಥಾಪಿಸುತ್ತಾ ಹೋಗುತ್ತವೆ. ಸಾಂಸ್ಕೃತಿಕ ಪಲ್ಲಟಗಳ ಕಾಲದಲ್ಲಿಯಂತೂ ಈ ಪ್ರಕ್ರಿಯೆ ಸ್ಫೋಟಕವೆಂಬಂತೆ ಘಟಿಸುತ್ತಾ ಇರುತ್ತದೆ. ಸ್ಥೂಲವಾದ ಅರ್ಥ ಅನೇಕ ಸ್ತರಗಳಲ್ಲಿ ಬಿಚ್ಚಿಕೊಳ್ಳಲಾರಂಭಿಸುತ್ತದೆ. ಕಾವ್ಯದ ಸಾಲುಗಳಲ್ಲಿರುವ ಮೌನದ ದನಿ, ನಿರೂಪಣಾ ದನಿಯ ಸೂಕ್ಷ್ಮ ಅಭಿವ್ಯಕ್ತಿಯ ಕಾಕು ಮತ್ತು ಕೇಂದ್ರಗಳ ಬದಲಾವಣೆ (ಅಂದರೆ ಹುಲಿ-ಹಸು, ಹಸು-ಹುಲಿ, ಹೀಗೆ ಮಾಡಿ ಕೊಂಡಾಗ) ಇತ್ಯಾದಿಗಳು ಬೇರೆ ಆಯಾಮಗಳನ್ನು ಕೊಡುವ ಸಾಧ್ಯತೆಗಳಿರುತ್ತವೆ. ಆಗ ಕಥೆ ಹೊಸದಾಗಿ ಪ್ರಾರಂಭವಾಗುವಂತೆ ಕಾಣುತ್ತದೆ.

ಗೋವಿನಹಾಡನ್ನು ಓದುವ ಹೊತ್ತಿನಲ್ಲೇ ಅದಕ್ಕೆ ಸುದೀರ್ಘವಾದ ಓದಿನ ಇತಿಹಾಸ ಇದೆ ಎನ್ನುವುದನ್ನು ಗಮನಿಸಬೇಕು. ಕನ್ನಡ ಸಂಸ್ಕೃತಿಯ ಪಠ್ಯ ಎಂದು ಪರಿಗಣಿಸಲಾಗಿರುವ ಕಥನ ಇದಾಗಿರುವುದರಿಂದ ಪ್ರತಿಯೊಂದು ಓದಿಗೂ ಆಯಾ ಕಾಲದ ಸಾಮಾಜಿಕ ಸಾಂಸ್ಕೃತಿಕ ಒತ್ತಡಗಳಿವೆ ಎನ್ನುವುದು ಮುಖ್ಯವಾಗಿರುತ್ತದೆ. ಹುಲಿಯನ್ನು ಕೇಂದ್ರವಾಗಿರಿಸಿಕೊಂಡ ಓದುಗಳು ಮತ್ತು ಹಸುವನ್ನು ಕೇಂದ್ರವಾಗಿರಿಸಿಕೊಂಡ ಓದುಗಳು ಎಂದು ಇವನ್ನು ಸ್ಥೂಲವಾಗಿ ವಿಭಜಿಸಬಹುದಾದರೆ, ಪ್ರತಿಯೊಂದು ಓದಿಗೂ ನಾನು ಮೇಲೆ ಹೇಳಿದ ಕಾರಣ ಗಳಿರುವುದು ಸ್ಪಷ್ಟ. ಹುಲಿ-ಹಸುವಿನ ಆದ್ಯತೆಗಳನ್ನು ಮಾಡಿಕೊಳ್ಳುವುದರ ಮೂಲಕವೇ ಒಂದು ತಾತ್ವಿಕ ನಿಲುವನ್ನು ಪ್ರತಿಪಾದಿಸುವ ಯತ್ನಗಳು ನಡೆದಿರುತ್ತವೆ. ಈ ಕಾರಣದಿಂದಲೇ ಓದುಗರನ್ನು ಪ್ರಭಾವಿಸಿರುವ ಅಂಶಗಳಲ್ಲಿ ಒತ್ತಾಯ ಮತ್ತು ರಾಜಕೀಯ ಪ್ರೇರಣೆಗಳು ಎದ್ದು ಕಾಣುತ್ತವೆ.

ಪುಣ್ಯಕೋಟಿಯನ್ನು ಕೇಂದ್ರವಾಗಿಟ್ಟುಕೊಂಡು ಓದುವ ಓದಿನಲ್ಲಿ ಪುತಿನ ಆ ಕಥನದ ಮೌಲ್ಯ ವಿವೇಚನೆ ಮಾಡುತ್ತಾರೆ. ಆ ಕಥಾಸಂವಿಧಾನದಲ್ಲಿ ಸಾಂಸ್ಕೃತಿಕ ಮತ್ತು ರಾಜಕೀಯ ಅಂಶಗಳನ್ನು ಗುರುತಿಸಲು ಬಯಸುತ್ತಾರೆ. ಗಾಂಧೀಜಿ ಬಳಸಿದ ಯಶಸ್ವೀ ಮಾದರಿಗಳಲ್ಲಿ ಅಹಿಂಸೆ ಮತ್ತು ಸತ್ಯಾಗ್ರಹಗಳು ಮುಖ್ಯವಾದವು. ಹಿಂಸೆಯು ಅಹಿಂಸೆಯ ಪ್ರತಿರೋಧದಿಂದ ಸತ್ಯಾಗ್ರಹಗಳು ಮುಖ್ಯವಾದವು. ಹಿಂಸೆಯು ಅಹಿಂಸೆಯ ಪ್ರತಿರೋಧದಿಂದ ದಮನ ಗೊಳ್ಳುತ್ತದೆ ಹಾಗೂ ತನ್ನನ್ನು ತಾನು ಹಿಂಸೆ ಮಾಡಿಕೊಳ್ಳುವ ಕ್ರಮವು ಹಿಂಸೆಯ ಜಿಗುಟು ತನವನ್ನು ಕಡಿಮೆ ಮಾಡುತ್ತದೆ. ಇದನ್ನು ಗಾಂಧಿ ಸೌಮ್ಯ ಮನಃಪರಿವರ್ತನಾ ವಿಧಾನವಾಗಿ ಬಳಸಿದರು. ಆಧ್ಯಾತ್ಮಿಕ ಮೌಲ್ಯಗಳಾಗಿರುವ ಇವನ್ನು ಅವರು ರಾಜಕೀಯ ಮೌಲ್ಯಗಳನ್ನಾಗಿ ಪರಿವರ್ತಿಸಿಕೊಂಡರು. ಇದರಿಂದ ಅಹಿಂಸೆಯ ಮತ್ತು ಸತ್ಯಾಗ್ರಹದ ಮೌಲ್ಯಗಳು ಸಾಮಾಜಿಕ ಜೀವನದ ಪರಿಧಿಯಲ್ಲಿ ಹೆಚ್ಚಿನ ವ್ಯಾಪ್ತಿಯನ್ನು ಪಡೆದುಕೊಂಡವು. ಇಲ್ಲಿ ಒಂದು ಅಂಶ ಗಮನಿಸಬೇಕು. ಅದೆಂದರೆ, ಸ್ವಯಂಹಿಂಸೆ ಮತ್ತು ಸತ್ಯಾಗ್ರಹಗಳ ಅಹಿಂಸಾ ನಿಲುವುಗಳನ್ನು ಗಾಂಧೀಜಿ ರಾಜಕೀಯ ಅಸ್ತ್ರಗಳಾಗಿ ಬಳಸುತ್ತಿದ್ದ ಸಂದರ್ಭ ದಲ್ಲಿಯೇ ಅವರ ಸಮಕಾಲೀನ ರಲ್ಲಿ ಹಲವರು ಉಗ್ರಗಾಮಿ ನಿಲುವುಗಳನ್ನು ಇಟ್ಟುಕೊಂಡು ಹಿಂಸಾತ್ಮಕ ಧೋರಣೆಗಳಿಂದ

ಹಕ್ಕೊತ್ತಾಯ ಮಾಡುತ್ತಿದ್ದರು. ಅವರ ಹೋರಾಟಗಳು ಸಫಲವಾಗದೇ ಗಾಂಧೀಜಿಯವರ ಅಹಿಂಸಾತ್ಮಕ ಹೋರಾಟಗಳು ಯಶಸ್ವಿಯಾದುದು ಹಿಂಸೆಯನ್ನು ಅದರ ವಿರೋಧಿ ಭಾವದಿಂದ ಎದುರುಗೊಂಡಿದ್ದರಿಂದಲೇ. ಪುತಿನ ಅವರಿಗೆ ಈ ಸಾರ್ಥಕತೆಯು ಸೂಕ್ತವಾಗಿದೆ. ಅವರ ಮುಂದೆ ಇದ್ದ ಗಾಂಧೀ ಮಾರ್ಗದ ಸತ್ಯಾಗ್ರಹ ಮತ್ತು ಸಜ್ಜನಿಕೆಯ ವಿಧಾನಗಳು ಪುತಿನ ಅವರಿಗೆ ಮುಖ್ಯವಾಗುವುದರಿಂದ ಹಸುಕೇಂದ್ರಿತ ನೋಟವು ಪ್ರಸ್ತುತವಾಗಿದೆ. ಸತ್ಯಕ್ಕಾಗಿ ನಿಲ್ಲುವ ಹಸು, ಹುಲಿಯ ಮನಸ್ಸು ಪರಿವರ್ತನೆ ಮಾಡಬಲ್ಲ ಚೈತನ್ಯ ಹೊಂದಿರುತ್ತದೆಂದು ಅವರು ಭಾವಿಸುತ್ತಾರೆ. ಅಲ್ಲದೆ ಪುನರುಜ್ಜೀವನ ಕಾಲದ ಮೌಲ್ಯಗಳಲ್ಲೊಂದಾದ ಆಧ್ಯಾತ್ಮಿಕ ಶಕ್ತಿಯು ಜೀವವನ್ನು ವಿಶ್ವಪ್ರಜ್ಞೆಗೆ ಮುಟ್ಟಿಸುವ ಸತ್ವವುಳ್ಳದ್ದು ಎಂದು ಪುತಿನ ಗುರುತಿಸುತ್ತಾರೆ. ಆ ಮೂಲಕ ರಾಜಕೀಯ ಆಶಯಗಳ ರಾಮರಾಜ್ಯದ ಪರಿಕಲ್ಪನೆಯತ್ತ ಪಠ್ಯದ ಓದನ್ನು ತಂದು ನಿಲ್ಲಿಸುತ್ತಾರೆ. ಅವರು ಮಾತುಗಳಲ್ಲಿ ಹೀಗೆ ವ್ಯಕ್ತವಾಗಿದೆ : "....ಅದು ಅಹಿಂಸೆಯ ಶುದ್ಧ ಮತ್ತು ಆವಿರ್ಭೂತವಾಗಲಿರುವ ಸ್ಥಿತಿ-ಮಾನವ ಇನ್ನೂ ಪಡೆದುಕೊಳ್ಳಬೇಕಾದದು, ಬಹುಶಃ ಗಾಂಧೀಜಿ ಕನಸು ಕಂಡ ಸ್ಥಿತಿ. ವ್ಯಕ್ತಿ ಪ್ರಜ್ಞೆ ಮತ್ತು ವ್ಯಕ್ತಿತ್ವದ ಪ್ರತಿಭಟನೆಯನ್ನು ದಾಟಿ ವಿಶ್ವಪ್ರಜ್ಞೆಗೆ ಏರಲಿರುವ ದಿವ್ಯಪ್ರಯತ್ನ.....ತಮ್ಮನ್ನು ಹಿಂಸಿಸುವುದರ ಬಗೆಗೆ ಇಂತಹ ಸೌಮ್ಯ ಸುಂದರ ನಡತೆ ಹುತಾತ್ಮರಿಗಿರುವುದು ಅಪೂರ್ವ...." (ಪುತಿನ ಸಮಗ್ರಗದ್ಯ, ಪು. ೮೬೧-೨).

ಹಸುಕೇಂದ್ರವನ್ನು ಬದಲಾಯಿಸಿ ಹುಲಿ ಕೇಂದ್ರದ ನೆಲೆಯಲ್ಲಿ ಪಠ್ಯವನ್ನು ಓದುವಾಗ ಧೋರಣೆಗಳು ಭಿನ್ನವಾಗುತ್ತವೆ. ಈ ದೃಷ್ಟಿಕೋನದಿಂದ ಕಾಣುವ ರಾಜಕಾರಣವು ಸಾಂಸ್ಕೃತಿಕ ವಾದುದು. ಒಂದು ಸಂಸ್ಕೃತಿಯು ಉಜ್ವಲ ಎನ್ನುವಂತೆ ಮಾಡಿ, ಇನ್ನೊಂದು ಸಂಸ್ಕೃತಿಯನ್ನು ಕೀಳುಗಳೆದು ನೋಡುವ ವಿಧಾನ ಎನ್ನಿಸುವಂತೆ ಮಾಡುತ್ತದೆ. ಮೊಗಳ್ಳಿ ಗಣೇಶ್ ಮತ್ತು ಹಿರೇಮಠ ಅವರುಗಳು ಎತ್ತಿಕೊಳ್ಳುವ ಚರ್ಚೆಯ ವಿಷಯ ಇದು. ಹಸು ಗುಂಪಿನ ಹಸಿವನ್ನು ಮುಂದು ಮಾಡುವ ವಾದವು ಹುಲಿಯ ಹಸಿವನ್ನು ಪರಿಗಣಿಸು ವುದಿಲ್ಲವೇಕೆ? ಎಂಬುದು ಪ್ರಶ್ನೆಯಾಗುತ್ತದೆ. ಹುಲಿಯು ಹಸುವನ್ನು ತಿನ್ನಲು ಬಯಸಿದ್ದೇ ಅಪರಾಧ ಎನ್ನುವಂತೆ ಕೊನೆಯಲ್ಲಿ ನೆಗೆದು ಬಿದ್ದು ಸಾಯುವಂತೆ ಮಾಡುವುದೇಕೆ? ಹಸು-ಹುಲಿಗಳೆರಡೂ ದಟ್ಟಕಾನನದಲ್ಲಿ ವಾಸಿಸುವ ಪ್ರಾಣಿಗಳು. ಹುಲಿಯ ಆಹಾರ ಹಸು. ಹಸುವಿನ ಸಂತತಿಯನ್ನು ಉಳಿಸುವ ಭರದಲ್ಲಿ ಹುಲಿ ತನ್ನ ಪ್ರಕೃತಿ ಸಹಜ ಆಹಾರದ ಆಯ್ಕೆಯನ್ನು ಬಿಟ್ಟುಕೊಡುವ ಸ್ಥಿತಿ ಉಂಟಾಗುವುದು ಸಾಂಸ್ಕೃತಿಕ ರಾಜಕಾರಣದ ಧೋರಣೆಗಳಿಂದ ಮತ್ತು ರಾಜಕಾರಣದ ಹುನ್ನಾರಗಳು ನ್ಯಾಯ ನಿರ್ಣಯವನ್ನು ಏಕಪಕ್ಷೀಯವಾಗಿ ಮಾಡಲೆತ್ನಿಸುತ್ತಾ ತಮ್ಮದನ್ನು ಹೇರಲು ಬಯಸುತ್ತಿವೆ. ಅಲ್ಲಿರುವ ನ್ಯಾಯ ನಿರ್ಣಯಕ್ಕೆ ಪ್ರಮಾಣಗಳು ದೊರೆಯುತ್ತಿ ರುವುದು. ಹಸುವಿನ ಕಡೆಯಿಂದ ಹೊರತಾಗಿ ಹುಲಿಯ ಕಡೆಯಿಂದಲ್ಲ. ಹಸುವಿಗೆ ಕರುಣೆ ತೋರಲು ಭೂಮಿಕೆ ಸಜ್ಜಾಗಿರುವಂತೆ ಸತ್ಯದ ಬಗೆಗಿನ ಅದರ ಪ್ರೇಮವನ್ನು ಹೇಳ ಲಾಗಿದೆ. ಇದು ಒತ್ತಾಯಪೂರ್ವಕವೆನಿಸುತ್ತದೆ. ಹುಲಿ ಕೇಂದ್ರಿತ ಈ ದೃಷ್ಟಿಕೋನವು ಹೊಳೆಯಿಸುವ

ಪ್ರಧಾನ-ಅಧೀನ ಸಂಸ್ಕೃತಿಗಳ ಸಂಘರ್ಷಮಯ ಸ್ಥಿತಿ ಮತ್ತು ಒಳಗೆ ಹುದುಗಿರುವ ರಾಜಕಾರಣವನ್ನು ಬಯಲು ಮಾಡುವ ಆಶಯ - ಇವು ಗೋವಿನ ಹಾಡು ಕಥನದ ವಿಕಲ್ಪಗಳನ್ನು ಸ್ಪಷ್ಟವಾಗಿಯೇ ಹೊರತೋರುವಂತೆ ಮಾಡುತ್ತಿವೆ.

ಮತ್ತೆ ಹಸುಕೇಂದ್ರಿತ ದೃಷ್ಟಿಕೋನಕ್ಕೆ ಬರೋಣ. ಹಸು-ಹುಲಿಗಳನ್ನು ಲಿಂಗರಾಜಕಾರಣದ ಸಂದರ್ಭ(Context)ನಲ್ಲಿಟ್ಟು ನೋಡುವಾಗ ಹಸುವಿನ ಕಥನ ಒಂದು ಹೆಣ್ಣಿನ ನೆಲೆಯದ್ದಾಗಿ, ಸ್ತ್ರೀತ್ವ, ತಾಯ್ತನ ಮತ್ತಿತರ ಸ್ತ್ರೀ ಸಂಬಂಧಿತ ಅಂಶಗಳನ್ನು ಹೊಳೆಯಿಸುವುದಾಗುತ್ತದೆ. ಪಠ್ಯದ ಓದಿನಲ್ಲಿ ಹೆಣ್ತನವನ್ನು ಕುರಿತ ಪೂರ್ವಾಗ್ರಹಗಳು ಇರುವಂತೆಯೇ ಹೆಣ್ಣಿನ ವಿಶಿಷ್ಟ ಜೈವಿಕತೆಯ ನೆಲೆ ಮತ್ತು ಮನಸ್ಸಿನ ಸಂಕೀರ್ಣ ಲಯಗಳನ್ನು ಕುರಿತ ದನಿಗಳೂ ಕೇಳುತ್ತವೆ. ಲಿಂಗರಾಜಕಾರಣದ ಸಿಕ್ಕುಗಳನ್ನು ಬಿಡಿಸಿಕೊಂಡು, ಸ್ತ್ರೀತ್ವದ ಬಗೆಗೆ, ಮಾತೃತ್ವದ ಬಗೆಗಿನ ದನಿಗಳನ್ನು ಗುರುತಿಸಿಕೊಳ್ಳಬೇಕು. ಇದು ಕಷ್ಟಸಾಧ್ಯವಾದ ಕೆಲಸ. ಆದರೆ ಪ್ರಸ್ತುತ ಸಮಕಾಲೀನ ಸಾಮಾಜಿಕ ಸಂದರ್ಭಗಳ ಕಾಲದಲ್ಲಿಯೂ ಸ್ತ್ರೀ ಅಸ್ತಿತ್ವವನ್ನು ಮರು ಪರಿಶೀಲನೆಗೆ ಒಳಪಡಿಸುತ್ತ, ನಿಜವಾದುದನ್ನು ಸ್ಥಾಪಿಸಬೇಕಾದ ಸವಾಲುಗಳು ನಮ್ಮ ಮುಂದೆ ಇದ್ದೇ ಇರುವುದನ್ನು ನೆನಪಿಸಿಕೊಳ್ಳಬೇಕಾಗಿದೆ. ಹಾಗಾಗಿ ಗೋವಿನ ಹಾಡು ಕಥನವನ್ನು ಸೂಕ್ಷ್ಮಸ್ತರಗಳುಳ್ಳ ಪಠ್ಯವನ್ನಾಗಿ ನೋಡುವ ಅವಶ್ಯಕತೆ ಇದೆ ಎಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಪಠ್ಯವು ಧ್ವನಿಸುವ ರಾಜಕಾರಣದ ಅಂಶಗಳನ್ನು ಮೊದಲು ಚರ್ಚಿಸಿ, ನಂತರ ಅದರೊಳಗಿರುವ ಮೌನದನಿಗಳಲ್ಲಿ ಅಭಿವ್ಯಕ್ತವಾಗುವ ಸ್ತ್ರೀ ವಿಶಿಷ್ಟತೆಯನ್ನು ಗಮನಿಸುವ ಯತ್ನವನ್ನಿಲ್ಲಿ ಮಾಡಲಾಗಿದೆ.

ಕಥನವು ಆರಂಭವಾಗುವುದು ದಟ್ಟಕಾನನದ ವರ್ಣನೆಯಿಂದ. ಅದಕ್ಕೂ ಮೊದಲು 'ಧರಣಿ ಮಂಡಲ ಮಧ್ಯದೊಳಗೆ ಮೆರೆವು ದೈವತ್ತಾರು ದೇಶದಿ ಇರುವ ಕಾಳಿಂಗನೆಂಬ ಗೊಲ್ಲನ ಪರಿಯ' ಪ್ರಸ್ತಾಪ ಇದೆ. ಹತ್ತಾರು ಪ್ರಾಣಿಗಳು ಸ್ವಚ್ಛಂದವಾಗಿ ಕಾನನದಲ್ಲಿವೆ. ಆದರೆ ಗೋವುಗಳು ಮಾತ್ರ ಗೊಲ್ಲನ ಅಧೀನದ ತುರುದೊಡ್ಡಿಯಲ್ಲಿವೆ. ಈ ಪರಾಧೀನತೆ ಯನ್ನು ಒಪ್ಪಿಕೊಂಡು ಹೆಸರುಗಳನ್ನು ಹೊತ್ತ ಗಂಗೆ, ಗೌರಿ, ತುಂಗಭದ್ರೆ, ಅಂಗನಾಮಣಿ ಯರೆಲ್ಲ ಇದ್ದಾರೆ. ಈ ವಿರೋಧಾಭಾಸದೊಂದಿಗೆ ಕಥನ ಪ್ರಾರಂಭವಾಗುತ್ತದೆ. ಅನಂತರ ಹಾಲು ಕರೆಯುವ ಕ್ರಿಯೆಯ ವರ್ಣನೆ ಇದೆ. ಎಲ್ಲಾ ಹಸುಗಳನ್ನು ಪ್ರೀತಿಯಿಂದ ಕರೆಯುವ ಗೊಲ್ಲನ ಮುಂದೆ ಹಾಲು 'ಚೆಲ್ಲಿ ಸೂಸಿ ಅಲ್ಲಿ ತುಂಬಿತು ಬಿಂದಿಗೆ' ಎಂಬಂತೆ ತುಳುಕುತ್ತದೆ. ಹಾಲನ್ನು ಹಕ್ಕಾಗಿ ಮಾಡಿಕೊಳ್ಳುವ ಗೊಲ್ಲನ ಕ್ರಿಯೆ ಶೋಷಣೆಯಂತೆ ಕಾಣಿಸದೇ ಇರುವಂತೆ ಪಠ್ಯದ ಕಥನ ವಿವರಗಳನ್ನು ವಿಜೃಂಬಿಸುತ್ತದೆ.

ಪುತಿನ ತಮ್ಮ ಪ್ರಬಂಧದಲ್ಲಿ ಕಾಣುವಂತೆ ಕತೆಯು ಹೃದಯಸ್ಪರ್ಶಿಯಾಗಿದ್ದು, ಮಾತೃ ಪ್ರೇಮ ಮತ್ತು ವಾತ್ಸಲ್ಯ ಮುಂತಾದ ಮೂಲಭಾವಗಳಿಂದ ಸೊಗಸಾಗಿ ಚಿತ್ರಿಸಲ್ಪಟ್ಟಿವೆ. ಈ ಗುಣಗಳನ್ನು ಮನುಷ್ಯತ್ವಕ್ಕೇ ಅನ್ವಯಿಸುವ ಗುಣಗಳಾಗಿ ನೋಡದೆ, ಹೆಣ್ಣಿನ, ಅವಳ

ತಾಯ್ತನದ ಸ್ಥಿತಿಗೆ ಅಂಟಿಸುವುದು ಲಿಂಗರಾಜಕಾರಣದ ಪರಿಯೇ ಆಗುತ್ತದೆ. ಒಂದು ರೀತಿಯಲ್ಲಿ ಇದೊಂದು ಸೀಮಿತಗೊಳಿಸುವ ಧೋರಣೆ. ಹೆಣ್ತನ ಎಂದ ಕೂಡಲೇ ಕೆಲವೇ ಕೆಲವು ಗುಣಗಳಿಗೆ ಕಟ್ಟಿ ಹಾಕುವ ಹುನ್ನಾರವನ್ನು ನೋಡಬೇಕಾಗುತ್ತದೆ.

ಕಥನದ ತುಂಬ ಬರುವ ಜೈವಿಕ ಕುರುಹುಗಳನ್ನು ಸೂಚಿಸುವ ಪದಗಳಿರುವುದು ಗಮನಕ್ಕೆ ಬರುತ್ತದೆ. ಗೋವು, ತಾಯಿ, ಮೊಲೆ - ಈ ಕುರುಹುಗಳು ಜೈವಿಕ ನಿರ್ದೇಶನಗಳು. ಕಥನದ ಮೂಲ ಕ್ರೈಸಿಸ್ ನಿಂತಿರುವುದೇ ಪುಣ್ಯಕೋಟಿ ತನ್ನ ಮಗುವಿಗೆ ಹಾಲೂಡಿಸಿ ಬರುವೆ ಎಂದು ಕೇಳಿಕೊಳ್ಳುವ ಅಂಶದಲ್ಲಿ. ಮಗು ಹಾಲಿಗಾಗಿ ಕಾಯುತ್ತ ಇದೆ. ಈ ಜೈವಿಕ ಹೊಣೆಗಾರಿಕೆಯು ಹೆಣ್ಣಿನ ಮನಸ್ಸಿನಲ್ಲಿ ಸದಾ ಜಾಗೃತವಾಗಿರುವಂತೆ ಮಾಡುವ ಒತ್ತಡಗಳನ್ನು ನೋಡಬೇಕು. ಹಾಗೆಯೇ ತಾಯ್ತನದ ವೈಭವೀಕರಣವನ್ನು ಮಾಡುವ ಅಂಶಗಳನ್ನು ಗಮನಿಸಬೇಕು.

ಪುಣ್ಯಕೋಟಿ ಪ್ರವೇಶವಾಗುವುದು ಒಂದು ತೀವ್ರ ಸನ್ನಿವೇಶನದಲ್ಲಿ. ಹಸುಗಳೆಲ್ಲವೂ ಕೈತಪ್ಪಿ ಹೋಗಿವೆ ಎಂದು ಹುಲಿಯು ಆತಂಕ ಮತ್ತು ಚಡಪಡಿಕೆಯಲ್ಲಿರುವಾಗ ಪುಣ್ಯಕೋಟಿ ಬರುತ್ತಿದೆ;

ಕನ್ನೆ ಮಗನ ಪಡೆದ ಪಶುವು
ತನ್ನ ಕಂದನ ನೆನೆದುಕೊಂಡು
ಪುಣ್ಯಕೋಟಿಯೆಂಬ ಪಶುವು
ಚೆನ್ನಾಗಿ ತಾ ಬರುತ್ತಿರೆ.

ಹಸಿದ ಹೆಬ್ಬುಲಿಗೆ ಎದುರಾಗಿ ಕಂದನ ಕನಸು ಕಾಣುವ ತಾಯಿಯ ಪ್ರವೇಶವಾಗುವುದೇ ಒಂದು ಸಾಂದರ್ಭಿಕ ಕರುಣೆಯನ್ನು ಹುಟ್ಟಿಹಾಕುವಂತದ್ದು. ಹಸಿದ ಹುಲಿಯ ಹಾರಿ ಒಯ್ಯನೆ ತಿನ್ನುವೆನೆಂದು ಹೇಳುವಾಗ, ಪುಣ್ಯಕೋಟಿಯ ಕೊನೆಯ ಬೇಡಿಕೆ ಹೀಗಿದೆ :

ಒಂದು ಬಿನ್ನಹ ಹುಲಿಯರಾಯನೆ
ಕಂದನ್ನೈದನೆ ಮನೆಯ ಒಳಗೆ
ಒಂದು ನಿಮಿಷದಿ ಮೊಲೆಯಕೊಟ್ಟು
ಬಂದು ನಾನಿಲ್ಲಿ ನಿಲ್ಲುವೆ....

ಸಾವಿನ ಬಾಗಿಲ ಬಳಿ ನಿಂತ ಸನ್ನಿವೇಶದಲ್ಲಿಯೂ ಹಸುವು ನೆನೆಯುತ್ತಿರುವುದು ತನ್ನ ಹಾಲುಕೊಡುವ ಹೊಣೆಗಾರಿಕೆಯನ್ನು! ತನ್ನ ಕೊನೆಯ ಕರ್ತವ್ಯ ಅದೆಂದು ಭಾವಿಸಿದಂತೆ ಹುಲಿಯಲ್ಲಿ ಪ್ರಾಣದ ಅನುಮತಿ ಬೇಡುತ್ತಿದೆ. ಇದಕ್ಕಾಗಿ ಸತ್ಯದ ಮಾತನ್ನೂ ಮುಂದಿಡುತ್ತಿದೆ. ಇದರೊಂದಿಗೆ ತಾಯ್ತನವನ್ನು ಸತ್ಯದ ಮಾತಿನೊಂದಿಗೆ ಬೆಸೆದು ಸ್ಥಿರಗೊಳಿಸುತ್ತಿದೆ. ಹಾಲು ಕೊಡುವ, ಕಂದನನ್ನು ನೋಡಿಕೊಳ್ಳುವ ಹೊಣೆಗಾರಿಕೆಯಿಂದ ತಾಯ್ತನಕ್ಕೆ ಬಾಧ್ಯಸ್ತವಾಗಿಸುವುದು ಜೈವಿಕ ಒತ್ತಡ. ಅದನ್ನು ಮಮತೆ, ಕರುಣೆಯ ಗುಣಗಳಿಂದ ಮಾತೃವಾತ್ಸಲ್ಯವನ್ನು ತೋರಬೇಕಾದ ಒತ್ತಡಗಳಲ್ಲಿ ಇರಿಸುವುದು ಧೋರಣೆಯ ಸಂಕೇತ. ಪುಣ್ಯಕೋಟಿಯ ಕಂದ

ಕೇಳುವ ಪ್ರಶ್ನೆಯನ್ನು ನೋಡಿ, 'ಆರ ಮೊಲೆಯನು ಕುಡಿಯಲಮ್ಮ?, ಆರ ಸೇರಿ ಬದುಕಲಮ್ಮ?' ಎಂದು. ತಾಯಿಯನ್ನು ಕರು ಜೈವಿಕ ಪೂರೈಕೆಯ ವಸ್ತುವಾಗಿ ನೋಡುತ್ತಲಿದೆ.

ಈ ಬಗೆಯ ಸ್ಥಿರೀಕರಣಗಳು ಮತ್ತು ಹೊಣೆಗಾರಿಕೆಗಳನ್ನು ರಾಜಕಾರಣದ ಅಂಶಗಳೆಂಬಂತೆಯೇ ನೋಡಬೇಕಾಗುತ್ತದೆ. ತಾಯ್ತನ ಮತ್ತು ಹೆಣ್ತನಗಳಿಗೆ ಕೆಲವೇ ಕೆಲವು ಸ್ಥಿರಗೊಂಡ ಭಾವಗಳಿಲ್ಲ. ಅದನ್ನು ಮೀರಿ ಅವು ಕ್ರಿಯಾಶೀಲ ಸತ್ವಗಳನ್ನು ಹೊಂದಿರುತ್ತವೆ. ವ್ಯಕ್ತಿ ವಿಶಿಷ್ಟತೆಯು ಚೌಕಟ್ಟುಗಳನ್ನು ಮೀರಿ ಬೆಳೆಯುವಲ್ಲಿ ಸದಾ ಕ್ರಿಯಾಶೀಲವಾಗಿರುತ್ತದೆ. ಈ ನಿಟ್ಟಿನಲ್ಲಿ ಪಠ್ಯದ ಓದನ್ನು ಸ್ವಲ್ಪ ವಿಸ್ತರಿಸಿಕೊಂಡು ಆವರಣಗಳನ್ನು ಸರಿಸಿ ಓದಿದರೆ, ತಾಯ್ತನದ ಸಂಕೀರ್ಣಲಯಗಳನ್ನು ಕಾಣಬಹುದು.

ಪುಣ್ಯಕೋಟಿಯು ತಾಯಿಯೂ ಹೌದು, ಹೆಣ್ಣೂ ಹೌದು. ಅದು ಸ್ವಯಂಪೂರ್ಣತೆಯನ್ನು ಸಾಧಿಸಿಕೊಳ್ಳುವುದು ಈ ವ್ಯಕ್ತಿತ್ವಗಳಿಂದಲೇ. ಅದನ್ನು ದುರ್ಬಲ ಶಕ್ತಿಯೆಂದು ತೋರುವ ಕರುಣಾಜನಕ ಪ್ರಸಂಗಗಳನ್ನು ಮೀರಿ ಕಥನದೊಳಗಿನ ಮೌನದನಿಗಳು ಬೇರೇನನ್ನೋ ಸೂಚಿಸುತ್ತಿವೆ.

ಆದಿಮ ಸಮಾಜಗಳಲ್ಲಿ ಪ್ರಚಲಿತವಿತ್ತು ಎಂದು ಹೇಳಲಾದ ಮಾತೃಪ್ರಧಾನ ಸಂಸ್ಕೃತಿಯನ್ನು ಪುನಃ ಅಧ್ಯಯನ ಮಾಡಲಾಗುತ್ತಿದ್ದು, ಫಲವಂತಿಕೆಯ ಸಂಕೇತವಾದ ಸಮೃದ್ಧಿ ಮತ್ತು ವ್ಯಕ್ತಿತ್ವದ ಸ್ವಯಂಪೂರ್ಣತೆಯನ್ನು ವಿಶೇಷವಾಗಿ ಗುರುತಿಸಲಾಗುತ್ತಿದೆ. ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಕೋಸಾಂಬಿಯಂತಹ ಭೌತವಾದಿ ಚಿಂತಕರು ಚಾರಿತ್ರಿಕವಾಗಿ ಮಹತ್ವ ಪಡೆಯಬಲ್ಲ ಅಂಶಗಳನ್ನು ಈ ನಿಟ್ಟಿನಲ್ಲಿ ತೋರಿಸಿದ್ದಾರೆ. ಫಲವಂತಿಕೆಯ ಮಿಥಿಕಗಳು ಸಾರುವಂತೆ ಜೈವಿಕ ವಿಶಿಷ್ಟತೆಗಳು ಹೊರಗೆ ಕಾಣುತ್ತವೆ. ಶಕ್ತಿ ಸಾಮರ್ಥ್ಯಗಳು ಅನೂಹ್ಯವಾಗಿ ಬಲಗೊಂಡು ಗುಪ್ತಗಾಮಿನತ್ವದಿಂದ ಅಮೂರ್ತ ನೆಲೆಯಲ್ಲಿ ಪ್ರವಹಿಸುತ್ತಿರುತ್ತವೆ. ಹಲವಾರು ಜನಪದ ಕಾವ್ಯಗಳಲ್ಲಿಯೂ ಹೆಣ್ತನ ಮತ್ತು ತಾಯ್ತನಗಳನ್ನು ಸಂಕೀರ್ಣಲಯಗಳ ಸ್ವರೂಪದಲ್ಲಿ ಗ್ರಹಿಸಲಾಗಿದೆ. ಅಂದರೆ ಏಕಶಿಲಾರೂಪದ ಗ್ರಹಿಕೆಯಾಗಿ ಹೆಣ್ಣಿನ ವ್ಯಕ್ತಿತ್ವವನ್ನು ನೋಡದೆ ಇರುವುದು. ಸಾಕುವ, ಸಲಹುವ ಹೊಣೆಗಾರಿಕೆಗಳು ಹಾಗೂ ಮೃದುತ್ವಗಳ ಆವರಣಗಳನ್ನು ಮೀರಿ ಒಳಗಿನ ವ್ಯಕ್ತಿತ್ವದ ಸತ್ವವನ್ನು ನೋಡುವ ದಿಸೆಯಲ್ಲಿ ಲಂಕೇಶರ 'ಅವ್ವ' ಕವನದ ತಾಯಿಯ ಸ್ವರೂಪ ನಮಗೆ ಕೊಂಚ ಸಹಾಯ ಮಾಡಿತು. ಬನದ ಕರಡಿಯಂತಹ, ಕಪ್ಪು ನೆಲದಂತಹ ವ್ಯಕ್ತಿತ್ವದ ಚಹರೆಗಳು ತಾಯಿಯಲ್ಲಿ ಇರುವುದು ಸಹಜ ಎನ್ನಿಸುತ್ತದೆ. ತಾಯ್ತನದಲ್ಲಿ ವಾತ್ಸಲ್ಯವು ಒಂದು ಮುಖ್ಯ ಭಾವವಾದರೆ, ಅದಕ್ಕೆ ಹಲವಾರು ಸಂಚಾರಿ ಭಾವಗಳಿರಬಹುದಾದ ಸಾಧ್ಯತೆಗಳನ್ನು ಹುಡುಕಬೇಕಾಗುತ್ತದೆ. ಪುಣ್ಯಕೋಟಿಯೆಂಬ ತಾಯಿಯಲ್ಲೂ ಅನೂಹ್ಯವಾದ, ಸಂಕೀರ್ಣ ಬದುಕಿನ ಲಯಗಳಿರುವ ಸಾಧ್ಯತೆಗಳನ್ನೂ ಇದೇ ತೆರನಾಗಿ ನೋಡಬೇಕಾಗುತ್ತದೆ. ಈಗಾಗಲೇ ಹೇಳಿದಂತೆ ರಾಜಕಾರಣದ ವಾಸನೆಯುಳ್ಳ ಓದಿಗೆ ಲಭ್ಯವಾಗದ ಅನೇಕ ಮೌನದ ದನಿಗಳು ಪಠ್ಯದಲ್ಲಿ ಕಂಡು ಬರುವುದನ್ನು ನಾವು ಗುರುತಿಸಬಹುದು.

ಪುಣ್ಯಕೋಟಿ ಮೊದಲು ಪ್ರವೇಶವಾಗುವ ಹೊತ್ತಿಗೆ, ಹುಲಿಯ ಕೈಯಿಂದ ಎಲ್ಲಾ ಹಸುಗಳು ತಪ್ಪಿಸಿಕೊಂಡು ಬಿಟ್ಟಿರುತ್ತವೆ. ಪುಣ್ಯಕೋಟಿ ಸಿಕ್ಕು ಬೀಳುವುದಕ್ಕೆ ಕಾರಣ ಅದು ತನ್ನ ಕಂದನನ್ನು ನೆನೆದುಕೊಂಡು ಬರುತ್ತಿರುವುದು. ಹುಲಿಯು ಹಸುವನ್ನು ಅಡ್ಡಗಟ್ಟಿ ಹಸುವನ್ನು 'ತಿನ್ನುವೆ' ಎಂದಿತು, ಆದರೆ ತಿಂದೇ ಬಿಡುವುದಿಲ್ಲ. ಪುಣ್ಯಕೋಟಿ ಆಗ ತನ್ನ ತಾಯ್ತನವನ್ನೇ ಬಳಸಿ ಹುಲಿಯ ಕೈಯಿಂದ ಕ್ಷಣ ಕಾಲ ಪಾರಾಗಲು ಯತ್ನಿಸುತ್ತದೆ. ಅದಕ್ಕಿಂತಲು ಮುಂಚೆ ಅದು ತನ್ನ ಉಳಿವನ್ನು ಎಷ್ಟು ಸಮರ್ಥವಾಗಿ ಪ್ರತಿಪಾದಿಸುತ್ತದೆ ಎಂಬುದನ್ನು ಕಾವ್ಯದಲ್ಲಿ ನೋಡಬೇಕು :

ಹಾಳು ಮಾಡುವ ಗರತಿಯಲ್ಲ,
ಬೀಳು ಮಾಡುವ ಗೈಮೆಯಲ್ಲ...
ನಾನು ಮೆಟ್ಟಿದ ಭೂಮಿ ಬೆಳೆವುದು...
ಶಾನೆ ಕ್ಷೀರವ ಕೊಡುವೆ ನಿತ್ಯವು....

ಇಲ್ಲಿರುವ ಪ್ರತಿ ಸಾಲೂ ತನ್ನ ಇರುವಿಕೆಯ ಗೌರವವನ್ನು ಎತ್ತಿ ಹೇಳುತ್ತಿದೆ. ಅದನ್ನು ಹುಲಿಗೆ ಮನದಟ್ಟು ಮಾಡಿ ತನ್ನ ಜೀವದ ಪರ ವಾದ ಮಾಡುವ ಹಸು ಹೇಳುತ್ತದೆ;

ಅಡವಿಯೊಳಗಣ ಹುಲ್ಲ ಮೇಯುವೆ
ಮಡುವಿನೊಳಗಣ ನೀರ ಕುಡಿಯುವೆ.

ಹೀಗಿರುವಾಗ ನಿನ್ನದೇನು ಹಂಗು ಎಂದು ಹುಲಿಗೆ ಅದು ಪರೋಕ್ಷವಾಗಿ ಸವಾಲು ಹಾಕುತ್ತದೆ. ಇದಾದ ನಂತರವೂ ಪೀಡಿಸುವ ಹುಲಿಗೆ, ತನ್ನ ತಾಯ್ತನದ ಗುರಾಣಿಯನ್ನೊಡ್ಡಿ ಸ್ವಲ್ಪ ಕಾಲವಾದರೂ ಪಾರಾಗಲು ಬಯಸುತ್ತಿದೆ. ಹುಲಿಗೆ ಬೇಕಾದ ತನ್ನ ದೇಹವನ್ನು ತಾಯ್ತನದ ಮುಸುಕಿನಲ್ಲಿ ಮರೆಮಾಚಲು ಪ್ರಯತ್ನಿಸುತ್ತಿದೆ ಹಸು. ಇದರಿಂದ ಹುಲಿಯ ಆ ವೇಗಕ್ಕೆ ತಾತ್ಕಾಲಿಕವಾದರೂ ತಡೆಯೊಡ್ಡಿದಂತಾಗಿದೆ.

ಸತ್ಯಾಗ್ರಹವನ್ನಿಟ್ಟುಕೊಂಡ ಹಸುವು ಹುಲಿಯ ಹತ್ತಿರ ಬರುತ್ತದೆ. ತನ್ನ ದೇಹವನ್ನೊಪ್ಪಿಸಲು ಬಂದೆನೆಂದು ಹೇಳುತ್ತಾ, ಹುಲಿಯನ್ನು ಕರೆಯುತ್ತದೆ :

ಖಂಡವಿದೆಕೋ ಮಾಂಸವಿದೆಕೋ
ಗುಂಡಿಗೆಯ ಕೊಬ್ಬುಗಳಿವೆಕೋ
ಉಂಡು ಸಂತಸಗೊಂಡು ನೀ ಭೂ
ಮಂಡಲದೊಳು ಬಾಳಯ್ಯನೆ

ಅರ್ಪಣೆಯ ಮಾತುಗಳೆಂಬಂತೆ ಕಾಣುವ ಈ ಮಾತುಗಳಲ್ಲಿ ಹಾಳಿಯ ನೆರಳು ಇಣುಕುತ್ತಿದೆ! ಹಸು ತನ್ನ ದೇಹವನ್ನು ಮುಂದೊಡ್ಡುತ್ತಾ, ಹುಲಿಯ ಮನಸ್ಸಿಗೆ ನಾಟುವಂತೆ ಹೇಳುತ್ತಿದೆ - 'ನೀನು ಇದಕ್ಕೆ ತಾನೇ ಕಣ್ಣು ಹಾಕಿದ್ದು, ಬಾ ತೆಗೆದುಕೋ' ಎಂದು ಪದಗಳಲ್ಲಿ ದೇಹವನ್ನು ವಾಚ್ಯವಾಗಿ ಬಿಡಿಸಿ, ಬಿಡಿಸಿ ಇಡುತ್ತಿದೆ. 'ಖಂಡ', 'ಕೊಬ್ಬು', 'ಮಾಂಸ' ಪದಗಳನ್ನು ಹುಲಿಯ

ಸ್ವರೂಪವನ್ನು ಚುಚ್ಚಲೆಂದೇ ಬಳಸುವಂತಿದೆ. ಹುಲಿಯ ಮನಸ್ಸನ್ನು ಭೇದಿಸುತ್ತಲೇ ಹುಲಿಯ ಸಾವನ್ನು ನೇತ್ಯಾತ್ಮಕವಾಗಿ ನಿರೀಕ್ಷಿಸುತ್ತಿದೆ, ಹಸು. ತನ್ನ ಕುಲಕ್ಕೆ ಎರವಾಗಬಲ್ಲ ಹುಲಿಯ ಉಳಿವನ್ನು, ಹಾಗೇ ತನ್ನ ಉಳಿವಿನ ಸಮರ್ಥನೆಯನ್ನೂ ಏಕಕಾಲಕ್ಕೆ ಮುಂದು ಮಾಡುತ್ತಿದೆ. ತಾಯ್ತನವನ್ನೇ ಮುಂದು ಮಾಡಿಕೊಂಡು ಕರ್ಣನಲ್ಲಿ ಜೀವ ಭಿಕ್ಷೆಗೆ ಬಂದ ಕುಂತಿಯು ಸಂಕೀರ್ಣ ವ್ಯಕ್ತಿತ್ವವನ್ನು ತೋರುವಂತೆ, ಪುಣ್ಯಕೋಟಿ ತನ್ನ ದೇಹ ಮತ್ತು ತಾಯ್ತನಗಳಿಂದಲೇ ಉಳಿವಿನ ಪ್ರಶ್ನೆಯನ್ನು ಎದುರಿಸುತ್ತಿದೆ. ಅದು ಹುಡುಕುವ ಒಳದಾರಿಗಳಲ್ಲಿ ಅನೂಹ್ಯ ವಾದರೂ ಪ್ರಯೋಗಿಸಿ ಸವಾಲನ್ನು ಗೆಲ್ಲುವ ಚೈತನ್ಯ ಕಾಣುತ್ತಿದೆ.

ಹೀಗೆಂದು ಹೇಳುತ್ತಿರುವಾಗಲೇ ಹಸುವು ಒಡ್ಡಿದ ಸತ್ಯದ ಮಾತನ್ನು ಒರೆಗೆ ಹಚ್ಚಬೇಕಾ ಗುತ್ತದೆ. ತುಂಬ ಸೂಕ್ಷ್ಮವಾಗಿ ನೋಡಿದರೆ ಅಲ್ಲಿ ನೈತಿಕತೆಯ ಪ್ರಶ್ನೆಯಿದೆ. ತನ್ನ ಕಂದನ ಹಸಿವೆ ತಣಿಸಲೆಂದು ಬರುವ ತಾಯಿಗೆ, ಏಳು ದಿನಗಳಿಂದ ಹಸಿವೆಯಿರುವ ಹುಲಿಯ ಹಸಿವೆಯ ಅರಿವಾಗದೇ ಹೋಯಿತೇ? ಹಸಿವಿನ ಸಮಸ್ಯೆ ಮತ್ತು ಅಳಿವು-ಉಳಿವಿನ ಸಮಸ್ಯೆಗಳು ಸೃಷ್ಟಿಯಲ್ಲಿ ಪ್ರತಿಯೊಂದು ಜೀವಿಗೂ ಮುಖ್ಯವಾಗಿ ಕಾಡುವಂತವು, ಇವೆರಡರಿಂದ ಬಿಡುಗಡೆ ಇಲ್ಲ. ಹುಲಿಯ ಆಹಾರವನ್ನು ತಪ್ಪಿಸಿ, ಹಸು ಜಯಶಾಲಿಯಾಗಿ ನಿಲ್ಲುವುದು ಆಭಾಸ ಎನ್ನಿಸುವುದಿಲ್ಲವೆ? ಹಸು ಪ್ರತಿಪಾದಿಸುವ ನ್ಯಾಯವು ಯಾವ ಬಗೆಯದು?

ಲೌಕಿಕ ನ್ಯಾಯಗಳು ಕಾಲದೇಶಗಳಿಂದ ಪರಿಮಿತಿಯಲ್ಲಿ ರೂಪುಗೊಂಡಿರುತ್ತವೆ. ನ್ಯಾಯಾ ನ್ಯಾಯಗಳ ಪ್ರಶ್ನೆಯನ್ನು ಸಂಪೂರ್ಣವಾಗಿ ಸಾಪೇಕ್ಷವಾಗಿ ನೋಡಬಹುದಾಗಿದೆ. ಕಾನೂನು ಗಳನ್ನು ಮಾಡುವ ಸಾಂಸ್ಕೃತಿಕ ಶಕ್ತಿಕೇಂದ್ರಗಳು ತಮಗೆ ಬೇಕಾದಂತೆ ನಿರೂಪಿಸಿರುತ್ತವೆ ಎಂಬುದೂ ಪರಿಗಣಿಸುವ ಅಂಶ. ಲೌಕಕ ನ್ಯಾಯ ನಿರ್ಣಯಗಳು ಒಂದು ಪದರದಲ್ಲಿ ರುವುದಿಲ್ಲ. ಬಹುವಾಗಿ ಅವು ನಿರ್ಣಯಿಸಲ್ಪಡುವವರ ಮೇಲೆ ನಿಂತಿರುತ್ತವೆ. ಅರ್ಥೈಸುವಿಕೆ ಯಿಂದಲೇ ನ್ಯಾಯಗಳ ವ್ಯಾಖ್ಯಾನಗಳು ನಿಲ್ಲುತ್ತವೆ. ಈ ದೃಷ್ಟಿಯಲ್ಲಿ ಹುಲಿಯು ಹಸವಿಗಿಂತ ಕ್ರೂರಿ ಎನ್ನುವುದಕ್ಕಿಂತ ಹುಲಿ ಸ್ವಚ್ಛಂದವಾದುದು ತನ್ನದೇ ಇಚ್ಛೆಯಿಂದ ತನ್ನ ಹಸಿವನ್ನು, ಬದುಕನ್ನು ನಿರ್ಧರಿಸುವ ಶಕ್ತಿಯುಳ್ಳದ್ದು. 'ಹಬ್ಬಿದಾ ಮಲೆಮಧ್ಯದೊಳಗೆ ಅರ್ಬುತನೆಂದೆಂಬ ವ್ಯಾಘ್ರನು.....' ಎಂಬ ಸಾಲನ್ನು ಉದಾಹರಿಸಬಹುದು. ಆದರೆ ಹಸುವಿನ ಜೀವ ನಾನಾ ರೀತಿಯ ಹೊಣೆಗಾರಿಕೆಗಳಿಂದ ಕೂಡಿದೆ. ಗೊಲ್ಲನೆಗೆ ಹಾಲು ಕರೆಯಬೇಕು. ಕಂದನಿಗೆ ಹಾಲುಣಿಸಬೇಕು - ಹೀಗೆ ಪರಾಧೀನವಾಗಿರುವ ಹಸುವಿಗೆ ತನ್ನ ಉಳಿವು, ಅಸ್ಮಿತೆಯ ಸವಾಲನ್ನು ಬಹಳ ಕಷ್ಟದಿಂದ ಸ್ಥಾಪಿಸಬೇಕಾಗಿದೆ. ಆದ್ದರಿಂದ ಅದು ಒಳದಾರಿಗಳಲ್ಲಿ ತನ್ನ ನ್ಯಾಯದ ಬಲವನ್ನು ಹುಡುಕಾಡುತ್ತದೆ.

ಕೆ.ವಿ. ಸುಬ್ಬಣ್ಣ ಗೋವಿನ ಹಾಡನ್ನು ಕುರಿತು ಬರೆಯುವಾಗ ಕೇಡಿನ ಸ್ವರೂಪವನ್ನು ಬ್ಲೇಕ್‌ನ 'ಟೈಗರ್' ಪದ್ಯಕ್ಕೆ ಹೋಲಿಸುತ್ತಾರೆ. ಬ್ಲೇಕ್‌ನ ಟೈಗರ್ ಸಂಕೀರ್ಣವೂ, ಸ್ವಯಂ ಪೂರ್ಣವೂ ಆದಂತೆ ತೋರುವಾಗ, ಅವನಲ್ಲಿ ಮೂಡಿದ ಒಂದು ಪ್ರಶ್ನೆಯೆಂದರೆ ಕುರಿಯನ್ನು ಸೃಷ್ಟಿಸಿದ ಕರ್ತನೇ ಹುಲಿಯನ್ನೂ ಸೃಷ್ಟಿಸಿದನೇ? - ಎಂಬುದು (Did who made the

lamb make thee?) ತಾತ್ವಿಕ ಜಿಜ್ಞಾಸೆಯ ಅಮೂರ್ತ ಸ್ವರೂಪದಲ್ಲಿ ನಿಂತು ತಡಕಾಡುವಾಗ ಜನಪದದಲ್ಲಿ ಬರುವ ಪುಣ್ಯಕೋಟಿಯ ಕಥೆ ನ್ಯಾಯ ನಿರ್ಣಯಗಳನ್ನು ಹೊಸದಾಗಿ ವಿಶ್ಲೇಷಿಸುವಂತಿರುವುದು ಅದ್ಭುತವಾಗಿ ಕಾಣುತ್ತದೆ.

ಕಂಬಾರರ 'ಶಿಖರ ಸೂರ್ಯ' ಕಾದಂಬರಿಯಲ್ಲಿ ಪುಣ್ಯಕೋಟಿಯ ಕಥೆಯ ಉಲ್ಲೇಖ ಇದೆ. ಮುಖ್ಯವಾಗಿ ಕಂಬಾರರ ಕಾದಂಬರಿಯು ಮಾತೃಸಂಸ್ಕೃತಿಯ ಪರವಾದ ದೃಷ್ಟಿಕೋನ ದಲ್ಲಿ ರಚಿತವಾಗಿದೆ. ಮಾತೃಸಂಸ್ಕೃತಿಯ ಸಮಾಜಗಳು ಬಿಂಬಿಸುವ ಮೌಲ್ಯ ಮತ್ತು ಜೀವನ ದೃಷ್ಟಿಗಳನ್ನು ಅದು ವಿಶ್ಲೇಷಿಸುತ್ತದೆ. ಅವ್ವ ಸಂಸ್ಕೃತಿಯ ಹಿನ್ನೆಲೆಯಲ್ಲಿ ಹೇಳಲಾದ ಪುಣ್ಯಕೋಟಿ ಕಥೆಯು ಹೀಗಿದೆ: "ಪುಣ್ಯಕೋಟಿಯನ್ನು ಹುಲಿಯು ಆಕ್ರಮಿಸಿ ನಿಂತಾಗ ಅದು ಓಡಿ ಬ್ರಮ್ಮನ ಹತ್ತಿರ ಹೋಯಿತಂತೆ. ಬ್ರಮ್ಮ ವಿಷ್ಣುವಿನ ಹತ್ತಿರ ಹೋಗಲು ತಿಳಿಸಿದ. ಅವನೂ ಸೋತ, ಶಿವನೂ ಸೋತ. ಕೊನೆಗೆ ಅಮ್ಮನ ಹತ್ತಿರ ಬಂದಿತು ಹಸು. ಅಮ್ಮ ಪುಣ್ಯಕೋಟಿಯನ್ನು ಪೂಜೆಯ ಮನೆಯಲ್ಲಿ ಅಡಗಿಸಿಟ್ಟಳಂತೆ. ಹುಲಿರಾಯ ಬಂದು, 'ಅಮ್ಮಾ, ಪುಣ್ಯಕೋಟಿ ಒಳಗೆ ಅಡಗಿರುವಳೋ' ಎಂದು ಕೇಳಿತಂತೆ. ಆಗ ಅಮ್ಮ 'ಖರೇ ಹೇಳಲೋ, ಖೊಟ್ಟಿ ಹೇಳಲೋ' ಎಂದು ಕೇಳಿದಾಗ, ಹುಲಿ 'ಖರೇನೆ ಹೇಳು' ಅಂದಿತಂತೆ. ಆಗ ಅಮ್ಮ 'ಪುಣ್ಯಕೋಟಿ ಇಲ್ಲಿಗೆ ಬಂದಿಲ್ಲವಲ್ಲಪ್ಪ' ಎಂದು ಹೇಳಿದಳಂತೆ. ಆಗ ಅಲ್ಲಿ ಕೂತವರಿಗೆಲ್ಲ ಚೋಗಿಣಿ ಪ್ರಶ್ನೆ ಹಾಕುತ್ತಾಳೆ. "ಅಲ್ಲಪ, ಅಮ್ಮಾ ಖರೇನೆ ಅಂದು ಖೊಟ್ಟಿ ಹೇಳಿದಾಗಾಗಲಿಲ್ಲವೇನಪ್ಪ?" ಎಂದು. ಆಮೇಲೆ ವಿವರಿಸುತ್ತಾಳೆ ಅಮ್ಮಾ ಖರೇ ಎಂದಿದ್ದು ಯಾಕೆಂದರೆ ಬ್ರಹ್ಮ, ವಿಷ್ಣು, ಶಿವ ಮೂವರೂ ಹೊಣೆಗೇಡಿಗಳು. ತಾಯಿಯನ್ನು ತಿಳಿಯ ದವರು. ಆದರೆ ಅಮ್ಮನಿಗೆ ಗೊತ್ತಾಯಿತು ಸತ್ಯ ಯಾವುದು? ಕರುವನ್ನು ಪೊರೆಯಲು ತಾಯಿಯ ಜೀವ ಬೇಕೆಂಬ ತಾಯಿಯ ಖೊಟ್ಟಿಯೇ ಸತ್ಯ. ತಾಯಿಯ ದೇವವೇ ಸತ್ಯ. ಹೀಗಿರುವುದರಿಂದಲೇ ನಾವು ಇಲ್ಲಿದೀವಿ..." (ಶಿಖರಸೂರ್ಯ).

ಪುಣ್ಯಕೋಟಿಯ ಈ ಕಥೆಯ ನ್ಯಾಯನಿರ್ಣಯವು ಮಾತೃತ್ವದ ಆಧಾರದ ಮೇಲೆ ಪ್ರತಿಪಾದಿಸಲ್ಪಟ್ಟಿದೆ. ತಾಯ್ತನದ ಮೌಲ್ಯಗಳಿಂದ ನಿರ್ಣಯಿಸಲ್ಪಟ್ಟಿದ್ದಾಗಿದೆ.

ತಾತ್ವಿಕವಾಗಿಯಾದರೂ ಹೆಣ್ಣು-ಗಂಡು, ಹಸು-ಹುಲಿಗಳ ನಡುವೆ ಸಂಘರ್ಷಗಳು ಇದ್ದೇ ಇವೆ. ಅವುಗಳ ನ್ಯಾಯನಿರ್ಣಯವನ್ನು ಪ್ರತಿಪಾದಿಸುವವರು ಯಾರು ಎಂಬುದರ ಮೇಲೆ ಅವುಗಳ ಸತ್ಯಾಸತ್ಯತೆಗಳು ನಿರ್ಧರಿಸಲ್ಪಡುತ್ತವೆ. ಗೋವಿನ ಹಾಡಿನ ಕಥನದೊಳಗೆ ಪುಣ್ಯಕೋಟಿ ತನ್ನ ದೇಹ, ತಾಯ್ತನದ ಬಲದಿಂದಲೇ ತನ್ನ ವಿರೋಧಿ ಜಗತ್ತನ್ನು ಎದುರಿಸುವ ಸಂಕೀರ್ಣ ಶಕ್ತಿ ಸಾಮರ್ಥ್ಯವನ್ನು ಹೊಂದಿದೆ. ಫ್ರೆಂಚ್ ಸ್ತ್ರೀವಾದಿಗಳು ನಿರೂಪಿಸುವ ವಾದ ವನ್ನು ಇಲ್ಲಿ ಪಡೆದುಕೊಳ್ಳುವುದಾದರೆ, ಹೆಣ್ಣಿನ ದೇಹವು ಒಂದು ಇತ್ಯಾತ್ಮಕ ಶಕ್ತಿ ಎಂದು ಒಪ್ಪಿಕೊಳ್ಳುವ ಹಂತವನ್ನು ಈ ಕಥನವು ನಿರೂಪಿಸುತ್ತಿದೆ. ಲೈಂಗಿಕತೆಯ ಯಾವ ಕುರುಹು ಗಳಿಂದ ದಮನಗೊಂಡ ಚೈತನ್ಯವಿತ್ತೋ, ಅದನ್ನೇ ಸೃಜನಾತ್ಮಕ, ಸಂಕೀರ್ಣತೆಗಳ ಸ್ತರಕ್ಕೆ ವಿಸ್ತರಿಸಿಕೊಳ್ಳುವ ಮಟ್ಟವನ್ನು ಅದು ತಿಳಿಸಿಕೊಡುವಂತಿದೆ. ಪುಣ್ಯಕೋಟಿಯ ಕಥನದಲ್ಲಿ

ಸ್ವಚ್ಛಂದ ಪರಿಸರವೂ ಇದೆ, ನಿಯಂತ್ರಣಕ್ಕೊಳಪಟ್ಟ ಪರಿಸರವೂ ಇದೆ. ಇವೆರಡೂ ಕುತೂಹಲ ಕಾರಿ ಅಂಶಗಳು. ಗೋವುಗಳು ಇಲ್ಲಿ ಪರಾಧೀನವಾಗಿವೆ. ಅದನ್ನು ಮೀರಿ ಪುಣ್ಯಕೋಟಿ ತನ್ನ ಉಳಿವನ್ನು ನಿರೂಪಿಸಲು ಬಯಸುತ್ತಿದೆ. ವಾಪಾಸು ಹೋಗಿ ಹುಲಿಯ ಮುಂದೆ ನಿಂತು, ಕ್ರೈಸಿಸ್ ಅನ್ನು ಎದುರಿಸಲು ಮುನ್ನಡೆಯುತ್ತಿದೆ. ಈ ಧೈರ್ಯವು ಹೆಣ್ಣು ದೇಹದ್ದೇ ಆಗಿ, ಅದರ ಮಾನಸಿಕ ಬಲದ ಸಂಕೇತವೂ ಆಗಿ, ಅಂತಿಮವಾಗಿ ನ್ಯಾಯವನ್ನು ತನ್ನ ಪಾಲಿಗೆ ಪಡೆದುಕೊಳ್ಳುವ ಶಕ್ತಿಯಾಗಿರುವುದು ಸಾಮಾನ್ಯ ಸಂಗತಿಯಾಗಿ ಪರಿಗಣಿಸುವುದಲ್ಲ.

**ನೆರವಿಗೆ ಬಂದ ಪುಸ್ತಕಗಳು**


೧. **ಗೋವಿನ ಹಾಡು,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨. **ಪುತಿನ ಸಮಗ್ರಗದ್ಯ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩. **ಆದಿಮ,** ಮೊಗಳ್ಳಿ ಗಣೇಶ್, ಸಾರಂಗ ಪ್ರಕಾಶನ.

೪. **ಹೆಣ್ಣು-ಹೆಂಗಸು,** ಎಚ್.ಎಸ್. ಶ್ರೀಮತಿ, ಬಾಲ್ಯದ ಕೆರೆ ಪ್ರಕಾಶನ, ನಾಗಮಂಗಲ.

೫. **Lokayata,** Debiprasad Chattopadhaya, People's Publishing House, New Delhi.

೬. **ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು,** ಕೆ.ವಿ. ಸುಬ್ಬಣ್ಣ, ಅಕ್ಷರ ಪ್ರಕಾಶನ, ಹೆಗ್ಗೋಡು.

೭. **ಸ್ತ್ರೀವಾದಿ ಪ್ರವೇಶಿಕೆ,** ಸಂ. ಸುಮಿತ್ರಾಬಾಯಿ/ಗಾಯತ್ರಿ ಎನ್., ಕರ್ನಾಟಕ ಲೇಖಕಿಯರ ಸಂಘ.

೮. **ಶಿಖರಸೂರ್ಯ,** ಚಂದ್ರಶೇಖರ ಕಂಬಾರ, ಅಕ್ಷರ ಪ್ರಕಾಶನ, ಹೆಗ್ಗೋಡು.

# ಜೀವನ ಪ್ರೀತಿಯ ಮುಖಗಳು

ಎಲ್.ಸಿ. ಸುಮಿತ್ರಾ

ಕಮಲದಾಸ್ ಅವರ ಕಥೆ ಕವಿತೆಗಳು ಗಂಡು ಹೆಣ್ಣಿನ ಸುತ್ತಲೇ ಯಾಕೆ ಸುತ್ತುತ್ತವೆ, ಅವರು ಬರೆಯಲು ಆರಿಸಿಕೊಂಡ ವಸ್ತುವಿಗೂ ಬರವಣಿಗೆಯ ರೀತಿಗೂ ಕಮಲಾದಾಸ್ ಬೆಳೆದ ಪರಿಸರಕ್ಕೂ ಇರುವ ಸಂಬಂಧ ಯಾವ ಬಗೆಯದು ಎಂಬ ಪ್ರಶ್ನೆಗಳು ಹಲವು ಸಲ ನನ್ನನ್ನು ಕಾಡಿವೆ. ಅವರ ಬರಹಗಳ ಕುರಿತು ಇಷ್ಟಾನಿಷ್ಟಗಳೇನೇ ಇದ್ದರೂ ಸ್ತ್ರೀ ಲೈಂಗಿಕತೆಯ ಕುರಿತ ಮೌನವನ್ನು ಮುರಿದ ಮೊದಲ ಲೇಖಕಿಯರಲ್ಲಿ ಅವರು ಪ್ರಮುಖರು. ಈ ಲೇಖನದ ಮೊದಲ ಭಾಗದಲ್ಲಿ ಕಮಲಾದಾಸ್ ಕುರಿತೂ ಎರಡನೇ ಭಾಗದಲ್ಲಿ ಅವರ ಸಾಹಿತ್ಯ ಕುರಿತೂ ಬರೆದಿದ್ದೇನೆ. ಕಮಲಾದಾಸ್ ಬರವಣಿಗೆಯನ್ನು ಪ್ರತಿಭಟನೆಯ ಅಸ್ತ್ರವಾಗಿಯು ಬಳಸಿದರು. ಕೇರಳದಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಕಮಲಾದಾಸ್ ಅವರ ವಿವಾಹದ ಸಮಯ ದಲ್ಲೇ ನಿಧಾನವಾಗಿ ಬದಲಾಗುತ್ತಿತ್ತು. ಅವರ 'ಬಾಲ್ಯಕಾಲದ ನೆನಪುಗಳಲ್ಲಿ'' ಸ್ತ್ರೀಯರ ವ್ಯಕ್ತಿತ್ವದ ಕುರಿತು ಆಗಿನ ಸಂದರ್ಭದ ಸಾಂಪ್ರದಾಯಿಕ ಸಮಾಜದ ನಿರೀಕ್ಷೆಗಳನ್ನು ವಿವರಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅವರ ಕೃತಿಗಳಲ್ಲಿ ಮತ್ತೆ ಮತ್ತೆ ಪ್ರಸ್ತಾಪಿತವಾಗಿರುವ ಅವರು ಹುಟ್ಟಿ ಬೆಳೆದ ನಾಲಪ್ಪಟ್ ಮನೆಯನ್ನು ನೋಡುವ ಆಸೆಯಿತ್ತು. ೨೦೦೬ನೇ ಡಿಸೆಂಬರ್‌ನ ಕ್ರಿಸ್ಮಸ್ ದಿನ ನಾವು ಕೊಚ್ಚಿನ್‌ನ ಅವರ ಮನೆಯಲ್ಲಿ ಕಮಲಾದಾಸ್ ಅವರನ್ನು ಭೇಟಿಯಾದೆವು.

ಮಲೆಯಾಳಮ್‌ನಲ್ಲಿ ಮಾಧವಿಕುಟ್ಟಿ, ಇಂಗ್ಲಿಷ್‌ನಲ್ಲಿ ಕಮಲಾದಾಸ್ ಎಂಬ ಹೆಸರು ಗಳಿಂದ ಕತೆ, ಕವಿತೆ ರಚಿಸಿ ಅಂತಾರಾಷ್ಟ್ರೀಯ ಖ್ಯಾತಿ ಗಳಿಸಿರುವ ಲೇಖಕಿಯನ್ನು ನೋಡ ಬೇಕೆಂಬ ಕುತೂಹಲದಿಂದ ಫೋನ್ ಮೂಲಕ ಭೇಟಿಯನ್ನು ನಿಗದಿಪಡಿಸಿಕೊಂಡು ನಾನು ಮತ್ತು ಗೆಳತಿ ಪಾರ್ವತಿ ಕೊಚಿನ್‌ಗೆ ಹೋದಾಗ ಕಮಲಾದಾಸ್ ಪೂನಾದಲ್ಲಿರುವ ತಮ್ಮ ಕಿರಿಯ ಗಮನ ಹತ್ತಿರದಲ್ಲಿ ವಾಸಿಸುವ ನಿರ್ಧಾರ ಮಾಡಿದ್ದರು. ಕೊಚಿನ್‌ನ ಕಡವಂತರದಲ್ಲಿ "ರಾಯಲ್ ಮ್ಯಾನ್‌ಶನ್" ಅಪಾರ್ಟ್‌ಮೆಂಟ್‌ನಲ್ಲಿ ಇಬ್ಬರು ಸೇವಕಿಯರ ಜತೆ ವಾಸಿಸುತ್ತಿದ್ದ ಅವರು ಕೇರಳ ಬಿಟ್ಟು ಪೂನಾಕ್ಕೆ ಹೋದುದನ್ನು ಪತ್ರಿಕೆಗಳು ದೊಡ್ಡ ಸುದ್ದಿ ಮಾಡಿದವು. ನಾವು ಅವರನ್ನು ನೋಡಿದಾಗ ಅವರು ಕೈ ಮೂಳೆ ಮುರಿದಿದ್ದರಿಂದ ಎರಡು ತಿಂಗಳಿಂದ

ಹಾಸಿಗೆಯಲ್ಲೇ ವಿಶ್ರಾಂತಿಯಲ್ಲಿದ್ದೇನೆಂದು ಹೇಳಿದರು. ಮಲಗಿದಲ್ಲೇ ಒಂದು ಗಂಟೆ ನಿಧಾನವಾಗಿ ಮಾತನಾಡಿದರು "you have come at the right time. next month I may not be here" ಎಂದರು. ಹಾಸಿಗೆಯ ಮೇಲೆ ಅಸಹಾಯಕತೆಯಿಂದ ಮಲಗಿದ್ದ ಕಮಲಾ ಅವರನ್ನು ನೋಡಿದಾಗ ರೆಕ್ಕೆ ಮುರಿದ ಹಕ್ಕಿಯಂತೆನಿಸಿತು. ಮನೆಯ ಹೊರಬಾಗಿಲಲ್ಲಿ ಕಮಲಾದಾಸ್ ಎಂಬ ಬೋರ್ಡ್ ಇದ್ದರೆ ಬೆಡ್ ರೂಮ್ ಬಾಗಿಲಲ್ಲಿ ಕಮಲಾ ಸುರೈಯಾ ಎಂಬ ಫಲಕವಿತ್ತು. "ಹೌದು ನಾನು ಹಲವು ಹೆಸರುಗಳನ್ನು ಬಳಸುತ್ತೇನೆ ಮನೆಯಲ್ಲಿ ಅಮಿ, ಕಮಲಾ, ಹೊರಗೆ ಮಾಧವಿಕುಟ್ಟಿ, ಕಮಲಾದಾಸ್, ಕಮಲಾಸುರೈಯ್ಯ ಹೀಗೆ" (ಈಗ ಪುನಾದಿಂದ ಅವರು ಇನ್ನು ಮುಂದೆ ಕಮಲಾದಾಸ್ ಎಂಬ ಹೆಸರು ಮಾತ್ರ ಬಳಸುವುದಾಗಿ ಹೇಳಿದ್ದಾರೆ) "ಹೌದು ಕಲ್ಪನೆಗಳು ವಾಸ್ತವಿಕ ಅನುಭವಗಳು ಸೇರಿ ನನ್ನ ಕತೆ ಕವಿತೆಗಳು ಜನಿಸಿವೆ" ಎಂದು ಹೇಳುತ್ತಾ ಮೊಮ್ಮಗಳು ನಯನ ತಾರೆಯನ್ನು ನೆನೆಸಿಕೊಂಡರು. ಮೊಮ್ಮಕ್ಕಳು ಪ್ರೀತಿಯಿಂದ ಅಪ್ಪಿಕೊಂಡಾಗ ಈ ನೋವು ಸ್ವಲ್ಪ ಮರೆಯುತ್ತದೆ. ಕೊಚಿನ್ ನಲ್ಲೇ ಇರುವ ತಂಗಿ ಆಗಾಗ ಬಂದು ಭೇಟಿಯಾಗುತ್ತಾಳೆ. ಡಾಕ್ಟರ್ ಆಗಿರುವ ಇನ್ನೊಬ್ಬ ಸಹೋದರ ತಮ್ಮಂತೆಯೇ ಮೂಳೆ ಮುರಿದುಕೊಂಡು ಮಲಗಿರುವುದಾಗಿ ಹೇಳುತ್ತಾ "doctors also fall" ಅಂದರು.

ತಮ್ಮ ಹಿರಿಯ ಮಗ ಎಂ.ಡಿ. ನಾಲಪತ್ ದೆಹಲಿಯಲ್ಲಿದ್ದು ಅವನು ತಿರುವನಂತಪುರದ ರಾಜಮನೆತನದ ಹುಡುಗಿಯನ್ನು ಮದುವೆಯಾಗಿದ್ದಾನೆ. ಕಿರಿಯ ಮಗ ಜಯಸೂರ್ಯ ಪೂನಾದಲ್ಲಿ, ಎರಡನೆಯ ಮಗ ಬೆಂಗಳೂರಿನಲ್ಲಿ ಇರುವುದಾಗಿ ಹೇಳಿದರು. ತಮ್ಮ ಸೊಂಪಾದ ತಲೆಗೂದಲ ಬಗ್ಗೆ ಅಭಿಮಾನವಿದ್ದ ಕುಮಲಾದಾಸ್‌ಗೆ ದೆಹಲಿ ಆಸ್ಪತ್ರೆಯಲ್ಲಿ ಸ್ಕ್ಯಾನಿಂಗ್ ವೇಳೆ ತಲೆಗೂದಲು ಕತ್ತರಿಸಿದ ಕುರಿತು ಬೇಸರ. ನಾವು ಪುನ್ನಯೂರ್ ಕುಳಕ್ಕೆ ಹೋಗುತ್ತೇವೆಂದಾಗ "ಅಲ್ಲಿ ನಾಗಬನ ಮತ್ತು ನೀರ್ಮಾದಳ ಮರ ಬಿಟ್ಟು ಇನ್ನೇನೂ ಉಳಿದಿಲ್ಲ" ಎಂದು ನಿಟ್ಟುಸಿರಿಟ್ಟರು. ತನ್ನ ಪಾಲಿಗೆ ಬಂದಿದ್ದ "ನಲ್ಲಪಾಟ್" ಮನೆಯನ್ನೂ ನೋಡಿಕೊಳ್ಳಲಾಗುವುದಿಲ್ಲ ಎಂದು ತಾವು ಮಾರಿದಂತೆ ತಂಗಿ ಸಹಾ ತಂದೆ ಕಟ್ಟಿಸಿದ್ದ ಸರ್ವೋದಯ ಹೆಸರಿನ ಮನೆಯನ್ನು ಮಾರಿದಳು. ಕೊಂಡವರು ಆ ಮನೆಗಳನ್ನು ಕೆಡವಿದ್ದರಿಂದ ಈಗಲ್ಲಿ ಏನೂ ಇಲ್ಲ ಎಂದಾಗ ಅವರ ದನಿಯಲ್ಲಿ ವಿಷಾದವಿತ್ತು.

ಮನೆಯ ಮೆಟ್ಟಿಲಿಳಿದು ಬರುವಾಗ ೧ ಬಿ. ಕಮಲಾದಾಸ್ ಎಂದು ಬರೆದಿದ್ದ ನೇಮ್‌ಪ್ಲೇಟ್ ಕಾಣಿಸಿತು. ಈ ನೇಮ್ ಪ್ಲೇಟ್ ಇನ್ನು ಕೆಲವೇ ದಿನಗಳ ನಂತರ ಇಲ್ಲಿರುವುದಿಲ್ಲ ಎಂದು ಹೊಳೆದಾಗ ವಿಷಾದವೆನಿಸಿತು.

*    *    *    *    *

"ಬಾಲ್ಯಕಾಲದ ಸ್ಮೃತಿಗಳು" ಮತ್ತು "ಮೈಸ್ಟೋರಿ" ಎಂಬ ಆತ್ಮ ಕಥೆಗಳಲ್ಲೂ, ಅವರ ಕತೆ, ಕವಿತೆಗಳಲ್ಲೂ ಮತ್ತೆ, ಮತ್ತೆ ಪ್ರಸ್ತಾಪಿತವಾಗಿರುವ ನಾಲಪ್ಪಾಟ್ ಮನೆ ಕಮಲಾದಾಸ್

ಅವರು ಹುಟ್ಟಿ ಬೆಳೆದ ಅವರ ತಾಯಿಯ ಮನೆ. ಕುವೆಂಪುಗೆ ಕುಪ್ಪಳಿ ಸ್ಫೂರ್ತಿಯಾದಂತೆ ಕಮಲಾಗೆ ಪುನ್ನಯೂರುಕುಳದ ನಾಲ್‌ಪ್ಪಾಟ್ ಮನೆ. ಗುರುವಾಯೂರು ದೇವಾಲಯದಿಂದ ಹತ್ತು ಕಿ.ಮೀ. ದೂರದ ಪುನ್ನಯೂರ್ ಕುಳ ಕಮಲಾ ಅವರ ತವರು ಮನೆ, ಗಂಡನ ಮನೆ ಎರಡೂ ಇದ್ದ ಊರು. ಪ್ರತಿಷ್ಠಿತ ನಾಯರ್ ಕುಟುಂಬದಲ್ಲಿ ಜನಿಸಿದ ಕಮಲಾ ಅವರ ತಾಯಿ ಮಲೆಯಾಳಂನ ಮುಖ್ಯ ಕವಿಗಳಲ್ಲೊಬ್ಬರಾದ ಬಾಲಾಮಣಿಯಮ್ಮ, ಚಿಕ್ಕ ತಾತ ಪ್ರಸಿದ್ಧ ಲೇಖಿಕ ನಲಪಾಟ್ ನಾರಾಯಣ ಮೆನೋನ್ ಇದೇ ಊರಿನಲ್ಲಿ ಹುಟ್ಟಿ ಬೆಳೆದವರು. ಕಮಲಾ ತಂದೆ ವಿ.ಎಂ. ನಾಯರ್ "ಮಾತೃಭೂಮಿ" ಪತ್ರಿಕೆಯ ಸಂಪಾದಕರಾಗಿಯೂ ಕೆಲಸ ಮಾಡಿದ್ದರು.

ವಿಶಾಲವಾದ ತೆಂಗಿನ ತೋಟದ ನಡುವೆ ಅಲ್ಲೊಂದು ಇಲ್ಲೊಂದು ಮನೆಗಳು. ಅಂಕು ಡೊಂಕಾಗಿ ಹರಿದ ಕಿರಿದಾದ ಟಾರ್ ರಸ್ತೆ ಎದುರಿನಿಂದ ಆಟೊರಿಕ್ಷ ಬಂದರೂ ನಮ್ಮ ಕಾರು ನಿಂತು ಜಾಗ ಕೊಡಬೇಕಾಗಿತ್ತು. ಪುನ್ನಯೂರ್ಕುಳದಿಂದ ಎಡಕ್ಕೆ ತಿರುಗಿ ಕೇರಳದ ಟಿಪಿಕಲ್ ಪರಿಸರದಲ್ಲಿ ಒಂದು ಕಿ.ಮೀ. ಚಲಿಸಿ, ನಾಲಪಾಟ್ ತರವಾಡು ಮನೆಯಿದ್ದ ಜಾಗಕ್ಕೆ ಬಂದೆವು. ಅಲ್ಲಿ ತೆಂಗಿನ ಕಾಯಿ ಕೀಳುತ್ತಿದ್ದ ಕೆಲಸಗಾರರು ತೋಟದ ನಡುವೆ ಖಾಲಿಯಿದ್ದ ವಿಶಾಲ ಸ್ಥಳವನ್ನು "ವೀಡು" ಇದ್ದ ಸ್ಥಳ ಎಂದು ತೋರಿಸಿದರು. ಸ್ವಲ್ಪ ದೂರದಲ್ಲಿ ಗಾರೆಯ ಕಟ್ಟೆಯಿದ್ದ ಬಾವಿಯಿತ್ತು. ಹಿಂಭಾಗದಲ್ಲಿದ್ದ ನಾಗಬನದಲ್ಲಿ ಗುಂಪಾಗಿ ಬೆಳೆದ ಮರಗಳ ನಡುವೆ ರಂಜೆಯ ಮರವೂ ಇತ್ತು. ಅದರ ಬುಡದಲ್ಲಿ ಸಿಮೆಂಟ್ ಕಟ್ಟೆಯ ಮೇಲೆ ಎರಡು ಕಲ್ಲಿನ ಪ್ರತಿಮೆಗಳು. ಶಿವಲಿಂಗ, ಎದುರಿಗೆ ಕಂಚಿನ ಕಾಲು ದೀಪ. ಕಮಲಾದಾಸ್ ಕೃತಿಗಳಲ್ಲಿ ಬರುವ ನೀರ್ಮಾದಳ ಮರ ಚಳಿಗಾಲವಾದುದರಿಂದ ಎಲೆಉದುರಿಸಿ ಬೋಳಾಗಿ ನಿಂತಿತ್ತು. (ನಾವು ಕ್ರಿಸ್ಮಸ್ ಮರುದಿನ ಅಲ್ಲಿದ್ದೆವು.) ಬೇಸಿಗೆಯಲ್ಲಿ ಮರದ ತುಂಬ ಕೆನೆಬಣ್ಣದ ಪರಿಮಳ ಭರಿತ ಹೂವರಳಿಸುವ ಈ ನೀರ್ಮಾದಳ ಕಮಲಾ ಅವರ ಕೃತಿಗಳಲ್ಲಿ ರೂಪಕವಾಗಿ ಬಳಕೆಯಾಗಿದೆ. ಬೇಸಿಗೆಯಲ್ಲಿ ಹೂ ಅರಳಿದಾಗ ಮನೆಯ ತುಂಬಾ ಪರಿಮಳ ತುಂಬಿರುತ್ತಿತ್ತು ಎಂದು ಬರೆಯುತ್ತಾರೆ. 'ನೀರ್ ಮಾದಳ ಹೂಬಿಟ್ಟ ಕಾಲ" ಎಂಬ ಹೆಸರು ಹೀಗೆ ರೂಪಕವಾಗಿದೆ. ಕೊನೆಗೂ ನೀರ್ಮಾದಳದ ಬಳಿ ನಿಂತು ಸುತ್ತಲಿನ ಪರಿಸರವನ್ನು ನೋಡುತ್ತಿದ್ದಾಗ ಕಮಲಾದಾಸ್ ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದ ಪ್ರಸಿದ್ಧ ನಾಲಪಾಟ್ ಮನೆಯ ಕುರುಹು ಇದಿಷ್ಟನ್ನು ಬಿಟ್ಟು ಇನ್ನೇನೂ ಇರಲಿಲ್ಲ. ಬೇಸರವೆನಿಸಿತು.

ಕಮಲಾದಾಸ್ ತಮ್ಮ "ಬಾಲ್ಯದ ನೆನಪುಗಳು" ಕೃತಿಯಲ್ಲಿ ಈ ಮನೆಯನ್ನು ಕುರಿತು ವಿವರವಾಗಿ ಬರೆದಿದ್ದಾರೆ. "ಒಳಗಡೆ ಅಂಗಳವಿದ್ದು ದಕ್ಷಿಣ ದಿಕ್ಕಿಗೆ ತೆರೆಯುತ್ತಿದ್ದ ಚಾವಡಿಯಲ್ಲಿ ಚಿಕ್ಕ ದೇವಾಲಯವಿತ್ತು. ಮುಖಮಂಟಪದ ಕಡಿದಾದ ಮೆಟ್ಟಿಲುಗಳನ್ನು ಹತ್ತಿ ಬಂದರೆ ಚಿಕ್ಕ ತಾತನ ಭವ್ಯವಾಗಿ ಸಜ್ಜುಗೊಂಡಿದ್ದ ಕೊಠಡಿ. ವರ್ಷದಲ್ಲಿ ಎರಡು ಸಲ ಒಟ್ಟಂತುಳ್ಳಲ್ ನಡೆಯುತ್ತಿದ್ದ ಎರಡು ಹಂತಗಳಲ್ಲಿದ್ದ ಪೋರ್ಟಿಕೋ. ಮಹಡಿಯ ಮೇಲೂ ಕೆಳಗೂ ತಲಾ ಮೂರು ಕೊಠಡಿಗಳಿದ್ದ, ಗಂಡಸರಿಗೂ ಹೆಂಗಸರಿಗೂ ಬೇರೆ ಬೇರೆ ಊಟದ ಮನೆಗಳಿದ್ದ

ಸಾಕಷ್ಟು ದೊಡ್ಡ ಮನೆ. ಮೇಲೆ ಅಟ್ಟದಲ್ಲಿ ಪೇರಿಸಿಟ್ಟ ಪಾಲಕಿ ಮತ್ತಿತರ ಹಳೆಯ ಪೆಟ್ಟಿಗೆಗಳು. ಹಿಂಭಾಗದ ಕಿರುಜಗಲಿ ದಾಟಿದರೆ ಸ್ನಾನದ ಮನೆಯಿದ್ದ ಕೊಳ. ಕೊಳದ ಆಚೆಗೆ ಹಿರಿಯರ ಶ್ರಾದ್ಧ ಆಚರಿಸಲು ಇದ್ದ ಶ್ರಾದ್ಧಪುರವೆಂಬ ಕೊಠಡಿ. ಇನ್ನೆರಡು ಕೊಳಗಳು. ಆದರೆ ಇವೆಲ್ಲ ಈಗ ಕಮಲಾದಾಸ್ ಅವರ ಕೃತಿಗಳಲ್ಲಿ ಮಾತ್ರ ಉಳಿದಿವೆ. ಪ್ರೀತಿಯ ಅಜ್ಜಿಯಿದ್ದ ನಾಲಪಾಟ್ ಮನೆ ನೂರಾರು ವರ್ಷ ಹಳೆಯದಾದುದರಿಂದ ಸಮೀಪದಲ್ಲೇ ಕಟ್ಟಿಸಿದ ಹೊಸಮನೆಗೆ ವಾಸಿಸಲು ಎಲ್ಲರೂ ಹೋದಾಗ "ಸತ್ತವರ ಕಣ್ಣುಗಳನ್ನು ಮುಚ್ಚುವಂತೆ ಆ ಹಳೆಮನೆಯ ಕಿಟಕಿಗಳನ್ನು ಮುಚ್ಚಲಾಯಿತು" ಎಂದು ಕಮಲಾದಾಸ್ ಬರೆಯುತ್ತಾರೆ. ನೀರ್ಮಾದಳ ಮರ ಮತ್ತು ನಾಗಬನವಿದ್ದ ಸ್ಥಳವನ್ನು ಕಮಲಾ ಕೇರಳ ಸಾಹಿತ್ಯ ಅಕಾಡೆಮಿಗೆ ನೀಡಿದ್ದಾರೆ. ನಾಲಪಾಟ್ ಮನೆಯಿಂದ ಫರ್ಲಾಂಗ್‌ನಷ್ಟು ದೂರದಲ್ಲಿ ಕಮಲಾದಾಸ್ ಪತಿ ಮಾಧವದಾಸ್ ಅವರ ಮನೆ 'ಅಂಬಲತ್ತಿಲ್' ಇದೆ. ಮನೆ ನೋಡಿಕೊಳ್ಳಲು ಪಕ್ಕದಲ್ಲಿರುವ ಜನ ಬಿಟ್ಟರೆ ಮನೆಯ ಸದಸ್ಯರಾರೂ ಅಲ್ಲಿ ಇಲ್ಲ. ಕೇರಳ ವಾಸ್ತುಶೈಲಿಯ ದೊಡ್ಡ ಮನೆ ಶಿಥಿಲಾವಸ್ಥೆಯಲ್ಲಿದೆ. ಆ ಕೋಮಲ ಮನದ ಕವಿ ನಡೆದಾಡಿದ ಸ್ಥಳ ಕೇಳುವವರಿಲ್ಲದೆ ಅನಾಥವಾಗಿತ್ತು.

**ಸಾಹಿತ್ಯ;** ಮಲೆಯಾಳಮ್‌ನಲ್ಲಿ ಮಾಧವಿಕುಟ್ಟಿ ಎಂಬ ಹೆಸರಿನಲ್ಲಿ ಕಥಾಸಂಗ್ರಹಗಳು, ಕಾದಂಬರಿಗಳು, ಮೈಸ್ಟೋರಿ ಎಂಬ ಆತ್ಮಚರಿತ್ರೆ ಬರೆದಿದ್ದಾರೆ. "ಮೈಸ್ಟೋರಿ"ಯ ಮಲೆಯಾಳಮ್ ಅನುವಾದ "ಎಂಡೆಕಥಾ" ಒಂಬತ್ತು ಆವೃತ್ತಿಗಳನ್ನು ಕಂಡಿದೆ. ಜಪನೀಸ್ ಭಾಷೆಯೂ ಸೇರಿದಂತೆ ಹದಿನೈದು ಭಾಷೆಗಳಿಗೆ ಅನುವಾದವಾಗಿದೆ. ಅಮೆರಿಕನ್ ವಿಶ್ವವಿದ್ಯಾನಿಲಯಗಳಲ್ಲಿ ಅವರ ಕವಿತೆಗಳು ಪಠ್ಯಗಳಾಗಿವೆ. ಜಪಾನಿ ವಿಶ್ವವಿದ್ಯಾಲಯವೊಂದರಲ್ಲಿ "ಮೈಸ್ಟೋರಿ" ಪಠ್ಯವಾಗಿದೆ. ಕಮಲದಾಸ್ ಅವರ ಕೃತಿಗಳು ಪ್ರಪಂಚದ ಹಲವು ಭಾಷೆಗಳಿಗೆ ಅನುವಾದವಾಗಿವೆ. ತಮ್ಮ ಬರವಣಿಗೆಯಲ್ಲಿ ಸಾಂಪ್ರದಾಯಿಕ ಸಮಾಜದ ಕಟ್ಟುಪಾಡುಗಳನ್ನು ಮೀರಿದ್ದರಿಂದ ಕಮಲಾ ಹಲವು ವಿರೋಧಗಳನ್ನು ಎದುರಿಸಬೇಕಾಯಿತು. ಮಲೆಯಾಳಮ್‌ನ ಇಂದಿನ ಮುಖ್ಯ ಲೇಖಕರಲ್ಲೊಬ್ಬರಾದ ಬಾಲಚಂದ್ರನ್ ಚುಳ್ಳಿಕ್ಯಾಡ್ ಅವರ ಪ್ರಕಾರ ವೈಕ್ಕಮ್ ಮಹಮ್ಮದ್ ಬಷೀರರಂತೆ ಕಮಲಾ ಕೂಡ ಸ್ವಂತಿಕೆಯುಳ್ಳ ಲೇಖಕಿ. ಪಾಲ್ ಸಕ್ಕರಿಯ, ಎಮ್ ಪಿ ನಾರಾಯಣ ಪಿಳ್ಳೈ ಮುಂತಾದ ಲೇಖಕರು ಸಮಾಜದ ಸಾಂಪ್ರದಾಯಿಕ ಸ್ವೀಕೃತ ಮೌಲ್ಯಗಳನ್ನು ಮೀರಿ ಬರೆದಾಗ ಮೆಚ್ಚಿಕೊಂಡ ಕೇರಳದ ಓದುಗರು ಕೂಡಾ ಅವರ ವಿಚಾರದಲ್ಲಿ ಹಾಗೆ ಮುಕ್ತಮನಸ್ಸಿನವರಾಗಲಿಲ್ಲ. ಆದರೆ ಕಮಲಾ ಈ ಯಾವ ವಿರೋಧಗಳನ್ನು ಲೆಕ್ಕಿಸಲಿಲ್ಲ.

ಕಲ್ಕತ್ತಾದಲ್ಲಿ ಪ್ರೌಢ ಶಾಲೆಯಲ್ಲಿ ಓದುತ್ತಿದ್ದ ೧೫ರ ಕಮಲಾಗೆ ತನಗಿಂತ ೧೫ ವರ್ಷ ಹಿರಿಯರಾದ ಮಾಧವದಾಸ್ ಜತೆಗಿನ ವಿವಾಹ ಆಘಾತವುಂಟುಮಾಡಿತು. ಸಾಹಿತ್ಯದಲ್ಲಿ ಆಸಕ್ತಿಯಿದ್ದ ಕಮಲಾ ಅವರಿಗೆ ಮದುವೆಯ ನಂತರ ಬಹಳ ಬೇಗ ಎರಡು ಮಕ್ಕಳ ಜವಾಬ್ದಾರಿ, ಕೌಟುಂಬಿಕ ಅಸಂತೋಷಗಳು ಎಲ್ಲ ಒತ್ತಡಗಳು ಬರವಣಿಗೆಯಲ್ಲಿ ಮುಕ್ತಿ

ಕಂಡವು. ತಮ್ಮ ಪತಿಯ ವಿಕ್ಷಿಪ್ತಸ್ವಭಾವ ತಮಗುಂಟುಮಾಡಿದ ನೋವಿನಿಂದ ಹೊರಬರಲು ಯಾವ ದಾರಿಗಳೂ ಇರಲಿಲ್ಲವೆಂದು ಹೀಗೆ ಬರೆಯುತ್ತಾರೆ.

'I could not admit to all that my marriage had flopped. I could not return home to the nallapat house, a divorcee, for there had been good will between our two families for three genaretions which I did not want to ruin (೧೦೨ ಮೈ ಸ್ಟೋರಿ).

ಅನಿವಾರ್ಯವಾಗಿ ಬರವಣಿಗೆ ಅಭಿವ್ಯಕ್ತಿಯ ಸಾಧನವಾಯಿತು. ಭಾವುಕವಾದ ಮತ್ತು ಸೂಕ್ಷ್ಮ ಸಂವೇದನೆಯ, ಅಭಿವ್ಯಕ್ತಿಯ ಕವಿತೆಗಳು ಮೊದಲು ಜನ್ಮ ತಳೆದವು. "My grief fell like drops of honey on the white sheets on my desk. my sorrows floated over the pages of magazines darkly as heavy monsoon clouds do in the sky...." (ಪು. ೧೦೫, ಮೈಸ್ಟೋರಿ).

ತಾವು ಕನಸಿದ ಆದರ್ಶ ಪ್ರೀತಿ ತಮಗೆ ದಕ್ಕದೇ ಹೋದ ಸ್ಥಿತಿಯನ್ನು "ಮೈ ಗ್ರ್ಯಾಂಡ್ ಮದರ್ಸ್ ಹೌಸ್" ಕವಿತೆಯಲ್ಲಿ ಚಿತ್ರಿಸಿದ್ದಾರೆ. ಕಮಲಾದಾಸ್‌ರ ಹೆಚ್ಚಿನ ಕವಿತೆಗಳ ವಸ್ತು ಪ್ರೀತಿ. ಒಂದು ಗೀಳು ಎನ್ನುವಷ್ಟರಮಟ್ಟಿಗೆ ಪ್ರೀತಿ ಅವರ ಬರಹವನ್ನು ಆವರಿಸಿದೆ. ಕಥೆ, ಕಾದಂಬರಿಗಳಲ್ಲೂ ಗಂಡು ಹೆಣ್ಣಿನ ಸಂಬಂಧಗಳಿಗೆ ಅವರು ಹೆಚ್ಚು ಗಮನಹರಿಸಿದ್ದಾರೆ. ತಮ್ಮ ಮುಕ್ತ ಬರವಣಿಗೆಯಿಂದಾಗಿ ಮನೆಯವರಿಗಾದ ಮುಜುಗರವನ್ನು ಕುರಿತು "she would have proved herself to be a mere embarrasment to the member of her family, for she is like a goldfish in a well-lit bowl whose movements are never kept concealed" (ಪು. ೧೦೫, ಮೈಸ್ಟೋರಿ).

ಕೇರಳದಲ್ಲಿ ಹೀಗೆ ಮುಕ್ತವಾಗಿ ಬರೆಯುವ ಪರಿಸರ ಇಲ್ಲದುದರಿಂದ ತಾವು ಆತ್ಮಾಭಿವ್ಯಕ್ತಿಯ ಕವಿತೆಗಳನ್ನು ಇಂಗ್ಲಿಷ್‌ನಲ್ಲೂ ಕತೆಗಳನ್ನು ಮಲೆಯಾಳಂನಲ್ಲೂ ಬರೆದೆನೆಂದು ಹೇಳಿಕೊಂಡಿದ್ದಾರೆ. ಅವರ ಬರವಣಿಗೆಯಲ್ಲಿ ಸ್ತ್ರೀಪುರುಷ ತಾರತಮ್ಯ ಮಾಡುವ ಸಮಾಜ ವನ್ನು ಕೆಣಕಿ ಎಚ್ಚರಿಸುವ ಗುಣ ಕಾಣುತ್ತದೆ. ಸಂಪ್ರದಾಯದ ಮುಸುಕಿನಲ್ಲಿ ನೆಮ್ಮದಿ ಯಾಗಿರುವ ಸಮಾಜಕ್ಕೆ, ಶಾಕ್ ನೀಡುವುದು ಅವರಿಗೆ ಇಷ್ಟ. ಆತ್ಮ ಕೇಂದ್ರಿತವಾದ ಕವಿತೆಗಳು, ಗಂಡು ಹೆಣ್ಣಿನ ಸಂಬಂಧದ ಸುತ್ತಸುತ್ತುವ ಕಥೆಗಳು ಸ್ತ್ರೀಯ ವ್ಯಕ್ತಿತ್ವದ ಒಳಗನ್ನು ಅನಾವರಣ ಗೊಳಿಸಿದವು. ತಮ್ಮ ತಂದೆ ತಾಯಿ ಮತ್ತು ಪತಿ ಇವರೆಲ್ಲರ ಕುರಿತು ಮುಚ್ಚು ಮರೆಯಿಲ್ಲದೆ ಬರೆಯುವ ಕಮಲಾ ಕೆಲವೊಮ್ಮೆ ಪರಸ್ಪರ ತದ್ವಿರುದ್ಧವಾಗಿ ಬರೆಯುತ್ತಾರೆ. ತಮ್ಮ ಬದಲಾಗುವ ವಿಚಾರಗಳ ಕುರಿತು "ನಾನು ಮತ್ತು ನನ್ನ ನಂಬಿಕೆಗಳು ಬದಲಾಗುತ್ತಿರುತ್ತವೆ" ಎಂದು ಶ್ರೀದೇವಿನಾಯರ್‌ಗೆ ನೀಡಿದ ಸಂದರ್ಶನದಲ್ಲಿ ಹೇಳಿದ್ದಾರೆ. ಪದೇ ಪದೇ ತಮ್ಮ ಅಭಿಪ್ರಾಯಗಳನ್ನು ಬದಲಿಸುವ ಕಮಲಾದಾಸ್‌ರ ತಾತ್ವಿಕತೆಯ ಬಗ್ಗೆ ಪ್ರಶ್ನೆಗಳೇಳುತ್ತವೆ. ಅವರೊಳಗೊಬ್ಬ ಬಂಡಾಯಗಾರ್ತಿ ಇದ್ದಾಳೆಂದು ಅವರ ಮಾತು ಮತ್ತು ಬರಹಗಳು ತಿಳಿಸುತ್ತವೆ. ಕಮಲಾಗೆ ಚಿಕ್ಕ ವಯಸ್ಸಿನಲ್ಲಿ ಸಿಕ್ಕಿ ಸಾಹಿತ್ಯದ ವಾತಾವರಣ (ಶಾಲಾ ದಿನಗಳಲ್ಲಿ ಅಣ್ಣನ ಜತೆ ಸೇರಿ ಕೈಬರಹದ ಪತ್ರಿಕೆ ಹೊರಡಿಸುತ್ತಿದ್ದರು) ಅಜ್ಜಿಯ ಮಾರ್ಗದರ್ಶನ,

ಪ್ರೀತಿ ಅಪರಿಮಿತ ಆತ್ಮವಿಶ್ವಾಸಕ್ಕೆ ಕಾರಣವಾದವು. ತಮ್ಮ ದೇಹ ಸೌಂದರ್ಯದ ಕುರಿತು ತುಂಬಾ ಕಾಳಜಿ ವಹಿಸುತ್ತಿದ್ದ ಕಮಲಾ ವಿವಾಹದ ಹೊಸತರಲ್ಲಿ ಪತಿ ತಮ್ಮನ್ನು ಅಲಕ್ಷಿಸಿದಾಗ ಮತ್ತೆ ಮತ್ತೆ ಅವಮಾನ ಅನುಭವಿಸಿದಾಗ ಬರೆದ ಕವಿತೆ "ಮೈಗ್ರ್ಯಾಂಡ್ ಮದರ್ಸ್ ಹೌಸ್" ನಲ್ಲಿ ಪ್ರೀತಿಗಾಗಿ ತಹತಹಿಸಿದ ಪರಿ ಮನಮಿಡಿಯುತ್ತದೆ. ಅವರ ಬರವಣಿಗೆಯ ಬಂಡಾಯದ ಹಿಂದಿನ ಪ್ರಚೋದನೆಯೇನು ಎಂದು ಈ ಕವಿತೆಯಲ್ಲಿ ಸೂಚನೆಯಿದೆ.

" I lived in such a house and was proud, and loved.....
.I who have lost
my way and beg now at strangers" doors to
Receive love, atleastin small Change?

ಈ ಬಗೆಯ ಕವಿತೆಗಳನ್ನೋದಿದಾಗ ಕಮಲಾ ಕವಿತೆಗಳ ನಾಯಕಿ ಭಾರತೀಯ ಆದರ್ಶ ಸ್ತ್ರೀಯ ತಾಯಿಯ ಮುಖಕ್ಕಿಂತ ಪ್ರೇಯಸಿಯಾಗಿ, ಒಬ್ಬ ಸ್ವತಂತ್ರ ವ್ಯಕ್ತಿಯಾಗಿ ತನ್ನನ್ನು ಗುರುತಿಸಿಕೊಳ್ಳುವವಳು ಅನಿಸುತ್ತದೆ ಮತ್ತು ನಮ್ಮ ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆ ಸ್ತ್ರೀಯರಿಂದ ಬಹಳ ತ್ಯಾಗವನ್ನು ನಿರೀಕ್ಷಿಸುತ್ತದೆಯೇ ಹೊರತು ಅವಳ ಭಾವನಾತ್ಮಕ ಅಗತ್ಯಕ್ಕೆ ಸ್ಪಂದಿಸುವ ಸಂದರ್ಭಗಳು ಕಡಿಮೆ. ಈ ಹಿನ್ನೆಲೆಯಲ್ಲಿ ಕಮಲಾದಾಸ್ ಕೃತಿಗಳಲ್ಲಿನ ಸ್ತ್ರೀಯರು ದುಃಖಿತೆಯರು. 'sammer vacation' ಕಥೆ ಕೂಡಾ ಈ ಮೇಲಿನ ಮಾತುಗಳಿಗೆ ನಿದರ್ಶನವಾಗಿದೆ.

ಕಮಲಾದಾಸ್ ವೈಶಿಷ್ಟ್ಯವಿರುವುದು ಅವರ ಬರವಣಿಗೆಯ ಕಲಾತ್ಮಕತೆಯಲ್ಲಿ, ಅವರ ಜೀವನ ಪ್ರೀತಿಯಲ್ಲಿ. ಹಳೆಯ ನೋವು ದುಃಖಗಳನ್ನು ನೆನೆಯುತ್ತಾ ಕೊರಗುವುದು ತನ್ನ ಸ್ವಭಾವವಲ್ಲ, ವರ್ತಮಾನದ ಬದುಕಿನ ಸೌಂದರ್ಯವನ್ನು ಸವಿಯುವುದು ತನ್ನ ಗುರಿ ಎಂದಿದ್ದಾರೆ. ಪಕ್ಷಿಯುಡೆ ಮಣಂ ಕತೆ (ಹಕ್ಕಿಯ ವಾಸನೆ ಎಂದು ಅನುವಾದಿತವಾಗಿದೆ) ಕಮಲಾದಾಸ್ ಅವರ ಕಥನ ಕೌಶಲ ಮತ್ತು ಅವರ ಸ್ವೋಪಜ್ಞ ಶೈಲಿಗೆ ನಿದರ್ಶನವಾಗಿದೆ. ಟೆಕ್ಸ್‌ಟೈಲ್ ಕಂಪೆನಿಯೊಂದರ ಜಾಹಿರಾತು ನೋಡಿ ಯುವತಿಯೊಬ್ಬಳು ಕೆಲಸ ಹುಡುಕಿ ದೊಡ್ಡ ಕಟ್ಟಡದ ಆಫೀಸ್‌ಗೆ ಹೋದಾಗ ಆಗುವ ಅನುಭವ ಕಥೆಯಾಗಿದೆ. ಹೆಣ್ಣನ್ನು ದೇಹ ಮಾತ್ರವಾಗಿ ನೋಡುವ ವ್ಯವಸ್ಥೆಯನ್ನು ಕಮಲಾ ತೀವ್ರವಾಗಿ ಖಂಡಿಸುತ್ತಾರೆ. ಆದರೆ ಇಡೀ ಕಥೆ ಎಲ್ಲೂ ಒಂದು ಸಾಲೂ ವಾಚ್ಯವಾಗಿಲ್ಲ. ಧ್ವನಿ ಪೂರ್ಣವಾಗಿ ಹೇಳುವುದರಲ್ಲಿ ಕಮಲಾ ನಿಪುಣರು. ಮಲೆಯಾಳಿ ಲೇಖಕ ಬಾಲಕೃಷ್ಣನ್ ಚುಳ್ಳಿಕ್ಕಾಡ್ ಪ್ರಕಾರ "truth was the beauty of her works. her mission was to realise the emotional truth. her works were never limited to what we call feminism now.... she redefined traditional values and also tallied them with her own experience".

ಹೀಗೆ ನಿಸ್ಸಂಕೋಚವಾಗಿ ತನ್ನ ಜೀವನಾನುಭವಗಳ ಅಭಿವ್ಯಕ್ತಿಯ ಜತೆಗೆ ಅವರಕಥೆ ಕವಿತೆಗಳಲ್ಲಿ ಶೈಲಿ, ಮನುಷ್ಯರ ಅವ್ಯಕ್ತ ಮುಖಗಳ ಸೂಕ್ಷ್ಮವಾದ ಅವಲೋಕನ, ಅಪರಿಮಿತ ವಾದ ಜೀವನ ಪ್ರೀತಿ ಅವರ ಬರವಣಿಗೆಗೆ ಆಕರ್ಷಣೆಯನ್ನು ನೀಡಿದೆ.

ಕಮಲಾದಾಸ್‌ರ ಪತಿ ಮಾಧವದಾಸ್ ಉದ್ಯೋಗನಿಮಿತ್ತ ದೆಹಲಿ, ಮುಂಬೈ, ಕಲ್ಕತ್ತಾ, ಶ್ರೀಲಂಕ ಮೊದಲಾದಕಡೆ ವಾಸಿಸುವಾಗ ಕಮಲಾ ಅವರಿಗೂ ಈ ಅನುಭವ ಬರವಣಿಗೆಗೆ ವೈವಿಧ್ಯ ತಂದಿತು. ಬಾಲ್ಯದಲ್ಲಿ ಕಲ್ಕತ್ತಾದ ಯುರೋಪಿಯನ್ ಶಾಲೆಯೊಂದರಲ್ಲಿ ಓದಿದ ಕಮಲಾಗೆ ವರ್ಣಭೇದದ ಅರಿವು ಚಿಕ್ಕವಯಸ್ಸಿನಲ್ಲೇ ಆಯಿತು. ಈ ವಿವರಗಳನ್ನು ಅವರು ಬಾಲ್ಯದ ನೆನಪುಗಳು ಕೃತಿಯಲ್ಲಿ ದಾಖಲಿಸಿದ್ದಾರೆ. "ಮನೋಮಿ"ಯಂತಹ ಕೃತಿಯಲ್ಲಿ ಜನಾಂಗೀಯ ಕಲಹದ (ಶ್ರೀಲಂಕಾ-ತಮಿಳು) ಕುರಿತು ಬರೆದಿದ್ದಾರೆ. ಆತ್ಮಚರಿತ್ರೆಗಳ ಮೂರು ಭಾಗಗಳಲ್ಲಿ ಮತ್ತು "ಸಮ್ಮರ್ ವೆಕೇಶನ್" ಕಥೆಗಳಲ್ಲಿ ಹುಟ್ಟಿ ಬೆಳೆದ ಊರು ಅಲ್ಲಿಯ ಜನಜೀವನದ ಸಮೃದ್ಧ ವಿವರಗಳಿವೆ. ಸಮ್ಮರ್ ಇನ್ ಕಲ್ಕತ್ತ, ದ ಡಿಸೆಂಡೆಂಟ್ಸ್, ಓನ್ಲಿ ದ ಸೌಲ್ ನೋಸ್ ಹೌ ಟು ಸಿಂಗ್, ದ ಸಿರಿನ್ಸ್, ಓಲ್ಡ್ ಪ್ಲೇ ಹೋಂ ಅಂಡ್ ಅದರ್ ಪೊಯಮ್ಸ್, ಕಮಲಾಗೆ ಖ್ಯಾತಿ ತಂದ ಕವನ ಸಂಗ್ರಹಗಳು. "alphabet of lust" ಇಂಗ್ಲಿಷ್‌ನಲ್ಲಿ ಬರೆದ ಕಾದಂಬರಿ. "a doll for the child prostitute" ಮತ್ತು "padmavati the harlot and other stories" ಇಂಗ್ಲಿಷ್‌ನಲ್ಲಿರುವ ಕವನ ಸಂಗ್ರಹಗಳು. ಏಶಿಯನ್‌ಪೊಯಟ್ರಿ ಅವಾರ್ಡ್, ಕೇರಳ ಸಾಹಿತ್ಯ ಅಕ್ಯಾಡೆಮಿ ಬಹುಮಾನ, ಇಂದಿರಾಪ್ರಿಯದರ್ಶಿನಿ ವೃಕ್ಷಮಿತ್ರಅವಾರ್ಡ್, ವೈಯಲಾರ್ ಪ್ರಶಸ್ತಿಗಳ ಜತೆಗೆ ಹಲವಾರು ಅಂತಾರಾಷ್ಟ್ರೀಯ ಪ್ರಶಸ್ತಿಗಳೂ ಕಮಲಾ ಅವರಿಗೆ ಲಭಿಸಿವೆ. ಶ್ರೀಲಂಕಾದಲ್ಲಿನ ಜನಾಂಗ ದ್ವೇಷದ ಕತೆ 'ಮನೋಮಿ'ಯನ್ನು ಸಾರಾ ಅಬೂಬಕ್ಕರ್ ಕನ್ನಡಕ್ಕೆ ಅನುವಾದಿಸಿದ್ದಾರೆ. "ಬಾಲ್ಯಕಾಲ ಸ್ಮರಣಂಗಳ್" ಕೃತಿಯನ್ನು ನಾ. ದಾಮೋದರಶೆಟ್ಟಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಕತೆಗಳು, ಕವಿತೆಗಳು ಕೆಲವೇ ಕೆಲವು ಕನ್ನಡಕ್ಕೆ ಅನುವಾದಗೊಂಡಿವೆ. "ನೀರ್ಮಾದಳಂ ಪೂತ್ತ ಕಾಲಮ್" ಕೃತಿಯನ್ನು ಪಾರ್ವತಿ ಐತಾಳ್ ಅನುವಾದಿಸಿದ್ದಾರೆ. "ನೀರ್ಮಾದಳಂ ಪೂತ್ತ್ ಕಾಲ್ಂ"ಗೆ ವಯಲಾರ್ ಪ್ರಶಸ್ತಿ ಸಿಕ್ಕಿದೆ, ಟೆಲಿ ಫಿಲ್ಮ್ ಆಗಿಯೂ ಜನಪ್ರಿಯವಾಗಿದೆ. ಕಮಲಾ ಒಳ್ಳೆಯ ಚಿತ್ರಕಲಾವಿದೆ ಸಹಾ. ಕೊಚಿನ್‌ನಲ್ಲಿ ಅವರ ಚಿತ್ರಗಳ ಪ್ರದರ್ಶನವೂ ನಡೆದಿದೆ. ಕೊಚಿನ್‌ನಲ್ಲಿ ನೆಲೆಸಿದ ಮೇಲೆ ಅವರು ಪರಿಸರ ಕಾಳಜಿ, ಸಾಮಾಜಿಕ ಕಾಳಜಿಯ ಸಂಘಟನೆಗಳ ಜತೆ ಸಂಪರ್ಕ ಹೊಂದಿದ್ದರು. ಮುಂಬಯಿಯಲ್ಲಿದ್ದಾಗ ಸಾಹಿತ್ಯ, ಸಂಸ್ಕೃತಿಯಲ್ಲಿ ಆಸಕ್ತಿಯಿದ್ದ ಸಮಾನಮನಸ್ಕರ ವೇದಿಕೆ "ಬಹು ತಾಂತ್ರಿಕ"ವನ್ನು ಸಂಘಟಿಸಿದ್ದರು.

ಇಷ್ಟು ಬರವಣಿಗೆ ಪ್ರಸಿದ್ಧಿಗಳ ನಂತರವು ಕಮಲಾದಾಸ್ ಅವರನ್ನು ನೋಡಿದಾಗ ಒಂದು ಬಗೆಯ ವಿಷಾದ, ಅತೃಪ್ತಿ ಅವರ ಮಾತುಗಳಲ್ಲಿ ಮುಖಭಾವದಲ್ಲಿ ಕಾಣುತಿತ್ತು. ಅವರ ನಿರಂತರ ಸೃಜನಶೀಲತೆಗೂ ಇದಕ್ಕೂ ಸಂಬಂಧವಿರಬಹುದು.

ಆಧುನಿಕ ಭಾರತೀಯ ಸಾಹಿತ್ಯ ಅಧ್ಯಯನಕಾರರಿಗೆ ಕಮಲಾ ಅವರ ಕೃತಿಗಳು ಮುಖ್ಯವಾದ ಆಕರಗಳಾಗಿವೆ.

## ಉಲ್ಲೇಖಗಳು


೧. ಕಮಲಾದಾಸ್, ಅನು. ನಾ. ದಮೋದರಶೆಟ್ಟಿ, **ಬಾಲ್ಯದ ನೆನಪಗಳು,** ಪ್ರ. ನ್ಯಾಶನಲ್ ಬುಕ್ ಟ್ರಸ್ಟ್

೨. Kamala Das, **My Story,** 1996 edition.

೩. **Nine Indian Women poets.**

೪. Ed. by. Lakshmi Holmstrom, **The inner courtyard.**

೫. ಅನು. ಪಾರ್ವತಿ ಜಿ ಐತಾಳ್, **ಮಲೆಯಾಳದ ಕಥೆಗಾರ್ತಿಯರು.**

# ಸಾಹಿತ್ಯ ಚರಿತ್ರೆ : ಸ್ತ್ರೀವಾದಿ ವಿಮರ್ಶೆ

ಸುಕನ್ಯಾ ಕಣಾರಳ್ಳಿ

ಮೊನ್ನೆ ಫೆಬ್ರುವರಿಯಲ್ಲಿ ನಡೆದ ಮಹಿಳಾ ಸಾಹಿತ್ಯ ಸಮ್ಮೇಳನದಲ್ಲಿ "ಸ್ತ್ರೀವಾದದ ಸೀಮಿತಿ ಚೌಕಟ್ಟನ್ನು ದಾಟಿ" ಎಂದು ಕನ್ನಡ ವಿಮರ್ಶಕರೊಬ್ಬರು 'ಕಿವಿಮಾತು' ಹೇಳಿದ್ದನ್ನು ಪತ್ರಿಕೆಯೊಂದು ಪ್ರಕಟಮಾಡಿತು. ಈ ಸಲಹೆ, 'ಹಿತದೃಷ್ಟಿಯಿಂದ ಹೇಳಿದ್ದು' ಎಂಬ ಸಮಜಾಯಿಷಿಯ ನೆಲೆಯಿಂದಲೇ ಬಂದಿದ್ದರೂ ಸಹ ಹೊಸದಂತೇನೂ ಕೇಳಿಸುವುದಿಲ್ಲ. ಅಂಚಿಗೆ ಒತ್ತರಿಸಲ್ಪಟ್ಟ ಸಮುದಾಯಗಳು ತಮ್ಮನ್ನು ಸಂಘಟಿಸಿಕೊಳ್ಳುವ ಪ್ರಯತ್ನ ಮಾಡಿದಾಗೆಲ್ಲ ಸವಲತ್ತುಳ್ಳವರ ವಲಯದಿಂದ ಈ ರೀತಿಯ 'ಬುದ್ಧಿ ಮಾತು' ಕೇಳಿಬರುವುದು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ನಿರ್ದಿಷ್ಟವಾಗಿ ಹೇಳಬೇಕೆಂದರೆ ತೀರಾ ಪರಿಚಿತ. ಅಂಚಿಗೆ ತಳ್ಳಲ್ಪಟ್ಟ ಪ್ರಕ್ರಿಯೆಯ ಹಿಂದೆ ನಡೆದಿರಬಹುದಾದ ಸಾಂಸ್ಕೃತಿಕ ರಾಜಕೀಯದ ಜೊತೆ ಗಂಭೀರ ಸಂವಾದ ನಡೆಸುವ ಪ್ರಯತ್ನ ಮಾಡದೇ ಸಾರಾಸಗಟಾಗಿ ಕಿವಿಮಾತು ಹೇಳುವವರ ವಿವೇಕದಿಂದ ಈ ಒತ್ತರಿಸಲ್ಪಟ್ಟ ಸಮುದಾಯಗಳಿಗೆ ಹೆಚ್ಚಿನ ಪ್ರಯೋಜನವೇನೂ ಆಗದು. "ಬಂಡಾಯ ಸಾಹಿತಿಗಳು ಬರೀ ಬೊಬ್ಬೆ ಹೊಡೆಯುತ್ತಾರೆ" ಎನ್ನುವಾಗಲೂ, 'ದಲಿತರು ಇನ್ನೂ ಹೆಚ್ಚಿನ ಸೂಕ್ಷ್ಮ ಸಂವೇದನೆಗಳನ್ನು ಬೆಳೆಸಿಕೊಳ್ಳಬೇಕು" ಎನ್ನುವಾಗಲೂ, ಈ 'ವಿಶಾಲ ಮನೋಭಾವದ' ರಾಜಕೀಯವೇ ಕೆಲಸ ಮಾಡುತ್ತಿರುತ್ತದೆ. ಸೂಕ್ಷ್ಮವಾಗಿ ನೋಡಿದಾಗ 'ಚೌಕಟ್ಟುಗಳನ್ನು ದಾಟಿದ' ಈ ವಿಶಾಲ ಮನೋಭಾವವೂ ಸಹ ಲಿಂಗ--ಜಾತಿ--ವರ್ಗದ ವಾಸನೆಗಳಿಂದ ಮುಕ್ತವಾಗಿರುವುದಿಲ್ಲ. ದಾಖಲಿತ ಕನ್ನಡ ಸಾಹಿತ್ಯ ಚರಿತ್ರೆಯನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದು.

ಸಾಹಿತ್ಯ ಚರಿತ್ರೆಯೆನ್ನುವುದು ಕಾಲ ಕಾಲಕ್ಕೆ ಪ್ರಭಾವೀ ಕೇಂದ್ರಗಳು ಪ್ರಜ್ಞಾಪೂರ್ವಕವಾಗಿಯೋ ಅಥವಾ ಅಲ್ಲದೆಯೋ ನಿರ್ಮಿಸಿದ ಒಂದು ಹೆಣಿಗೆ. ಈ ಅರ್ಥದಲ್ಲಿ ಸಾಹಿತ್ಯ ಚರಿತ್ರೆಯೆನ್ನುವುದು ಕಥಾನಕಗಳ ಮೂಲಕ ನಿರ್ಮಿಸಲ್ಪಟ್ಟ ಹೆಣಿಗೆ. ಘಟನೆಗಳ ಮೂಲಕ ಸಿದ್ಧಾಂತಗಳು ರೂಪುಗೊಳ್ಳುತ್ತವೋ ಅಥವಾ ಸಿದ್ಧಾಂತದ ಮೂಲಕ ಘಟನೆಗಳು ಸಂಭವಿಸುತ್ತವೋ ಎಂಬುದು ಬೀಜ-ವೃಕ್ಷದ ಜಿಜ್ಞಾಸೆಯಷ್ಟೇ ವಿವಾದಾಸ್ಪದ. ಏನೇ ಇರಲಿ, ಹೆಣೆದ ಚರಿತ್ರೆಯ ಹಿಂದೆ ಯಾವ್ಯಾವ ತಾತ್ವಿಕ ಕಾರಣಗಳು ಕೆಲಸ ಮಾಡಿವೆ ಎನ್ನುವುದು ಯಾವ ಚರಿತ್ರೆ ಸುಳ್ಳು ಅಥವಾ ಯಾವುದು ನಿಜ ಎನ್ನುವುದಕ್ಕಿಂತ ಹೆಚ್ಚು ಉಪಯುಕ್ತವಾಗಬಲ್ಲದೆನಿಸುತ್ತದೆ.

ಕನ್ನಡದಲ್ಲಿಯೂ ಸಹ ಒಂದು ಸಾಹಿತ್ಯಕ ಚರಿತ್ರೆಯಿಲ್ಲ. ಒಂದಕ್ಕಿಂತ ಜಾಸ್ತಿಯೇ ಇವೆ. ಆದರೂ ಒಂದು ರೀತಿಯ ಚರಿತ್ರೆ, ತನ್ನ ಧ್ವನಿಯ ಪ್ರಾಬಲ್ಯತೆಯನ್ನು ಸ್ಥಾಪಿಸಿಕೊಂಡು ಮುಖ್ಯವಾಹಿನಿ ಪಟ್ಟವನ್ನು ಧರಿಸಿಬಿಟ್ಟಿದೆ. 'ಶ್ರೀ ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ'ಯಿಂದ ಹಿಡಿದು 'ಭಾರತೀಯ ಸಾಹಿತ್ಯ ಚರಿತ್ರೆ'ಯಂತಹ ಅಕಾಡೆಮಿಕ್ ಪ್ರಾಜೆಕ್ಟಿನಲ್ಲಿ ಸಹ ಹೆಚ್ಚು ಕಡಿಮೆ ಒಂದೇ ರೀತಿಯ ತಾತ್ವಿಕ ಹಂದರವಿದೆ. ಈ ಹಂದರದ ಸಾಮಾಜಿಕ, ಸಾಂಸ್ಕೃತಿಕ ಒತ್ತಡಗಳೇನು? ಇದು ತನಗೆ ಹೊಂದಿಕೊಳ್ಳದ ಧ್ವನಿಗಳನ್ನು ಹೇಗೆ ಮೌನವಾಗಿಸಿದೆ? ಯಾರ್ಯಾರಿಗೆ ಯಾವ್ಯಾವ ಸ್ಥಾನವನ್ನಿತ್ತು 'ಗೌರವಿಸಿದೆ'? ಇದರ ಹಿಂದಿನ ಲಿಂಗ--ಜಾತಿ-ವರ್ಗದ ವಾಸನೆಗಳಿಂದ ಮುಕ್ತವಾಗಿರುವುದಿಲ್ಲ. ದಾಖಲಿತ ಕನ್ನಡ ಸಾಹಿತ್ಯ ಚರಿತ್ರೆಯನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದು.

ವಿಮರ್ಶೆಯ ಕೆಲಸ ಬರೀ ವಿಮರ್ಶಿಸುವುದಷ್ಟೇ ಅಲ್ಲ, ನೋಡುವ ದೃಷ್ಟಿಕೋನವನ್ನು ರೂಪಿಸುವುದು ಎನ್ನುವುದು ಓದುಗರಿಗೆ ಗೊತ್ತಿರುವ ವಿಷಯ. ಚರಿತ್ರಕಾರ ವಿಮರ್ಶಕನೂ ಹೌದು. ಸಾಹಿತ್ಯಕ ಚರಿತ್ರೆಕಾರ ಚರಿತ್ರೆಯನ್ನು ಬರೆಯುವ ರಾಜಕೀಯಕ್ಕಷ್ಟೇ ಅಲ್ಲ, ವಿಮರ್ಶೆಯ ರಾಜಕೀಯಕ್ಕೂ ಪಕ್ಕಾಗಿರುತ್ತಾನೆ. ಆದ್ದರಿಂದಲೇ ಚರಿತ್ರೆಗೆ ಬೇಕಾದ ಸಾತತ್ಯನ್ನು ಹೆಣೆಯುವುದಷ್ಟೇ ಅಲ್ಲ, ಜೊತೆಗೆ ಯಾರಿಗೆ ಯಾವ ಸ್ಥಾನ ಸಲ್ಲಬೇಕು ಎಂದು ಶ್ರೀಮದ್ಗಾಂಭೀರ್ಯದಿಂದ ಸೂಚಿಸುತ್ತಾ ಮುನ್ನಡೆಯುತ್ತಾನೆ. ಹಾಗೆಂದ ಮಾತ್ರಕ್ಕೆ ಅದರ ಹಿಂದೆ ಒಂದು ಘನವಾದ ಹುನ್ನಾರವಿದೆ ಎಂದರ್ಥವಲ್ಲ. ಚರಿತ್ರೆ-ವಿಮರ್ಶೆಗಳ ರಾಜಕೀಯಕ್ಕೆ ಪಕ್ಕಾಗುವುದು ಎಂದು ಸೂಚಿಸಿದ್ದು ಅದಕ್ಕೇ. ಈ ರಾಜಗಾಂಭೀರ್ಯಕ್ಕೆ ಅನಿವಾರ್ಯವಾಗಿಯೋ ಏನೋ, 'ಪರ್ಯಾಯವೆಂದು ತೋರುವ ಪರಂಪರೆಗಳ ಎಗ್ಗು ಜಾಸ್ತಿ ಇರುವುದಿಲ್ಲ. ಹಾಗಾಗಿಯೇ, ಎಲ್ಲೋ ಚುಟುಕಾಗಿ ಅವುಗಳ ಸಾಹಿತ್ಯದ ಬಗ್ಗೆ 'ಇವು ಶ್ರೇಷ್ಠ ಸಾಹಿತ್ಯವೆಂದು ಹೇಳಲಾಗುವುದಿಲ್ಲ. ಆದರೆ ಪ್ರಾಮಾಣಿಕ ಪ್ರಯತ್ನವೆಂದು ಹೇಳಬಹುದೇನೋ' ಎಂದೋ ಅಥವಾ 'ಶ್ರೇಷ್ಠ ಅಂತೂ ಅಲ್ಲ, ಆದರೆ 'ಯಶಸ್ವಿ' ಅಥವಾ 'ಜನಪ್ರಿಯ' ಪಟ್ಟಿಗೆ ಸೇರಿಸಬಹುದು' ಎಂಬ ಘನಗಾಂಭೀರ್ಯದ ತೀರ್ಮಾನ ನೀಡಿ ಮುಂದೆ ಸಾಗುತ್ತದೆ.

ಹಿಂತಿರುಗಿ ನೋಡುವ ಹಂಗುಳ್ಳ ಚರಿತ್ರಕಾರನ ದೃಷ್ಟಿಗೆ ಕೆಲವು ಹ್ಯಾಂಡ್‌ಪೋಸ್ಟ್‌ಗಳ ಅಗತ್ಯವಿರುತ್ತದೆ. ಇಲ್ಲದಿದ್ದರೆ ಕಾಲ ಕಲಸುಮೇಲೋಗರವಾಗಿ ಬಿಡುವ ಅಪಾಯವೇ ಹೆಚ್ಚು. ಹೆಚ್ಚಿನಂಶ ಈ ಹ್ಯಾಂಡ್‌ಪೋಸ್ಟ್‌ಗಳು ಒಂದು ಜನಾಂಗದ ಸಾಮಾಜಿಕ ಮತ್ತು ಸಾಂಸ್ಕೃತಿಕ ತಿರುವುಗಳಾಗಿರುತ್ತವೆ. ಆದರೆ ಮುಖ್ಯವಾಹಿನಿ ಚರಿತ್ರೆಯ ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ ಚೌಕಟ್ಟಿನಲ್ಲಿ ಇಲ್ಲದಿರುವವರ ಚರಿತ್ರೆಯ ಪಾಡೇನು? ಅವರ ಸಾಹಿತ್ಯದ ದಾಖಲೆಯ ಸ್ಥಿತಿಯೇನು? ಕನ್ನಡ ಸಾಹಿತ್ಯ ವಿಮರ್ಶೆಯ ಚೌಕಟ್ಟು ನವ್ಯದ ಎಳೆಗಳೊಂದಿಗೆ ಗಾಢವಾಗಿ ತಳುಕು ಹಾಕಿಕೊಂಡಿರುವುದರಿಂದ ಪರ್ಯಾಯ ಪರಂಪರೆಗಳ ಧ್ವನಿಗಳೂ ಸಹ -- ಅವು ಪ್ರಗತಿಶೀಲದ್ದಾಗಲಿ, ಬಂಡಾಯದ್ದಾಗಿರಲಿ, ಅಥವಾ ಸ್ತ್ರೀವಾದದ್ದೇ ಆಗಿರಲಿ --- ಇದರ ಒರಗಲ್ಲಿಗೇ ಹಚ್ಚಲ್ಪಟ್ಟು, ತಾವು ಶ್ರೇಷ್ಠವೋ, ಜನಪ್ರಿಯವೋ, ಕನಿಷ್ಠವೋ ಎಂದು

ಗೊಳಿಸುವ ಪ್ರಯತ್ನವಾಗಬೇಕು. ಬಹುಶಃ ಆಗ ಮಾತ್ರ ಈ ಪರ್ಯಾಯ ಧ್ವನಿಗಳನ್ನು ಆಲಿಸುವ ಬೌದ್ಧಿಕ ತಾಳ್ಮೆ ಮತ್ತು ಪ್ರಾಮಾಣಿಕತೆ ಸಾಧ್ಯವಾದೀತು. ವಿಮರ್ಶೆಯ ಕೆಲಸವೇ ತನಗೆ ಬೇಕಾದಂಥ ಓದುಗಳನ್ನು ಸೃಷ್ಟಿಸುವುದು. ಇಂಥ ಹುನ್ನಾರಕ್ಕೆ ಏನೇ ತಾತ್ವಿಕ ಮುಗ್ಧತೆಯ ಸೋಗು ಹಾಕಿದರೂ ಅರ್ಥಗಳು ತಾನೇ ತಾನಾಗಿ ಹುಟ್ಟುವುದಿಲ್ಲ, ಅವುಗಳನ್ನು ಹೊಸೆಯ ಬೇಕು ಎಂಬ ಪ್ರಜ್ಞೆ ಇದ್ದೇ ಇರುತ್ತದೆ. ಈ ಅರ್ಥಗಳನ್ನು ಹೊಮ್ಮಿಸುವ ಸಂಜ್ಞಾತ್ಮಕ ಮಾದರಿಗಳು ಸಾಂಸ್ಥಿಕ ರಚನೆಗಳು ಬಲದಿಂದಲೇ ಅಸ್ತಿತ್ವದಲ್ಲಿರುತ್ತವೆ. ಈ ಅರ್ಥದಲ್ಲಿ ಪಠ್ಯವೆಂದರೇ ಅರ್ಥಗಳು ಹೊಸೆಯಲ್ಪಡುವ ಒಂದು ಎನ್‌ಕೌಂಟರ್ ಸೈಟ್.

ವೈದೇಹಿಯನ್ನು ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ವೈದೇಹಿ ಅವರನ್ನು ಕೆಲವೊಮ್ಮೆ 'ನವ್ಯದ' ಲೇಖಕಿ ಎಂದು ಕರೆಯಲಾಗುತ್ತದೆ. ಯಾವ ಸೀರಿಯಸ್ಸಾದ ಬೌದ್ಧಿಕ ವಿಶ್ಲೇಷಣೆ ಅಥವಾ ತಾಳ್ಮೆ ಇಲ್ಲದೆ ಮಾಡುವ ಅವಸರದ ವರ್ಗೀಕರಣ ಇದು. ಹಾಗೆ ನೋಡಿದರೆ ಚರಿತ್ರೀಕರಣದ ಈ ಸಿದ್ಧ ಮಾನದಂಡಗಳನ್ನು ಮಹಿಳಾ ಬರಹಗಾರರಿಗೇ ಅನ್ವಯಿಸುವುದೇ ತಪ್ಪು. ಈ ಕಾಲಘಟ್ಟಗಳು ಸಮಾಜದಲ್ಲಿ 'ಹೊರ' ಪ್ರಪಂಚದಲ್ಲಿ ನಡೆಯುತ್ತಿದ್ದ 'ಘನ'ವಾದ ಸಾಮಾಜಿಕ/ರಾಜಕೀಯ ವಿದ್ಯಮಾನಗಳನ್ನು ದೃಷ್ಟಿಯಲ್ಲಿಟ್ಟು ಕೊಂಡು ಮಾಡಿರುವಂಥವು. ನವ್ಯದವರ ಅನೇಕ ತೆವಲುಗಳ ಹಂಗು ವೈದೇಹಿಗೆ ಅಥವಾ ಆ ಕಾಲದಲ್ಲಿ ಅವರು ಬರೆಯುತ್ತಿದ್ದರು ಎಂಬ ಒಂದೇ ಕಾರಣಕ್ಕೆ ನವ್ಯವೆಂದು ಕರೆಯಲ್ಪಡುವ ಯಾವ ಲೇಖಕಿಗೂ ಇದ್ದಂತೆ ಕಾಣುವುದಿಲ್ಲ. ಲೈಂಗಿಕತೆಯೆಂದರೆ ಪುರುಷ ಲೈಂಗಿಕತೆ ಎಂಬ ಸ್ವ-ಸೂಚಿತ ಪರಿಕಲ್ಪನೆ ಎಂಬಂತೆ ವಿಜೃಂಭಿಸಿ ಮಾತನಾಡುವ, ನಾನು ಅಥೆಂಟಿಕ್ ಆಗಬೇಕು ಎಂದು ಎಷ್ಟೇ ಗೋಳಿಟ್ಟರೂ ವಾಚ್ಯದಲ್ಲೂ ಸ್ಖಲಿಸಲಾಗದ ನವ್ಯದ ಲೇಖಕರಿಗೂ, ಲೈಂಗಿಕತೆಯ ನಿರಚನೆಗೆ ಸಂಬಂಧಪಟ್ಟಂತೆ ಪ್ರಚಂಡ ವಿದ್ರೋಹಕಾರಿ ಪಾತ್ರಗಳನ್ನು ತಣ್ಣಗೆ ಮೂಡಿಸುವ ವೈದೇಹಿಗೂ ತುಂಬ ವ್ಯತ್ಯಾಸವಿದೆ. ಈ ವ್ಯತ್ಯಾಸದ ಎಳೆಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದರೆ, 'ಹಿಸ್ ಸ್ಟೋರಿ'ಯ ಮಾನದಂಡಗಳನ್ನು ಪ್ರಶ್ನೆಗೊಳಪಡಿಸುವುದು ಸಾಧ್ಯ ವಾಗುತ್ತದೆ.

ಎಲ್ಲ ಲೇಖಕಿಯರದು ಸ್ಪಷ್ಟವಾಗಿಯೇ ಜೆಂಡರ್ಡ್ ಎಂದು ಕರೆಯಬಲ್ಲಂತಹ ಬರವಣಿಗೆ. ಅಂದರೆ ತನಗೆ ಯಾವ ಚೌಕಟ್ಟುಗಳೂ ಬೇಡ ಎಂದು ಸೋಗು ಹಾಕುವ ಬರವಣಿಗೆ ಅಲ್ಲ. 'ಸಾರ್ವತ್ರಿಕ' ಮಾನದಂಡಗಳನ್ನು ಉಪಯೋಗಿಸಿದರೆ ಅವಸರದ ವರ್ಗೀಕರಣ ಆಗಬಲ್ಲದೇ ಹೊರತು, ಒಳನೋಟಗಳು ದಕ್ಕುವುದು ಅನುಮಾನಾಸ್ಪದ. ಚೌಕಟ್ಟುಗಳ ಹಂಗೇ ಬೇಡವೆಂಬ ನಿಲುವಿನಿಂದ ವೈದೇಹಿ 'ನವ್ಯ', 'ಬಂಡಾಯ' ಇತ್ಯಾದಿ ವರ್ಗೀಕರಣಗಳನ್ನು ಮೀರಿದವರು ಎಂಬ ವ್ಯಾಖ್ಯಾನೆಯೂ ಅಷ್ಟೇ ಭೋಳೆತನದ್ದಾಗಿರುತ್ತದೆ ಅಥವಾ ವೈದೇಹಿಯ 'ಆಧ್ಯಾತ್ಮಿಕ ಪ್ರೀತಿ' ಅಕ್ಕಮಹಾದೇವಿಯ ಚೆನ್ನಮಲ್ಲಿಕಾರ್ಜುನ ಪ್ರೀತಿ ಯಂತೆ ಎಂದು ಅಕ್ಕನ ವಚನಗಳ ಕ್ರಾಂತಿಕಾರಿ ಸಾಧ್ಯತೆಗಳ ಅಂಚನ್ನು ಮೊಂಡುಗೊಳಿಸಿದಂತೆ ವೈದೇಹಿಯ ಧ್ವನಿಯನ್ನೂ ಅಪ್ರಾಪ್ರಿಯೇಟ್ ಮಾಡಿಕೊಳ್ಳುವುದು 'ದಿವ್ಯ ನಿರ್ಲಕ್ಷ್ಯ'ಕ್ಕಿಂತಲೂ

ಅಪಾಯಕಾರಿಯೇನೋ. ಸಾಹಿತ್ಯ ಚರಿತ್ರೆಯಲ್ಲಿ, ವಿಮರ್ಶೆಯಲ್ಲಿ ವೈದೇಹಿಯನ್ನು ಸ್ಥಾನೀಕರಿಸಿರುವ ರಾಜಕೀಯ, ಅಂಥ ಪ್ರಯತ್ನಗಳ ಪೂರ್ವಗ್ರಹಗಳ ಮೇಲೂ ಬೆಳಕು ಚೆಲ್ಲಬಹುದು.

ಹೆಂಗಸರು ಬರೆದದ್ದೆಲ್ಲ 'ಅಡುಗೆ ಮನೆ ಸಾಹಿತ್ಯ' ಎಂಬ ಉಡಾಫೆ ನಿಲುವಿನಿಂದ "ಸ್ತ್ರೀವಾದದ ಚೌಕಟ್ಟನ್ನು ದಾಟಿ" ಎಂದು ಕಿವಿಮಾತು ಹೇಳುವ ನಿಲುವಿಗೆ ನಮ್ಮ ವಿಮರ್ಶಕರು ಪ್ರಗತಿ ಹೊಂದಿರಬಹುದು. ಅದಕ್ಕಿಂತ ಹೆಚ್ಚಾಗಿ ಇಲ್ಲಿ ಪ್ರಸ್ತುತವಾದದ್ದು ಯಾವುದು ಚೌಕಟ್ಟಲ್ಲ ಎಂಬ ಪ್ರಶ್ನೆ. ಚೌಕಟ್ಟುಗಳನ್ನು ಮೀರುವ ಯುತೋಪಿಯನ್ ಆಶಯ ಯಾವುದೇ ಸೃಜನಾತ್ಮಕ ಕ್ರಿಯೆಗೆ ಭಾಷೆ, ನಾಡು, ದೇಶ, ಕಾಲ, ಲಿಂಗದ ಚೌಕಟ್ಟುಗಳಿದ್ದೇ ಇರುತ್ತವೆ ಎಂಬುದನ್ನು ಮರೆಯುವ ಸಾಧ್ಯತೆ ಇರುತ್ತದೆ. ಹಾಗೆ ಮರೆತಾಗ ಜನಸಂಖ್ಯೆಯಲ್ಲಿ ಶೇಕಡಾ ಐವತ್ತು ಭಾಗವಿರುವ ಹೆಂಗಸರಿಗೆ ಕೇವಲ ಶೇಕಡಾ ಮೂವತ್ಮೂರು ಮೀಸಲಾತಿಯ ಬಗ್ಗೆಯೂ ಬಗ್ಗೆ ನಮ್ಮ ರಾಜಕಾರಣಿಗಳು "ಹೆಂಗಸರು ಮೀಸಲಾತಿಯಂತಹ ಕ್ಷುಲ್ಲಕ ವಿಷಯಗಳನ್ನು ಬಿಟ್ಟು 'ದೇಶ ಕಟ್ಟುವಂತಹ' ಗಹನವಾದ ಸಂಗತಿಗಳತ್ತ ದೃಷ್ಟಿಹರಿಸಬೇಕು" ಎಂದು ಹೇಳುವ ಕಿವಿಮಾತಿನಂತೆಯೇ ಕೇಳಿಸುವ ಅಪಾಯ ಹೆಚ್ಚಾಗಿರುತ್ತದೆ.

# ‘ಸಂಗ್ಯಾ-ಬಾಳ್ಯಾ’ ನಾಟಕದಲ್ಲಿ ಲಿಂಗಾಧಾರಿತ ಸಂವೇದನೆಗಳು

ಆರ್.ಜಿ. ಮಠಪತಿ

‘ಶಕ್ತಿ ಸಂಗಮ ತಂತ್ರ’ದ ಒಂದು ಪದ್ಯ -

“Woman is the creator of the Universe
The Universe is her form,
Woman is the foundation of the world
She is the ture form of the body,
whatever from she takes,
whether the from of a man or a woman,
Is the superior form.”

In woman is the form of all things,
of all that lives and moves in the world.
There is no jewel rarer than a woman,
No condition superior to that of a woman,
There is not, nor has been, nor will be
any destiny to equal that of a woman;
There is no kingdom, no wealth
to be compared to a woman
There is not, nor has been, nor will be
any holy place like unto a woman

There is no prayer to equal a woman
There is not, nor has been, nor will be
any youga to compare with a woman,
no mantra nor asceticism
to match a woman
There is not, nor have been, nor will be
any riches more valuable than woman

ಮೇಲ್ಕಾಣಿಸಿದ ಈ ಪದ್ಯ ಬರೀ ಕವಿ ಸಮಯದ ಅಭಿವ್ಯಕ್ತಿಯಾಗಿರದೆ ಮಹಿಳೆಯ ಆದರ್ಶ ಚಿತ್ರಣವೂ ಆಗಿರದೆ, ವೈಜ್ಞಾನಿಕವಾಗಿಯೂ ಹಾಗೂ ವ್ಯಾವಹಾರಿಕವಾಗಿಯೂ,

ಭೌತ ಪ್ರಪಂಚದಲ್ಲಿ, ಮಹಿಳೆಯೊಂದಿಗಿನ ಸಂಘರ್ಷ, ಸಂಧಾನ, ಸಂವಹನ ಹಾಗೂ ಸಹಬಾಳ್ವೆಯೊಂದಿಗೆ, ನಾವು ಶತಶತಮಾನಗಳಿಂದ ಕ್ರಮಿಸಿದ ಬದುಕಿನ ಅನುಭವವಾಗಿದೆ. ಆದರೆ ಸ್ತ್ರೀಯನ್ನು ಕುರಿತಾಗಿ ಇಂಥ ಅಮೋಘ ವ್ಯಾಖ್ಯಾನವನ್ನು ನೀಡಿದ ಇದೇ ಸಂಸ್ಕೃತಿಯು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯ ಆರಾಧನೆಯ, ಅತೀ ದೊಡ್ಡ ಪರಂಪರೆಯ, ವಾರಸು ದಾರಿಕೆಯನ್ನು ಒಪ್ಪಿಕೊಂಡಿದೆ. ಈ ನೆಲದ ಎಲ್ಲ ಮಹಾಕಾವ್ಯಗಳ, ವೇದ-ಉಪನಿಷತ್‌ಗಳ, ಸ್ಮೃತಿ-ಪುರಾಣಗಳ, ಆಗಮ-ಆಚಾರಗಳ ಶಿಷ್ಟ ಮಾರ್ಗ ಹಾಗೂ ದೇಸಿ ಬರಹಗಳ ಅಥವಾ ಅಭಿವ್ಯಕ್ತಿಗಳ ಮೂಲ ಸೆಲೆಯಾದ ಮೌಖಿಕ ಪರಂಪರೆಯಂತೂ (ಜನಪದ ಸಾಹಿತ್ಯ) ಸ್ತ್ರೀಯನ್ನು ಪುರುಷನ ಪಡಿನೆಳಲಾಗಿಯೇ ನೋಡಿದ್ದು ಸರ್ವವಿಧಿತವಾದ ಮಾತು. ಪಿತೃಪ್ರಧಾನ ಸಮಾಜದ ಸಮರ್ಥನೆಯ ವಿಸ್ತೃತ ಸಾಹಿತ್ಯವಾದ ಜನಪದ ಸಾಹಿತ್ಯವಂತೂ ಸ್ತ್ರೀಗೆ ಎರಡನೇ ಸ್ಥಾನದಲ್ಲಿಯೇ ನಿಲ್ಲಿಸಿರುವುದು ಸಾಮಾನ್ಯವಾಗಿ ನಾವೆಲ್ಲರೂ ತಿಳಿದ ವಿಚಾರ.

ಇದು ನಮ್ಮ ಹೊರಗೂ ಅಷ್ಟೆ. ಸತ್ಯ ಚೈತನ್ಯರು ಇತ್ತೀಚೆಗೆ ಬರೆದ 'Famale Subversion : The Spirit of Litith in Indian Culture' ಎಂಬ ಲೇಖನದಲ್ಲಿ ಒಂದು ಕುತೂಹಲಕರ ವಿಷಯವನ್ನು ನಾನು ಗಮನಿಸಿದ್ದೇನೆ. ಅವರು ಉಲ್ಲೇಖಿಸುತ್ತಾರೆ : ಕ್ರಿಶ್ಚಿಯನ್‌ರು ನಂಬಿರುವಂತೆ ಆ್ಯಡಮ್‌ನ ಮೊದಲ ಹೆಂಡತಿ ಈವ್ ಅಲ್ಲ. ಬದಲಾಗಿ ಲಿಲಿಥ್, ಅವಳು ಆ್ಯಡಮ್‌ನಂತೆಯೇ ನಿಸರ್ಗದ ಮಗಳು. ಪುರುಷನಾದ ಆ್ಯಡಮ್ ಆಕೆಯ ಮೇಲಿನ ತನ್ನ ಅಧಿಕಾರದ ಚಲಾವಣೆಯ ಸಂಕೇತದಂತೆ, ಲೈಂಗಿಕತೆಯಲ್ಲಿ ತೊಡಗುವ ಎಲ್ಲ ವೇಳೆಯಲ್ಲಿ ಲಿಲಿಥ್ ಯಾವಾಗಲೂ ಕೆಳಗೇ ಮಲಗಿಕೊಳ್ಳಬೇಕು ಎಂದು ಆದೇಶಿಸಿದ. ಪುರುಷನಂತೆಯೇ ತನ್ನ ಸ್ವಾಭಿಮಾನವನ್ನು ರಕ್ಷಿಸಿಕೊಳ್ಳಲು ಸಿದ್ಧಳಾದ ಲಿಲಿಥ್, ಆ್ಯಡಮ್‌ನ ಈ ವಿಚಾರವನ್ನು ವಿರೋಧಿಸಿ, ಆತನನ್ನು ಧಿಕ್ಕರಿಸಿ, ಸೇಟನ್‌ನನ್ನು ಮದುವೆಯಾಗುತ್ತಾಳೆ. ಈ ಕಾರಣಕ್ಕಾಗಿ ಲಿಲಿಥ್ ರಾಕ್ಷಸಿಯಾಗಿ, ನರಭಕ್ಷಕಿಯಾಗಿ, ಕಾಮುಕಳಾಗಿ ಆ್ಯಡಮ್‌ನ ಅನುಯಾಯಿಗಳಾದ ಪುರುಷರಿಂದ, ಆನಂತರದಲ್ಲಿ ಚರಿತ್ರೆಯಲ್ಲಿ ದಾಖಲಿಸಲ್ಪಟ್ಟಿದ್ದಾಳೆ ಎಂದು ಸತ್ಯಚೈತನ್ಯ ಹೇಳುತ್ತಾರೆ.

Like the semitic cultures the Indian culture too insisted that women play r seondary role to men. Our culture too insisted that a woman should lire her life to fulfil the purpose of her man and serving him is her highest duty" ಇದು ಸಮಾಜ, ಸಂಸ್ಕೃತಿ ಹಾಗೂ ಸಾಹಿತ್ಯದ ಸೂಕ್ಷ್ಮ ಅಭ್ಯಾಸಿಗಳಾದ ಯಾರಿಗೂ ಮನವರಿಕೆಯಾದ ವಿಷಯ. ಜನಪದ ಸಂಸ್ಕೃತಿಯಲ್ಲಿ ಮಹಿಳೆ ಮೂರು ಮುಖ್ಯವಾದ ರೀತಿಯಲ್ಲಿ ತನ್ನ ಕುರಿತಾಗಿರುವ ತಾರತಮ್ಯವನ್ನು ಪ್ರತಿಭಟಿಸಿದ್ದಾಳೆ.

೧. ಅನ್ಯಾಯಕ್ಕೆ ಪ್ರತಿಕ್ರಿಯೆಯನ್ನು ಹುಚ್ಚಿನ ಮೂಲಕ ವ್ಯಕ್ತಪಡಿಸುವಂತಹದು. ಮನಸ್ಸಿನ ಸುಪ್ತಪ್ರಜ್ಞೆಯ ವಲಯದೊಳಗಿನ ಚಟುವಟಿಕೆ ಇದು.
೨. ನಾನು ಬದುಕಿದರೆ ತಾನೇ ಅನ್ಯಾಯ, ಹಿಂಸೆ, ನಾನೇ ಸತ್ತನಂತರ ಯಾರಿಗೆ ಇವುಗಳನ್ನು ಪ್ರಯೋಗಿಸುತ್ತೀ?' ಎಂದು ಆತ್ಮಾಹುತಿಯನ್ನು ಮಾಡಿಕೊಳ್ಳುವುದು ಎರಡನೇ ರೀತಿ.

೩. ನಗ್ನತೆ ಅಥವಾ ಸನ್ಯಾಸ.

"ನಮ್ಮ ಜನಪದ ಕತೆ, ಕಾವ್ಯ ಆಚರಣೆಗಳಲ್ಲಿ ಮೇಲಿನ ಎರಡು ರೀತಿಗಳಿಗೆ ಸಾಕಷ್ಟು ಉದಾಹರಣೆಗಳಿದ್ದರೂ ಮೂರನೇ ಮಾರ್ಗದ ಮಹಿಳೆಯರ ಚಿತ್ರಣ ಅಷ್ಟಾಗಿ ಇಲ್ಲ"

ಹೀಗೆ ಜನಪದ ಸಾಹಿತ್ಯದಲ್ಲಿ ಸ್ತ್ರೀ ನಿಲುವುಗಳನ್ನು ಮೂರು ರೀತಿಯಲ್ಲಿ ವರ್ಗೀಕರಿಸಿದ್ದರೂ ಸರಿ ಅದು ಆರು ರೀತಿಯಲ್ಲಾಗಿದ್ದರೂ ಸರಿ, ಒಟ್ಟಾರೆ ಆಕೆ ಎರಡನೇ ಪಾತ್ರವಾಗಿಯೇ ಚಿತ್ರಿತಳಾಗಿರುವುದು ಮಾತ್ರ ಸ್ಪಷ್ಟ. ಆದರೆ ತಮ್ಮ ದೇಹ ಸಹಜ ಸಂವೇದನೆಗಳಿಗೆ ಪ್ರಾಮಾಣಿಕವಾಗಿ ಸ್ಪಂದಿಸಿದ ಲಿಲಿಥ್ ಹಾಗೂ ಅಹಲ್ಯಯಂಥ ಪಾತ್ರಗಳು ನಮಗಿಲ್ಲಿ ಸಾಕಷ್ಟು ನೋಡಸಿಗುತ್ತವೆ. ಉದಾಹರಣೆಗೆ ಜನಪದ ಸಾಹಿತ್ಯದ ಜನಪ್ರಿಯ ಸಣ್ಣಾಟ 'ಸಂಗ್ಯಾ-ಬಾಳ್ಯಾ' ದಲ್ಲಿ ಬರುವ ಗಂಗಿಯಂಥ ಪಾತ್ರಗಳು ಈ ಮೇಲೆ ಚರ್ಚಿಸಿದ ಮೂರು ವಿಭಜನೆಗಳನ್ನು ದಾಟಿ ಹೊಸ ಓದಿಗೆ ಅಥವಾ ಜನಪದರ ಲಿಂಗಾಧಾರಿತ ಸಂವೇನೆಗಳ ಕುರಿತ ಮರುಚಿಂತನೆಗೆ ಕಾರಣಳಾಗುವಳು.

೧೯೬೦ ಹಾಗೂ ೧೯೫೦ರ ಅವಧಿಯಲ್ಲಿ ಬದುಕಿದ ರಾಯಪ್ಪ ಪತ್ತಾರ ಅಥವಾ ಪತ್ತಾರ ಮಾಸ್ತರರೆಂಬ ಲೇಖಕರಿಂದ ಬರೆಯಲ್ಪಟ್ಟ ಹಾಗೂ ಸ್ವಾತಂತ್ರ್ಯಪೂರ್ವ ಕರ್ನಾಟಕ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುವ 'ಸಂಗ್ಯಾ-ಬಾಳ್ಯಾ' ಕೃತಿ ಜನಪದ ರಂಗ ಪ್ರಕಾರಗಳಲ್ಲಿಯೇ ವಿಶಿಷ್ಟವಾಗಿರುವ, ಸಣ್ಣಾಟದ ಚೌಕಟ್ಟಿನಲ್ಲಿದೆ. ಮೂಲತಃ ಕನ್ನಡದಲ್ಲಿರುವ ಈ ಕೃತಿಯನ್ನು ಡಾ. ಬಸವರಾಜ ನಾಯ್ಕರ್ ಇಂಗ್ಲೀಷ್‌ಗೆ ಭಾಷಾಂತರಿಸಿದ ನಂತರ ಓದಿರುವ ನಾನು, ಮೂಲತಃ ಗದಗ ಜಿಲ್ಲೆಯ ಶಹಾಪೂರಪೇಟದವನಾದ, ಆದರೆ ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಬೈಲವಾಡ ನಿವಾಸಿಯಾದ ರಾಯಪ್ಪ ಪತ್ತಾರರ ಬಗೆಗೆ, ಡಪ್ಪಿನಾಟದ ಚೌಕಟ್ಟಿನಲ್ಲಿ 'ಸಂಗ್ಯಾ-ಬಾಳ್ಯಾ' ಕೃತಿಯನ್ನು ಸಮೃದ್ಧಗೊಳಿಸಿರುವ ರೀತಿಯನ್ನು ಕುರಿತು ತಿಳಿಯಲು ಯತ್ನಿಸಿದವನೆ ವಿನಃ ಡಾ. ಎಂ.ಎಂ. ಕಲಬುರ್ಗಿಯವರಂತೆ, ಅದೊಂದು ಆಟ ನಾಟಕ ಎಂಬುದನ್ನೂ ಮರೆತು ಸಂಶೋಧನೆಗೆ ತೊಡಗಿಕೊಂಡವನಲ್ಲ.

ಬೈಲಹೊಂಗಲ ನಾಡಿನ ಮಾನವ ಸ್ವಭಾವ, ರಸಿಕತೆಯನ್ನು ಕುರಿತು ಹೇಳುವ 'ಸಂಗ್ಯಾ-ಬಾಳ್ಯಾ' ಅದೇ ರಾಯಪ್ಪ ಪತ್ತಾರರಿಂದ ರಚಿತವಾದ ಉಳಿದ ಎರಡು ಸಣ್ಣಾಟಗಳಿಂದ ('ಮಾಲಿಂಗ ಸೆಟ್ಟಿ' ಹಾಗೂ 'ಭಾವನಾಟ') ಸಂವೇದನೆಗಳನ್ನು ಕುರಿತು ಹೇಳುವಲ್ಲಿ ಭಿನ್ನವಾಗಿದೆ. ಡಾ. ನಾಯ್ಕರ್ ಹೇಳುವಂತೆ "Regardless of the historicity or otherwise of the event, the theme of the play has to be understood as an artistic image of his vision about human relationship and values. "Sangya-Balay" has been a very popular play in North Karnataka on account of its and elemental passions of love, hatred and betraya" ಉತ್ತರ ಕರ್ನಾಟಕ ಸಮಾಜದ ಹಾಗೂ ಸಂಸ್ಕೃತಿಯ ನಂಬಿಕೆಗಳ ಕುರಿತಾಗಿ, ನೈತಿಕತೆಯ ಮೇರೆಗಳನ್ನು ಗುರುತಿಸುವಲ್ಲಿ ಸ್ನೇಹ ಹಾಗೂ ದ್ರೋಹಗಳಂಥ ತಾತ್ವಿಕ ಪ್ರಶ್ನೆಗಳನ್ನು ಎತ್ತುವಲ್ಲಿ "ಸಂಗ್ಯಾ-ಬಾಳ್ಯಾ"

ಒಂದು ಮಹತ್ವದ ಕೃತಿಯಾಗಿರುವಂತೆ, ಲಿಂಗಾಧಾರಿತ ಸಂವೇದನೆಗಳ ಹಿನ್ನೆಲೆಯ ಓದಿಗನು ಗುಣವಾಗಿಯೂ ಇದು ಮಹತ್ವದ ಕೃತಿಯಾಗಿದೆ.

ನಾಟಕದಲ್ಲಿ ಮೂರು ಮುಖ್ಯವಾದ ಪಾತ್ರಗಳ ಸಂವೇದನೆಗಳ ಸಮಾನ ವಿಶ್ಲೇಷಣೆ ಇದ್ದಾಗ್ಯೂ ಕೃತಿಯ ಶೀರ್ಷಿಕೆಯು ತೋರಿಸುವಂತೆ ಇದು 'ಸಂಗ್ಯಾ-ಬಾಳ್ಯಾ' ಎಂಬ ಎರಡು ಪುರುಷ ಪಾತ್ರಗಳ ಸ್ನೇಹ, ವಿದ್ರೋಹ, ಕಾಮ, ವೈರಗಳಂಥ ಭಾವನೆಗಳ ಕಥೆಯಾಯಿತೆ ವಿನಃ, ಇವರಿಬ್ಬರ ಹೊಸ ಅಸ್ತಿತ್ವಕ್ಕೆ ಕಾರಣವಾದ ಗಂಗಿಯ ವ್ಯಥೆ ಇಲ್ಲಿ ಪ್ರಮುಖವಾಗಲಿಲ್ಲ. "ಸಂಗ್ಯಾ-ಬಾಳ್ಯಾ" ಜನಪದ ಸಾಹಿತ್ಯದ 'ರೇಣುಕಾ ಎಲ್ಲಮ್ಮ', 'ನಾಗಮ್ಮ-ಸುಬ್ಬರಾಯ', ಜನಪದ ಕಾವ್ಯಗಳಲ್ಲಿ ನೀಡುವ ಮಹಿಳೆಯನ್ನು ನೀಡುವುದಿಲ್ಲ. ಹೀಗಾಗಿ "ಸಂಗ್ಯಾ-ಬಾಳ್ಯಾ" ಕೃತಿಯ ಗಂಗಿಯನ್ನು, ಭಾರತೀಯ ಸಾಂಸ್ಕೃತಿಕ ಪರಂಪರೆಯು ಪವಿತ್ರ ಎಂದು ಪರಿಗಣಿಸುವ ಪಂಚ ಕನ್ನೆಯರಾದ - ಅಹಲ್ಯ, ದ್ರೌಪದಿ, ಕುಂತಿ, ತಾರಾ ಹಾಗೂ ಮಂಡೋದರಿಯರ ಹಿನ್ನೆಲೆಯಲ್ಲಿ ವಿವರಿಸಬಹುದು.

ಕಾಲಾತೀತವಾದ ಕಾವ್ಯಗಳು ಈ ಐವರನ್ನು ಸ್ತ್ರೀ ಕುಲತಿಲಕಗಳೆಂದು ವೈಭವೀಕರಿಸುವುದು ಮತ್ತು ಆರಾಧಿಸಿರುವುದು ಸತ್ಯ ಎಂದು ಒಪ್ಪಿಕೊಳ್ಳುವುದಾದರೆ 'ಸಂಗ್ಯಾ-ಬಾಳ್ಯಾ' ಕೃತಿಯ ಗಂಗಿಯೂ ಈ ಪೂಜೆಗೆ ಹಾಗೂ ಗೌರವಕ್ಕೆ ಅರ್ಹಳಾಗಿದ್ದಾಳೆ. 'ಮಹಾಭಾರತ' ಕಾವ್ಯದ ಸತ್ಯವತಿ, ಗಾಂಧಾರಿ, ಕುಂತಿ, ದ್ರೌಪದಿ, ಅಂಬಾ-ಉಲೂಪಿ ಹಾಗೂ ಚಿತ್ರಾಂಗದೆಯರು ನಮ್ಮ ಅನುಕಂಪವನ್ನು ಗೆಲ್ಲುವುದಾದಲ್ಲಿ ಗಂಗಿಯೂ ಅದಕ್ಕೆ ಯೋಗ್ಯಳಾಗಿದ್ದಾಳೆ. ಮದುವೆಯಾಗಿದ್ದ ರಾಧೆ ಕೃಷ್ಣನನ್ನು ಆರಾಧಿಸುವುದು, ಅವನ ಕುರಿತಾಗಿ ತನ್ನ ಪ್ರೀತಿಯನ್ನು ಸಾರಿ ಹೇಳುವುದು ಪವಿತ್ರ ಪ್ರೇಮದ ಪರಾಕಾಷ್ಠೆ ಎನ್ನುವುದಾದರೆ ಈ ಸಾಧ್ಯತೆ 'ಸಂಗ್ಯಾ-ಬಾಳ್ಯಾ'ದ ಗಂಗಿಯ ಪಾಲಿಗೂ ಸಾಧ್ಯವಿದೆ - ಎನ್ನುವ ವಾದಸರಣಿಯನ್ನು ನಾವು ಒಪ್ಪಿಕೊಳ್ಳುವುದಾದರೆ ನಮ್ಮ ಜನಪದರಿಗೆ ಇದೇಕೆ ಸಾಧ್ಯವಾಗಲಿಲ್ಲ? ಎಂಬುದೇ ನನ್ನ ಪ್ರಶ್ನೆ. ಸಂವೇದನೆಯೂ ಒಂದು ಭಾಷೆ. ಅದು ಲಿಂಗ, ಕಾಲ ದೇಶಗಳಿಂದ ಅತೀತವಾದುದು ಎಂದು ಅವರಿಗೆ ಹೊಳೆಯದೆ ಹೋಯಿತೆ? ಎಂದು ಪ್ರಶ್ನಿಸಿದರೆ ಇಲ್ಲ ಎನ್ನುತ್ತದೆ ಒಂದು ವಾದಸರಣಿ. ಸ್ತ್ರೀಗೆ ಎಲ್ಲ ಗೌರವವನ್ನು ಕೊಟ್ಟೂ ಜನಪದ ಪುರುಷಸ್ವಾಮ್ಯ "There is nothing more sinful than women and women are the root of all evil. They have no control over themselves, especially in matter of sex and would go to any man available. On one side place - death, devastating winds, helfire, poisons, snakes and so on and on the other side place woman alone-and you will find woman alone is equal to all these evils together" ಎಂಬುದನ್ನೂ ಬಲವಾಗಿ ನಂಬಿದ್ದರು ಜನಪದರು. ಚಿಂತಿಸಬೇಕಾದ ವಿಷಯ ಎಂದರೆ "Ahalya, Draupadi, Kunti, Tara and Mandodari - the five sacred virings none of whom was a virgin in the traditional sense". ಯಾಕೆಂದರೆ ಅಹಲ್ಯೆಯೊಬ್ಬಳನ್ನೇ ಇಲ್ಲಿ ದಾಹರಣೆಯಾಗಿ ಅಭ್ಯಸಿಸಬಹುದಾದರೆ, ಅಹಲ್ಯ ಗೌತಮ ಮುನಿಗೆ ಬ್ರಹ್ಮನಿಂದ

ಸಾಕುವುದಕ್ಕಾಗಿ ಕೊಡಲ್ಪಟ್ಟ ಹೆಣ್ಣುಮಗಳು. ಇದು ಈ ನಿಟ್ಟಿನಲ್ಲಿ ಕಣ್ವಮಹರ್ಷಿ ಹಾಗೂ ಶಾಕುಂತಲೆಯ ಕಥೆಯೆ. ಆದರೆ ಗೌತಮನ ಪ್ರಾಮಾಣಿಕತೆ ಹಾಗೂ ನಿಗ್ರಹಗಳನ್ನು ಮೆಚ್ಚಿದ ಬ್ರಹ್ಮ ಅಹಲ್ಯೆಯನ್ನು ಅವನಿಗೇಕೊಟ್ಟು ಮದುವೆ ಮಾಡಿದ. ತಂದೆಯ ಸ್ವರೂಪದಲ್ಲಿದ್ದ ಗೌತಮ ತನ್ನ ಗಂಡನಾಗುವುದು ಅಹಲ್ಯೆಯ ಆಕಾಂಕ್ಷೆಯಾಗಿತ್ತೋ ಇಲ್ಲವೊ ಎನ್ನುವುದು ಎಲ್ಲಿಯೂ ಕಾವ್ಯದಲ್ಲಿ ಪ್ರಶ್ನೆಯಾಗುವುದೇ ಇಲ್ಲ. ಸ್ತ್ರೀ ಸಂವೇದನೆಗಳು ಇಲ್ಲಿ ಚರ್ಚೆಯ ವಿಷಯವೇ ಅಲ್ಲ. ಅದೇ ಗೌತಮನ ವಿದ್ಯಾರ್ಥಿಯಾಗಿದ್ದ ಇಂದ್ರ ಅಹಲ್ಯೆಯೊಂದಿಗೆ ವಯಸ್ಸು ಸಹಜವಾಗಿದ್ದ. ಅವರಿಬ್ಬರ ಸಂಬಂಧ ಪ್ರಜ್ಞಾಪೂರ್ವಕವಾಗಿತ್ತು. "Ahalya's love for Indra was an act of subversion. It was a rejection of patriarchal values. It was a young female thirsting for a young male breaking all social bonds. Life longing for life - as kahlil gibran puts it".

'ಸಂಗ್ಯಾ-ಬಾಳ್ಯಾ' ಕೃತಿಯ ಗಂಗಿಯೂ ಇದೇ ಸಂದಿಗ್ಧತೆಗಳ ಪಾತ್ರ. ಆಕೆಯ ಗಂಡ ವೀರಭದ್ರ ವ್ಯಾಪಾರಿ, ವಯಸ್ಸಿನಲ್ಲಿ ಹಿರಿಯ. ಮದುವೆಯಾಗಿ ವರುಷಗಳೇ ಉರುಳಿದ್ದರೂ ಆಕೆಗೆ ಮಕ್ಕಳಾಗಿಲ್ಲ. 'ಬಾಲಕರಿಲ್ಲದ ಬಾಲೀದ್ಯಾತರ ಜನ್ಮ' ಅಥವಾ "ಮಾತೃತ್ವದ ಮೂಲಕವೇ ತನ್ನ ವ್ಯಕ್ತಿತ್ವದ ಸಾರ್ಥಕತೆ" ಎನ್ನುವ ಜನಪದ ಸಾಮಾಜಿಕ ಒತ್ತಡದಲ್ಲಿ ಬದುಕಿದ್ದ ಗಂಗಿಗೆ ಸಂಗ್ಯಾ ಇಂದ್ರನಂಥ ಒಂದು ಪರಿಹಾರ. ಆದರೆ "ಸಂಗ್ಯಾ-ಬಾಳ್ಯಾ" ಆಟದಲ್ಲಿ ಗಂಗಿಯ ಈ ಯಾವ ಸ್ತ್ರೀ ಸಹಜ ಸಂವೇದನೆಗಳಿಗೂ ಅರ್ಥವಿಲ್ಲ, ಅವಕಾಶವಿಲ್ಲ. 'ಸಂಗ್ಯಾ-ಬಾಳ್ಯಾ' ಆಟದಲ್ಲಿ, ಗಂಗಿ ವೀರಭದ್ರ, ಸಂಗ್ಯಾ ಹಾಗೂ ಬಾಳ್ಯಾರ ಮಧ್ಯ ವಿಭಜಿಸಲ್ಪಟ್ಟ ವಿಷಯವಷ್ಟೆ.

ಗಂಗಿ ಜನಪದ ಸಾಹಿತ್ಯದ ಒಂದು ಪಾತ್ರವಾಗಿರುವುದರಿಂದಲೆ ಶಿಷ್ಟ ಸಾಹಿತ್ಯದ ಅಹಲ್ಯೆಯ ಸಾಂಸ್ಕೃತಿಕ ಎತ್ತರವನ್ನು ಎರುವಲ್ಲಿ ವಿಫಲಗಳಾಗುತ್ತಾಳೆ. ಜನಪದ ಸಾಹಿತ್ಯದಲ್ಲಿ, ಮಾತೃಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿಗೆ ಸ್ವಲ್ಪಮಟ್ಟಿಗೆ ಸ್ವಾತಂತ್ರವಿದೆ ಎಂದು ಹೇಳಲಾಗುತ್ತದೆ ಯಾದರೂ ಅಲ್ಲಿಯೂ ಕೂಡಾ ಪುರುಷಾಧಿಕಾರದ ಮೌಲ್ಯಗಳೇ ಆಳುತ್ತವೆ. ಹೀಗಾಗಿ ಜನಪದ ಸಾಹಿತ್ಯದಲ್ಲಿಯ ಲಿಂಗಾಧಾರಿತ ಸಂವೇದನೆಗಳ ತಾರತಮ್ಯ ಪೂರ್ವ ನಿರ್ಧಾರಿತವೇನೊ. ಜನಪದ ಸಾಹಿತ್ಯದಲ್ಲಿನ "ಸ್ತ್ರೀ ಪುರುಷರ ನಡುವಿನ ಅಸಮಾನತೆ ಬರೀ ಪ್ರಕೃತಿ ಸಹಜವಲ್ಲ ಜೈವಿಕವೂ ಅಲ್ಲ ಅದು ಸಾಂಸ್ಕೃತಿಕ ಸಾಮಾಜಿಕ ಹಿನ್ನೆಲೆಯದಾಗಿವೆ" ಎಂಬುದನ್ನು ಗಮನಿಸಬೇಕು. ನಮ್ಮ ಜನಪದ ಸಾಹಿತ್ಯ "ಸಂಗ್ಯಾ-ಬಾಳ್ಯಾ" ನಾಟಕದಲ್ಲಿ ಗಂಗಿಯಿಂದ ನಿರೀಕ್ಷಿಸುವ ಸತಿತ್ವ, ಶೀಲ, ಪಾತಿವ್ರತ್ಯ, ತ್ಯಾಗ, ಚಾರಿತ್ರ್ಯ, ವಿಧೇಯತೆ, ಸಹನೆ, ಸಂಯಮ - ಎಲ್ಲವೂ ಸಮಾಜದ ನಿರೀಕ್ಷೆಗಳೆ ವಿನಃ ಹೆಣ್ಣಿನ ಈ ಗುಣಗಳು ವರ್ಣತಂತುಗಳಿಂದ ಹರಿದು ಬಂದವುಗಳಲ್ಲ ಎನ್ನುವುದನ್ನು ಅರಿಯಲು ಸೋಲುತ್ತದೆ. ಗಂಗಿ ಪಾತ್ರವನ್ನು ಗಮನದಲ್ಲಿಟ್ಟುಕೊಂಡು ಸಾಹಿತ್ಯದಿಂದ ಆದರ್ಶವನ್ನು ನಿರೀಕ್ಷಿಸುವ ನಮ್ಮ ಜನಪದ ಸಮಾಜ ಒಂದು ಕಾಲದವರೆಗೆ ಯುವಕ - ಯುವತಿಯರು ಸಂಗ್ಯಾ-ಬಾಳ್ಯಾ ಆಟವನ್ನು ನೋಡುವುದು ಸರಿಯಲ್ಲವೆಂಬ ಪತ್ವಾ ಹೊರಡಿಸಿತ್ತು.

ಒಟ್ಟಾರೆ ಒಂದು ಕಾಲಕ್ಕೆ ಅಮೋಘ ಜನಪ್ರಿಯತೆಯನ್ನು ಗಳಿಸಿದ "ಸಂಗ್ಯಾ-ಬಾಳ್ಯಾ" ಡಪ್ಪಿನಾಟಕದಲ್ಲಿ ಸ್ತ್ರೀ ಪಾತ್ರಗಳಾದ ಪಾರಮ್ಮ ಹಾಗೂ ಗಂಗಿಯರು ಪುರುಷಸ್ಥಾಪಿತ ಜನಪದ ಸಮಾಜ ವ್ಯವಸ್ಥೆಯಲ್ಲಿ ಸ್ತ್ರೀ ಎಷ್ಟೊಂದು ಕೀಳಾಗಿ ಪರಿಗಣಿಸಲ್ಪಟ್ಟಿದ್ದಾಳೆ ಎಂಬುದಕ್ಕೆ ಉತ್ತಮ ಉದಾಹರಣೆಗಳಾಗಿವೆ ಹಾಗೂ ಸಮಾಜದ ನೈತಿಕಾನೈತಿಕತೆಯ ಗುಣಮಟ್ಟವನ್ನು ಸ್ತ್ರೀಯನ್ನು ಆಧರಿಸಿಯೇ ಹೇಗೆ ನಿರ್ಧರಿಸಲಾಗುತ್ತಿತ್ತು ಹಾಗೂ ಸ್ತ್ರೀ ಸಂವದನೆಗಳು ಹೇಗೆ ಧ್ವನಿ ಇಲ್ಲದೇ ಹೋದವು ಎನ್ನುವುದಕ್ಕೆ ಸಾಕ್ಷಿಯಾಗಿದೆ.

## ಗ್ರಂಥಋಣ


೧. Basavaraj Naikar, **Sangya -Balya : Betrayal,** Minerva Press, New Delhi-2004.

೨. **Female : Subversion :**The Spriti of Lilith in Indian Culture Satya Chaitanya-Indian Litrature May - June 2006.

೩. ಪ್ರೊ. ಸುಲೋಚನಾ ಜವಳಗಿ, **ಮಹಿಳಾ ಸಂಪದ, ಮಹಿಳೆ : ಗ್ರಾಮೀಣ ಬದುಕು,** ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಬಾಗಲಕೋಟೆ-೨೦೦೫.

# "ಕೆರೆಗೆ ಹಾರ" : ಕರುಣೆಯೊಳಗಿನ ಕ್ರೌರ್ಯ

ವಿಜಯಾ ಗುತ್ತಲ

ಜಾನಪದ ಸಾಹಿತ್ಯವು ಸಮೂಹ ಪ್ರಜ್ಞೆಯ ಪ್ರತಿಬಿಂಬವಾಗಿದ್ದು ಸಮುದಾಯದ ಬದುಕಿನ ಬೇರೆ ಬೇರೆ ಮುಖಗಳನ್ನು ತನ್ನ ಕಥನಗಳಲ್ಲಿ ಹಿಡಿದಿಡಲು ಪ್ರಯತ್ನಿಸುತ್ತದೆ. ಯಾವುದೇ ಸಾಹಿತ್ಯ ತನ್ನ ಜನಾಂಗದ ಮೌಲ್ಯಗಳಿಗೆ ಧ್ವನಿಯಾಗಿ ನಿಲ್ಲಬೇಕಾಗುವುದರಿಂದ, ಜನಪದ ಸಾಹಿತ್ಯ ಕೂಡ ಜೀವನ ಶ್ರದ್ಧೆಯನ್ನು, ಸಹಜ ಮೌಲ್ಯಗಳನ್ನು ಪ್ರತಿನಿಧಿಸುತ್ತದೆ. ಜನಪದರಲ್ಲಿ ರಚನೆಯು ವಿಕೇಂದ್ರಿಕೃತವಾಗಿರುವುದರಿಂದ ವ್ಯಕ್ತಿನಿಷ್ಠ ಭಿನ್ನತೆಯೆನ್ನುವುದು ಗೌಣವಾಗಿದ್ದು, ಅದು ಸಮುದಾಯದ ಪ್ರಜ್ಞೆಯ ಪ್ರತೀಕವಾಗಿ ನಿಲ್ಲುತ್ತದೆ. ಕನ್ನಡ ಜಾನಪದ ಸಾಹಿತ್ಯದ ಸಂಕಲನಗಳಲ್ಲಿ "ಕೆರೆಗೆ ಹಾರ" ಎನ್ನುವ ಕಥನ ಕವನ ಬೇರೆ ಬೇರೆ ಕಾರಣಗಳಿಗೆ ಬಹುಮೆಚ್ಚಿಗೆ ಪಡೆದ, ಜನಪ್ರಿಯ ಸಂಕಲನಗಳಲ್ಲಿ ಒಂದಾಗಿದೆ. ಸಮುದಾಯ ಪ್ರಜ್ಞೆಯನ್ನು ಪ್ರತಿನಿಧಿಸುವ "ಕೆರೆಗೆ ಹಾರ"ವನ್ನು ವರ್ತಮಾನದ ಈ ಕಾಲಘಟ್ಟದಲ್ಲಿ ನಿಂತು ನೋಡುವ ಸಂದರ್ಭದಲ್ಲಿ, ಈ ಮೊದಲು ಈ ಹಾಡನ್ನು ಅರ್ಥೈಸಲು ಯತ್ನಿಸಿದ ಎರಡು ಪ್ರಾತಿನಿಧಿಕ ನಮಗೆ ಪ್ರಯತ್ನಗಳು ಸಿಗುತ್ತವೆ. ಒಂದು ತೀ.ನಂ.ಶ್ರೀ.ಯವರದು, ಇನ್ನೊಂದು ಕುರ್ತಕೋಟಿ ಯವರದು.

ತೀ.ನಂ.ಶ್ರೀಯವರು ಮೆಚ್ಚಿಗೆ ವ್ಯಕ್ತಮಾಡುತ್ತ, ಪದ್ಯದ ಒಂದೊಂದು ಸಾಲಿನಲ್ಲೂ, ಕ್ರಿಯೆಯ ಒಂದೊಂದು ಹೆಜ್ಜೆಯಲ್ಲೂ ಮಹಾಕೃತಿಯಲ್ಲಿ ಮಾತ್ರ ಕಾಣಬರುವ ಅನಿವಾರ್ಯತೆ ಇದೆ. ಆಗಿನ ಸಾಮಾಜಿಕ ಸಂಪ್ರದಾಯದಲ್ಲಿ, ಆ ಸಂಸ್ಕಾರವಂತರ ಬಾಳಿನಲ್ಲಿ ಕಥೆ ಹೀಗೆಯೇ ಸಾಗಿರಬೇಕಲ್ಲವೆ.... ಭಾಗೀರಥಿಯ ಮನೋದಾರ್ಢ್ಯ ಎಷ್ಟು ಉದಾತ್ತ, ಮಾದೇವರಾಯನ ಪ್ರೇಮ ಎಷ್ಟು ಅಪರಿಮಿತ!.... ಈ ಕೃತಿಯನ್ನು ಕಟ್ಟಿದ ಹಳ್ಳಿಯ ಅಜ್ಞಾತ ವ್ಯಕ್ತಿ, ಒಬ್ಬ ಶ್ರೇಷ್ಠ ಕವಿ. "ಕೆರೆಗೆ ಹಾರ" ಕನ್ನಡ ಕಾವ್ಯಶ್ರೀಯ ಕಂಠದ ಹಾರ!" ಎನ್ನುತ್ತ ಕವಿತೆಯ ಪಾತ್ರಗಳ ಉದಾತ್ತತೆಯನ್ನು, ಕಾವ್ಯ ರಚನೆಯ ಸೌಂದರ್ಯವನ್ನು ಪ್ರಶಂಸಿಸುತ್ತಾರೆ. ತೀನಂಶ್ರೀ ಯವರ ವಿಮರ್ಶೆಯಲ್ಲಿ ರೋಮ್ಯಾಂಟಿಕ್ ವಿಮರ್ಶೆಯ ಛಾಯೆಯನ್ನು ಗುರುತಿಸಬಹುದಾಗಿದೆ. ತೀನಂಶ್ರೀಯವರ ಮಾತುಗಳಲ್ಲಿ ತ್ಯಾಗದ ಮಾದರಿಯ ವೈಭವೀಕರಣವಿದೆ. ಈ ಮಾದರಿಯನ್ನು ಹೆಣ್ಣಿನ ಮೇಲೆ ಹೇರುವ, ಅದನ್ನು ಅವಳಿಗೆ ಅನಿವಾರ್ಯವಾಗಿಸುವ ಪ್ರಕ್ರಿಯೆಯ ಸಮರ್ಥನೆಯಾಗುತ್ತದೆ. ಇಲ್ಲಿ ಒಬ್ಬ ಜೀವಂತ ವ್ಯಕ್ತಿಯನ್ನು, ಅದರಲ್ಲೂ

ಮನೆಯ ಸೊಸೆಯನ್ನು ಬಲಿ ಕೊಡುವ ಕ್ರಿಯೆ ಅವರಿಗೆ ಶೋಷಣೆಯಾಗಿ ಕಾಣಿಸುವುದಿಲ್ಲ ವೆನ್ನುವುದನ್ನು ಗಮನಿಸಬಹುದು. "ಕೆರೆಗೆ ಹಾರ"ವನ್ನು ವಿಮರ್ಶಿಸುತ್ತ, ಸಂವೇದನಾಶೀಲ ವಿಮರ್ಶಕರಾದ ಕುರ್ತಕೋಟಿಯವರು ತೀ.ನಂ.ಶ್ರೀಯವರಿಗಿಂತ ಭಿನ್ನವಾಗಿ ಪ್ರತಿಕ್ರಿಯಿ ಸುತ್ತಾರೆನ್ನುವುದನ್ನು ನೋಡಬಹುದು. ಅವರು ಹೇಳುವಂತೆ, "ಕವಿತೆ ಭಾಗೀರಥಿಯ ಮನಸ್ಸಿನ ಪರಿಪಾಕವನ್ನು ಪ್ರಶ್ನಿಸುವುದಿಲ್ಲ. ಆದರೆ ಉಳಿದವರ ಹೃದಯಹೀನತೆಯನ್ನು ಪ್ರಶ್ನಿಸುತ್ತದೆ. ಭಾಗೀರಥಿಯ ವೈಯಕ್ತಿಕ ತ್ಯಾಗ ಮತ್ತು ಅದರ ದಿವ್ಯತೆಗೆ ಯಾವ ಪರೀಕ್ಷೆಯೂ ಬೇಕಾಗಿಲ್ಲ ವೆಂದು ಕವಿತೆಗೆ ಗೊತ್ತು. ಆದರೆ ಕವಿತೆಯ ಮುಖ್ಯ ಪ್ರಶ್ನೆಯೆಂದರೆ ಸಮಾಜದಲ್ಲಿ ಹೆಣ್ಣಿನ ಸ್ಥಾನವೇನು?" ಎಂದು ಪ್ರಶ್ನಿಸುತ್ತಲೇ ಕುರ್ತಕೋಟಿಯವರು ಈ ಹಾಡನ್ನು "ಅದು ಗಂಡಿನ ಆಸರೆ ತಪ್ಪಿದ ಹೆಣ್ಣಿನ ನಿರ್ದಯವಾದ ಕೊಲೆ; "ಕೆರೆಗೆ ಹಾರ" ಕವಿತೆಯಲ್ಲಿ ಭಾಗೀರಥಿಯ ಬಲಿ ಒಮ್ಮೊಮ್ಮೆ ನಮ್ಮನ್ನು ದಾರಿ ತಪ್ಪಿಸಬಹುದು. ಆದರೆ ಇಲ್ಲಿ ಕೂಡ ಇರುವ ಪ್ರಶ್ನೆಯೆಂದರೆ ಗಂಡನಿಂದ ಅಗಲಿದ ಹೆಂಡತಿಯ ಅಸಹಾಯಕತೆ. ಅದಿಲ್ಲದಿದ್ದರೆ ಕವಿತೆ ಅವಳ ಬಲಿಯೊಂದಿಗೆ ಕೆರೆಗೆ ನೀರು ಬರುವ ಸಂಗತಿಯೊಂದಿಗೆ ಮುಗಿಯಬೇಕಾಗಿತ್ತು. ಬಲಿ ಸಫಲತೆಯನ್ನು ಪಡೆದು ಆ ಸಫಲತೆಯೇ ಭಾಗೀರಥಿಯ ಮೃತ್ಯುವಾದಾಗ ಆ ಕ್ಷಣದಲ್ಲಿ ಕಲೆ ಸತ್ತು ಮತ್ತೆ ಬದುಕಿ ಬರುತ್ತದೆ. ಈ ಕ್ಷಣದಿಂದ ಮುಂದೆ ಹೋಗಬೇಕಾಗಿದ್ದ ಕತೆ ಹಿಂದೆ ಹೋಗುತ್ತದೆ" (ಪು. ೩೧೧-೧೨).

ಕುರ್ತಕೋಟಿಯವರ ಮಾತುಗಳು ಪುರುಷ ವ್ಯವಸ್ಥೆ ಮಹಿಳೆಗಾಗಿ ಕಟ್ಟಿಕೊಟ್ಟ ಲಿಂಗಾ ಧಾರಿತ ಪಾತ್ರಗಳನ್ನು ದಾಟಿ ಹಾಡಿನ ಅನುಭವದೊಳಗೆ ಹೊಕ್ಕು, ಸ್ವೀಕೃತ ಮೌಲ್ಯಗಳನ್ನು ಪ್ರಶ್ನಿಸುವ ಪ್ರಯತ್ನ ಮಾಡುತ್ತವೆ. ಆದರೆ ಇಲ್ಲಿಯೂ ಕೂಡ ಗಂಡನಿಂದ ಅಗಲಿದ ಹೆಂಡತಿಯ ಅಸಾಹಯಕತೆಯತ್ತ ಗಮನ ಸೆಳೆಯುವಾಗ, ಅವಳೂ ಒಬ್ಬ ವ್ಯಕ್ತಿಯೆನ್ನುವುದಕ್ಕಿಂತ ಹೆಚ್ಚಾಗಿ ತನ್ನ ಅಸ್ತಿತ್ವಕ್ಕಾಗಿ ಗಂಡನನ್ನವಲಂಬಿಸುವುದರ ಮೇಲೆ ಹೆಚ್ಚು ಒತ್ತು ಬೀಳುವುದನ್ನು ಕಾಣುತ್ತೇವೆ. ಹೆಣ್ಣನ್ನು ಒಬ್ಬ ವ್ಯಕ್ತಿಯನ್ನಾಗಿ ನೋಡುವುದಕ್ಕಿಂತ ಹೆಚ್ಚಾಗಿ, ವಿಮರ್ಶಕರು ಭಾಗೀರಥಿಯ ಬಲಿಯ ಕಾರಣವನ್ನು ಅವಳು ಗಂಡನಿಂದ ಅಗಲಿರುವುದರಲ್ಲಿ ನೋಡಲೆತ್ನಿಸಿರುವುದು ಕಾಣುತ್ತದೆ. ತೀ.ನಂ.ಶ್ರೀಯವರ ವಿಮರ್ಶೆಯಲ್ಲಿರುವ ವೈಭವೀಕರಣ ಇಲ್ಲಿರದೆ, ಕುರ್ತುಕೋಟಿಯವರ ವಿಮರ್ಶೆಯಲ್ಲಿ ಮಾನವೀಯ ದೃಷ್ಟಿ ಮುನ್ನೆಲೆಯಲ್ಲಿ ಇದ್ದರೂ, ಅವರ ಮಾತುಗಳು ಕೂಡ ಸ್ತ್ರೀ ಮಾದರಿಗಳ ಬಗೆಗಿನ ಪೂರ್ವಾಗ್ರಹಗಳಿಂದ ಮುಕ್ತವಾಗಿಲ್ಲ. ಗಂಡನಿಲ್ಲದೆ ಹೆಣ್ಣಿಗೆ ಅಸ್ತಿತ್ವವಿಲ್ಲವೆನ್ನುವ ವಿಚಾರ ಕೂಡ, ಹೆಣ್ಣಿನ ಬಲಿಯ ವೈಭವೀಕರಣದಂತೆ ಪುರುಷ ಪ್ರಧಾನ ವ್ಯವಸ್ಥೆಯ ಇನ್ನೊಂದು ಮುಖವನ್ನು ತೆರೆದಿಡುತ್ತದೆ.

ಲಿಂಗತಾರತಮ್ಯದ ವಿರುದ್ಧ ಪ್ರತಿರೋಧ ಬದುಕಿನ ಭಾಗವಾಗಿರುವ ಇಂದಿನ ಸಂದರ್ಭ ದಲ್ಲಿ "ಕೆರೆಗೆ ಹಾರ"ದ ಮರು ಓದುವಿಕೆಗೆ ತೊಡಗಿದಾಗ ಮಹಿಳಾ ಜಾನಪದ ಕಥನಗಳ ಹಿಂದೆ ಕೆಲಸ ಮಾಡುವ ಪಿತೃಪ್ರಧಾನ ವ್ಯವಸ್ಥೆಯ ರಾಜಕಾರಣದ ಅರಿವಾಗದೇ ಇರದು. ಸ್ತ್ರೀಯನ್ನು ಪುರುಷನಿಗಿಂತ ಭಿನ್ನವಾಗಿ ಗುರುತಿಸಲು ಎತ್ತಿ ಹಿಡಿಯುವ ಆಕೆಯ ತ್ಯಾಗ,

ತಾಳ್ಮೆ, ರಕ್ಷಕ ಗುಣ, ತಾಯ್ತನ ಮುಂತಾದವುಗಳೇ ಲಿಂಗಪ್ರಭೇದ, ಶ್ರೇಣೀಕರಣ, ಶೋಷಣೆಗಳಿಗೂ ಮೂಲನೆಲೆಯಾಗುವ ವಿಡಂಬನೆಯ ಚಿತ್ರಣ ನಮಗಿಲ್ಲಿ ದೊರೆಯುತ್ತದೆ. ಪುರುಷ ಪ್ರಜ್ಞೆ ಸ್ತ್ರೀಗಾಗಿ ನಿರ್ಣಯಿಸಿದ ಸಿದ್ಧಮಾದರಿಗಳು ಎಷ್ಟು ಆಳವಾಗಿ ಸ್ವಮಾದರಿಗಳಾಗಿ ನಿಲ್ಲುತ್ತವೆಯೆನ್ನುವುದಕ್ಕೆ ಉತ್ತಮ ಉದಾಹರಣೆ ಇಲ್ಲಿ ಸಿಗುತ್ತದೆ.

ಹಾಡಿನ ಪ್ರಾರಂಭದಲ್ಲಿಯೇ ಅತ್ಯಂತ ಸರಳವಾಗಿ, ಅಷ್ಟೇ ನಿರ್ಣಾಯಕ ರೀತಿಯಲ್ಲಿ ಕಥನದ ಉದ್ದೇಶ ನಿರೂಪಿತವಾಗುತ್ತದೆ.

ಕಲ್ಲನಕೇರಿ ಮಲ್ಲನಗೌಡ ಕೆರೆಯೊಂದು ಕಟ್ಟಿಸ್ಯಾನ
ಕೆರೆಯೊಂದ ಕಟ್ಟಿಸ್ಯಾನ ಸೆರೆ ಮುಕ್ಕ ನೀರಿಲ್ಲ
.........
ಹೊತ್ತಿಗೆ ತಗಸ್ಯಾರು ಜೋಯಿಸ ಕೇಳ್ಯಾರು
ಹಿರಿಸೊಸಿ ಮಲ್ಲವನ ಹಾರವ ಕೊಡಬೇಕು
"ಹಿರಿ ಸೊಸಿನ್ನ ಕೊಟ್ಟರೆ ಹಿರಿತನಕ ಯಾರಿಲ್ಲ
ಕಡಿಸೊಸಿ ಭಾಗೀರತಿನ್ನ ಹಾರವ ಕೊಡಬೇಕು"
ಹಾರ ಕೊಡಬೇಕಂತ ಮಾತಾತು ಮನೆಯಾಗ

ಕೆರೆಯನ್ನು ಕಟ್ಟಿಸಬೇಕೆನ್ನುವುದರಲ್ಲಿರುವ ಕರುಣೆಯು ಹಾರವನ್ನು ಕೊಡಬೇಕೆನ್ನುವಲ್ಲಿರುವ ಕ್ರೌರ್ಯಕ್ಕೆ ಎದುರಾಗಿದ್ದು, ಇಲ್ಲಿ ಕರುಣೆ ಕ್ರೌರ್ಯಗಳ binary opposition ನಿರ್ಮಾಣವಾಗುತ್ತದೆ. ಪುರುಷ ಪ್ರಧಾನ ವ್ಯವಸ್ಥೆಯು ಹೆಣ್ಣಿನ ತ್ಯಾಗ, ನೈತಿಕ ಹಿರಿಮೆಗಳೆಂಬ ಮಾದರಿಗಳನ್ನು ಮುಂದೆ ಮಾಡಿ ತನ್ನ ಕರುಣೆ-ಕ್ರೌರ್ಯಗಳಿಗೆ ಹೆಣ್ಣನ್ನು ಸಾಧನವಾಗಿ ಬಳಸುವುದರಲ್ಲಿಯ ರಾಜಕಾರಣ ಮಹಿಳೆಯ ಶೋಷಣೆಯ, ಅವಳ ಮೇಲಿನ ನಿರ್ಬಂಧದ ಮತ್ತು ಅವಳ ಜೀವನದ ಅಪಮೌಲ್ಯೀಕರಣದ ವ್ಯಾಪ್ತಿಯನ್ನು ಸೂಚಿಸುತ್ತದೆ.

ಅವಳನ್ನು ಕೆರೆಗೆ ಹಾರವನ್ನಾಗಿ ಕೊಡುವ ನಿರ್ಣಯ ತಿಳಿದು ತಳಮಳಿಸಿದ ಭಾಗೀರಥಿ ಆಸರೆಗೆ ತವರುಮನೆಯ ಕಡೆ ಧಾವಿಸುತ್ತಾಳೆ. ಗಂಡ ಮಾದೇವರಾಯ ದಂಡಿಗೆ ಹೋಗಿದ್ದಾನೆ. ತವರು ಮನೆಗೆ ಬಂದರೂ ಭಾಗೀರಥಿ ತನ್ನ ದುಃಖದ ನಿಜಕಾರಣ ಹೇಳದೆ ಅತ್ತೆ-ಮಾವ ತಮ್ಮನ್ನು ಬೇರೆ ಮಾಡಿಡುವರೆಂಬ ಕಾರಣ ಹೇಳುತ್ತಾಳೆ. ಭಾಗೀರಥಿಯ ತಳಮಳ, ಸಂಕಟ, ಕಣ್ಣೀರುಗಳು ಅವಳ ಶೋಷಣೆಯ, ಅಸಹಾಯತೆಯ ಸಂಕೇತವಾಗಿ ನಿಲ್ಲುವುದೇ ಹೊರತು ತ್ಯಾಗಕ್ಕಲ್ಲ, ಸಮಾಜ ವ್ಯವಸ್ಥೆಯು ಅವಳನ್ನು ದನಿಯೆತ್ತಲು ಕೂಡ ಅಸಮರ್ಥಳಾಗಿಸಿದೆ ಯೆನ್ನುವುದರ ನಿದರ್ಶನ ಇಲ್ಲಿದೆ. ಆದ್ದರಿಂದ ಅವಳು ನಿಜವನ್ನು ಹೇಳುವುದು ತನ್ನ ಆಪ್ತ ಗೆಳತಿಗೆ ಮಾತ್ರ

"ನಮ್ಮತ್ತೆ ನಮ್ಮಾವ ಕೆರೆಗ್ಹಾರ ಕೊಡತಾರಂತ"

ಅದಕ್ಕೆ ಆಕೆಯ ಗೆಳತಿ,

"ಕೊಟ್ಟರ ಕೊಡಲೇಳು ಇಟ್ಹಾಂಗ ಇರಬೇಕ"

ಎಂದು ಹೇಳಿ ಭಾಗೀರಥಿಯನ್ನು ಸಮಾಧಾನಪಡಿಸಿ ಅವಳ ಸ್ಥೈರ್ಯವನ್ನು ಬಲಪಡಿಸಲೆತ್ನಿಸುವ ಕ್ರಿಯೆಯಲ್ಲಿ ಹೆಣ್ಣಿನ ಮೇಲೆ ಹೇರಿದ ತ್ಯಾಗದ ಮಾದರಿಯನ್ನು ಸ್ವಮಾದರಿಯನ್ನಾಗಿಸಿ ಕೊಳ್ಳುವ ಪ್ರಕ್ರಿಯೆ ವ್ಯಕ್ತವಾಗುತ್ತದೆ. ತ್ಯಾಗವೇ ತನ್ನ ಬದುಕಿನ ಹಿರಿಯ ಮೌಲ್ಯವೆಂದು ಅವಳು ಒಪ್ಪಿಕೊಳ್ಳುತ್ತಾಳೆ. ಆದರೆ ಕಥನದಲ್ಲಿಯ

ಎಂದಿಲ್ಲದ ಭಾಗೀರಥಿ ಇಂದ್ಯಾಕ ಬಂದೆವ್ವ
ಬಾಡಿದ ಮಾರ್‍ಯಾಕ ಕಣ್ಣಾಗ ನೀರ್‍ಯಾಕ

ಎನ್ನುವ ಸಾಲುಗಳಾಗಲಿ ಅಥವಾ

ಬ್ಯಾಳಿಯ ಹಸಮಾಡ್ತ ಬಿಟ್ಟಳು ಕಣ್ಣೀರ
ಎಂದಿಲ್ಲದ ಭಾಗೀರಥಿ ಇಂದ್ಯಾಕ ಕಣ್ಣೀರು"

ಎಂದು ಮಾವ ಕೇಳಿದಾಗ,

"ಬ್ಯಾಳ್ಯಾಗಿನ ಹಳ್ಳು ಬಂದು ಕಣ್ಣಿಗೆರಚಿದವು ಮಾವ"

ಅಥವಾ

"ಅಕ್ಕಿಯ ಹಸಮಾಡ್ತಾ ಉಕ್ಯಾವು ಕಣ್ಣೀರು
ಅಕ್ಕ್ಯಾಗಿನ ಹಳ್ಳೊಂದು ಕಣ್ಣಾಗ ಬಿತ್ತತ್ತಿ"

ಎನ್ನುವ ಸಾಲುಗಳು ಭಾಗೀರಥಿಯ ಅಸಹಾಯತೆ, ದುಃಖ, ಸಂಕಟಗಳನ್ನು ಸೂಚಿಸುವುದ ರೊಂದಿಗೆ ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳನ್ನು ವಿರೋಧಿಸುವ ಶಕ್ತಿಯನ್ನು ಹೆಣ್ಣು ಕಳೆದುಕೊಂಡಿರುವುದರ ಚಿತ್ರಣ ನೀಡುತ್ತವೆ. ಅಷ್ಟೇ ಅಲ್ಲದೆ ಮನೆಯ ಇತರೆ ಹೆಂಗಸರು ಪುರುಷ ವ್ಯವಸ್ಥೆಯೊಂದಿಗೆ ಕೈಜೋಡಿಸುವುದರಿಂದ ಭಾಗೀರಥಿಗೆ ಯಾವ ನೈತಿಕ ಆಸರೆ ನೀಡಲು ಅಸಮರ್ಥರಾಗುತ್ತಾರೆ.

ಕೆರೆಗೆ ಹಾರದ ದಿನದಂದು ಗಂಗೆಯ ಪೂಜೆ ಮಾಡಿ ಎಲ್ಲರೂ ಉಂಡು ತಿರುಗಿ ಹೊರಟಾಗ ಬೇಕೆಂದೇ ಬಿಟ್ಟು ಬಂದ ಬಂಗಾರದ ಬಟ್ಟಲನ್ನು ತರಲು ಬೇರೆ ಯಾರೂ ಸಿದ್ಧರಾಗುವುದಿಲ್ಲ.

ನಿಂಗವ್ವ "ನೀ ಹೋಗs" ನೀಲವ್ವ "ನೀ ಹೋಗs"
ನಿಂಗವ್ವ ನಾವೊಲ್ಲೆ ನೀಲವ್ವ "ನಾವೊಲ್ಲೆ"
ಸಣ್ಣ ಸೊಸಿ ಭಾಗೀರತಿ ನೀ ತರಹೋಗವ್ವ
ಸಣ್ಣ ಸೊಸಿ ಭಾಗೀರತಿ ಬಿರಿಬಿರಿ ನಡೆದಾಳು
ಬಿರಿಬಿರಿ ಹೋದಾಳು ಬಂಗಾರ ಬಟ್ಟಲ್ಲ ತೊಗೊಂಡಳು
ಒಂದ ಮೆಟ್ಲೇರುದಕ ಪಾದಕ ಬಂದಾಳು ಗಂಗಿ
........
ಐದು ಮೆಟ್ಲೇರುದಕ ತುಂಬಿ ಹರದಾಳು ಗಂಗಿ
ಸಣ್ಣ ಸೊಸಿ ಭಾಗೀರತಿ ಕೆರೆಗ್ಹಾರವಾದಳು

ಎನ್ನುವಲ್ಲಿ ಭಾಗೀರಥಿಯ ಬಲಿಯ ಎರಡು ರೂಪಗಳನ್ನು ನೋಡುತ್ತೇವೆ. ಒಂದು ರೀತಿಯಲ್ಲಿ ಭಾಗೀರಥಿಯು ಕೆರೆಗೆ ಬಲಿಯಾದರೆ, ಇನ್ನೊಂದು ರೀತಿಯಲ್ಲಿ ಆಕೆ ಪುರುಷ ಕೇಂದ್ರಿತ

ವ್ಯವಸ್ಥೆಗೆ ಬಲಿಯಾಗುತ್ತಾಳೆ. ಬಲಿಯಾಗುವ ಕ್ರಿಯೆಯನ್ನು ಭಾಗೀರಥಿಗೆ ಅನಿವಾರ್ಯವಾಗಿಸುವಲ್ಲಿ ವ್ಯಕ್ತವಾಗುವ ದೌರ್ಜನ್ಯವನ್ನೇ ಹೆಣ್ಣಿನ ಹಿರಿಮೆಯ ಪ್ರತೀಕವಾಗಿಸುವ ಪುರುಷ ವ್ಯವಸ್ಥೆಯ ರಾಜಕಾರಣಕ್ಕೆ "ಕೆರೆಗೆ ಹಾರ" ಒಂದು ಕನ್ನಡಿಯಾಗುತ್ತದೆ.

ಭಾಗೀರಥಿಯು ಕೆರೆಗೆ ಹಾರವಾದದ್ದನ್ನು ತಿಳಿದು ಮಾದೇವರಾಯನೂ ಕೆರೆಗೆ ಹಾರಿ ಪ್ರಾಣ ಬಿಡುವ ಸಂದರ್ಭವು ಯಜಮಾನ ಸಂಸ್ಕೃತಿಗೆ ಇನ್ನೊಂದು ಬಗೆಯ ಪ್ರತಿಭಟನೆಯ ಮಾದರಿಯಾಗುತ್ತದೆ. ಕಿರಿಸೊಸೆಯನ್ನು ಕೆರೆಗೆ ಹಾರವಾಗಿಸುವ ನಿರ್ಣಯ ತೆಗೆದುಕೊಂಡು ಮಲ್ಲನಗೌಡನಿಲ್ಲಿ ಮಗನನ್ನೂ ಕೂಡ ಕಳೆದುಕೊಂಡಾಗ ಕಥನದ ಆಳದಲ್ಲೊಂದು ವ್ಯಂಗ್ಯಾರ್ಥ ಕೂಡ ಅಡಗಿದೆಯೆನ್ನುವುದನ್ನು ನೋಡುತ್ತೇವೆ.

ಕೆ.ವಿ. ನಾರಾಯಣ ಅವರು 'ಎಲ್ಲೋ ಜೋಗಪ್ಪ ನಿನ್ನರಮನಿ' ಬಗ್ಗೆ ಹೇಳುತ್ತ ಕೋಲಾಟದ ಈ ಹಾಡಿನ ಹಾಡುಗಾರರು ಗಂಡಸರಾಗಿದ್ದು ಹಾಡು ಮಾತ್ರ ಹೇಗೆ ಹೆಣ್ಣಿನ ಅನುಭವ ಹೇಳುತ್ತದೆ ಎನ್ನುವ ಮಾತನ್ನು ಹೇಳಿದ್ದಾರೆ. ಈ ಪ್ರಕ್ರಿಯೆಯಲ್ಲಿ ಹಾಡಿನಲ್ಲಿ ವ್ಯಕ್ತವಾಗುವ ಅನುಭವ ಪ್ರಮುಖವಾಗುತ್ತದೆ. "ಕೆರೆಗೆ ಹಾರ"ದಂಥ ಹಾಡುಗಳು ಸಮುದಾಯದ ಪ್ರಜ್ಞೆಯಲ್ಲಿ ಉಳಿಯುವುದು ಹಾಡುಗಳು ಮುಂದಿಡುವ ಒಂದು ಹೆಣ್ಣಿನ ಅನುಭವದಿಂದಾಗಿ. ಬೇರೆ ಬೇರೆ ರೀತಿಯಲ್ಲಿ ಹೆಣ್ಣಿನ ಅಸಹಾಯತೆ, ದೌರ್ಜನ್ಯಗಳಿಗೆ ಈ ಹಾಡುಗಳು ದನಿಯಾಗುವುದನ್ನು ಕಾಣುತ್ತೇವೆ. ಪರೋಕ್ಷವಾಗಿ ಇಲ್ಲಿ ಅಭಿವ್ಯಕ್ತಿ ಕೂಡ ಪ್ರತಿಭಟನೆಯ ಒಂದು ಸಾಧನವಾಗುತ್ತದೆ ಎಂಬುದನ್ನು ಗುರುತಿಸಬಹುದು. ಮಾದೇವರಾಯನ ಮರಣದಲ್ಲಿ ಹಾಡಿನ ಅಂತರಂಗದಲ್ಲಿರುವ ವೈರುಧ್ಯ ವ್ಯಕ್ತವಾಗುವುದನ್ನು ಕೂಡ ಗಮನಿಸಬೇಕು. ಹಾಡಿನ ಪ್ರಮುಖ ಧಾರೆ ಪುರುಷ ತತ್ವವನ್ನು ಪೋಷಿಸಿದರೂ ಕೂಡ, ಕೊನೆಯಲ್ಲಿ ಮಾದೇವರಾಯ ಮುಂದಿನ ಸೋಬಾನದ ಯೋಚನೆ ಮಾಡದೇ, ಭಾಗೀರಥಿಯ ನೆನಪಿನಲ್ಲಿ ತನ್ನ ಪ್ರಾಣ ಹರಣ ಮಾಡಿಕೊಳ್ಳುವುದು ಹಾಡಿಗೊಂದು ಹೊಸ ದಿಕ್ಕನ್ನು ಸೂಚಿಸುವುದನ್ನೂ ಕೂಡ ಗಮನಿಸಬೇಕು. ಆದರೆ ಕವಿತೆಯ ಕೊನೆಯ ಹಂತದಲ್ಲಿ ಬರುವ ಮಾದೇವರಾಯನ ಪ್ರೇಮದ ಅಭಿವ್ಯಕ್ತಿಯು ಅಂತಃಕರಣ ಕಲಕುವಂತಿದ್ದರೂ ಅದಕ್ಕೆ ಕವನದಲ್ಲಿ ಶೋಷಣೆಯ ಪ್ರತೀಕವನ್ನು ಎದುರಿಸುವ ಸಾಮರ್ಥ್ಯವಿಲ್ಲ. ಆದರೂ ಕೂಡ ಮಾದೇವರಾಯನ ಸಾವು ಪ್ರತಿರೋಧದ ಒಂದು ದನಿಯಾಗಿ ನಿಲ್ಲುತ್ತದೆ.

"ಕೆರೆಗೆ ಹಾರ"ದಂಥ ಜಾನಪದ ಕಥನ ಕವನಗಳು ಆಮೂಲಾಗ್ರವಾಗಿ ಪುರುಷ ವ್ಯವಸ್ಥೆಯ ಸಮರ್ಥನೆಯಂತೆ ಹೊರಗಿನಿಂದ ಕಂಡು ಬಂದರೂ ಕೂಡ ಅದರಾಳದಲ್ಲಿಯೇ ಹುದುಗಿರುವ ಪ್ರತಿಭಟನೆಯ ಸೆಳಕುಗಳು ಕವನವು ಏಕಮುಖವಾಗಿ ಉಳಿಯಲು ಬಿಡುವುದಿಲ್ಲ ಎನ್ನುವುದು ಇಲ್ಲಿ ಮುಖ್ಯವಾಗುತ್ತದೆ. ಜನಪದವು ಬದುಕಿನ ಕ್ಲಿಷ್ಟತೆಯನ್ನು ಪ್ರತಿನಿಧಿಸುವ ಮಾದರಿಯೊಂದು ನಮಗಿಲ್ಲಿ ದೊರೆಯುತ್ತದೆ.

# ಬೆತ್ತಲಾಗದೆ ಬಯಲು ಸಿಕ್ಕದು

ವೀಣಾ ಬನ್ನಂಜೆ

ಅಕ್ಕಮಹಾದೇವಿ ನಿಮಗೆ ಒಬ್ಬ ಶರಣೆ, ಹನ್ನೆರಡನೆಯ ಶತಮಾನದಲ್ಲಿ ಆಗಿಹೋದ ಮಹಿಳೆ, ಅನುಭಾವ ಜಗತ್ತಿನ ಸಾಧಕಿಯಾಗಿ ಕಾಣಿಸಿದರೆ ನನಗೆ ಅವಳು ಆತ್ಮ ಸಂಗಾತಿ. ನಾನು ಮೂರನೆಯ ತರಗತಿಯಲ್ಲಿದ್ದಿರಬೇಕು. ನಮ್ಮ ಉಪಾಧ್ಯಾಯರು ಅವಳ ಕಥೆ ಹೇಳಿದ್ದರು. ಆಗ ಅವರು ಹೇಳಿದ್ದ ಕತೆಯಲ್ಲಿ ನನಗೆ ಉಳಿದ ಯಾವ ಭಾಗವೂ ನೆನಪಿಲ್ಲ. ಆದರೆ ಆಗ ನನಗೆ ತುಂಬ ಇಷ್ಟವಾದ ಮತ್ತು ಆಕರ್ಷಿಸಿದ ಸಂಗತಿಯೆಂದರೆ ಅಕ್ಕ ಬೆತ್ತಲು ಹೋದಳು ಎನ್ನುವುದು. ಅಂದಿನಿಂದಲೂ ನನಗೆ ಅವಳ ಬಗ್ಗೆ ವಿಶೇಷ ಗೌರವ ಆದರ್ಶನ, ಅವಳ ಹಾಗೆ ಬೆತ್ತಲಾಗಬೇಕು ಎಂಬ ಒಳಕುದಿ. ಆದರೆ ಕ್ರಮೇಣ ನನಗೆ ಇಷ್ಟು ತಿಳಿಯುತ್ತಿತ್ತು: ಅಕ್ಕಮಹಾದೇವಿ ಬೆತ್ತಲಾದಳು ನಿಜ. ಬೆತ್ತಲಾದವರೆಲ್ಲ ಅಕ್ಕಮಹಾದೇವಿ ಆಗಲಾರರು. ಹೀಗಾಗಿ ಅಕ್ಕಳ ಬಗ್ಗೆ ನಾನು ಬರೆಯುವುದೆಂದರೆ ಅದು ನನ್ನನ್ನು ಹುಟ್ಟಿಸಿಯೂ ಕಾಣದಿರುವ ತಾಯಿಯ ಬಗ್ಗೆ ಬರೆದಷ್ಟು. ನನ್ನ ಒಳಗೇ ಇದ್ದೂ ಇನ್ನೂ ಕಾಣದೆ ಇರುವ ಆ ದೇವರ ಕುರಿತು ಮಾತಾಡಿದಷ್ಟು ಪ್ರಿಯವಾದ ಸಂಗತಿ ನನಗೆ.

ಅನುಭಾವಿಗಳ ಬಗ್ಗೆ ಮಾತಾಡುವುದೆಂದರೆ ಅದು ಕೇವಲ ಮಾತಾದರೆ ಹಾಳು. ಒಬ್ಬರು ಬೆತ್ತಲಾದ ಮಾತ್ರಕ್ಕೆ ನಮಗೆ ಕಂಡಿರ ಬೇಕೆಂದೇನೂ ಇಲ್ಲ. ಈ ದೃಷ್ಟಿಯಲ್ಲಿ ಅಕ್ಕ ಅಂಥವರ ಕುರಿತು ಆಡುವುದು ತುಂಬ ಎಚ್ಚರಿಕೆಯ ಸಂಗತಿ. ಮೂರನೆಯ ಕಣ್ಣು ತೆರೆಯದೆ ಹೊರಗಿನ ಎರಡೇ ಕಣ್ಣಿಗೆ ಕಂಡದ್ದು ಸತ್ಯವೆನಿಸಿದರೆ ಅದು ಅನುಭಾವಿಗಳ ಬದುಕಿಗೆ ಮಾಡುವ ಅಪಚಾರ.

ಆದ್ದರಿಂದ ನನ್ನ ಈ ಕುರುಡುತನವನ್ನು ಮನ್ನಿಸೆಂದು ಅಕ್ಕಳನ್ನೇ ಕೇಳಿಕೊಂಡು ನಾನು ಅವಳನ್ನು ನೋಡುವ ಅಥವಾ ಕಾಣುವ ಪ್ರಯತ್ನ ಮಾಡುತ್ತೇನೆ. ಅಕ್ಕಳನ್ನು ನಾನೀಗ ಕಾಣುತ್ತಿರುವುದೇ ಸರಿಯಾದ ಮಾರ್ಗವೆಂಬ ಮಾತು ನನ್ನ ಒಳಗಿದ್ದರೆ ಅಹಂಕಾರವಾದೀತು. ಅಕ್ಕ ಕಾಣಿಸಲಿಕ್ಕೇ ಇಲ್ಲ.

ಕೆಲವು ವರುಷಗಳ ಹಿಂದೆ ಅಕ್ಕಳ ಬದುಕನ್ನು ಸೈದ್ಧಾಂತಿಕವಾಗಿ ನೋಡುವ ಒಂದು ವಿಷಾದನೀಯ ಕೆಲಸವನ್ನು ನಾನು ಮಾಡಿದ್ದೆ. ಅದು ಎಂ.ಫಿಲ್. ಪದವಿ ಎಂಬ ಪಗಾರಕ್ಕೆ ನಾನು ದುಡಿದ ದುಡಿತ. ನನಗೀಗ ಅದನ್ನು ಓದುವಾಗ ಅದೊಂದು ವಿಕಲ್ಪ ಬುದ್ಧಿಯ ಬರೆಹ ಅನಿಸಿತು.

ಜತೆಗೆ ಇನ್ನೊಂದು ಕುತೂಹಲದ ಸಂಗತಿಯು ಹೊಳೆಯಿತು-ಅನುಭಾವಿಗಳನ್ನು ಯಾರು ಹೇಗೆ ಬೇಕೊ ಹಾಗೆ ನೋಡಲು ಬರುತ್ತದೆ. ಅವರು ಅಷ್ಟು Fluid ಇರುತ್ತಾರೆ. ಅವರು ಬಯಲೇ ಆದ್ದರಿಂದ ನಾವು ಜಾಗ ಸಿಕ್ಕಲ್ಲಿ ಮನೆ ಕಟ್ಟಬಹುದು. ಈಗ ನಡೆದದ್ದೂ ಅದೇ ದುರಂತ.

ಈಗ ನನಗೆ ಅನಿಸಿರುವ ಕೆಲ ಸಂಗತಿಗಳನ್ನು ನಿಮ್ಮ ಮುಂದಿಡುತ್ತೇನೆ. ಇವು ಕೊನೆಯ ಸತ್ಯವೆಂಬ ವಾದವಿಲ್ಲ. ನನ್ನ ಎಂ.ಫಿಲ್. ಪ್ರಬಂಧದ ಹಾಗೆ ಇನ್ನೂ ಕೆಲವರುಷಗಳ ಬಳಿಕ ಈಗ ನಾನು ಬರೆದದ್ದು ನನಗೆ ಸರಿಯಲ್ಲ ಎನಿಸಬಹುದು. ನನಗೆ ನಿಂತ ನೀರಿಗಿಂತಲೂ ಹರಿವ ನದಿ ತುಂಬ ಇಷ್ಟ. ಬೆಳವಣಿಗೆಯ ದಾರಿಯಲ್ಲಿ ಕಂಡದ್ದೆಲ್ಲವೂ ಬೆಳಕಾಗಲಿ.

ಒಂದು ಅನುಭಾವ ಜಗತ್ತನ್ನು ಮತ್ತು ವ್ಯಕ್ತಿಯನ್ನು ನೋಡುವ ಕಣ್ಣುಗಳಿಗೆ ಮೂಲಭೂತವಾಗಿ ಕೆಲವು ಸಂಗತಿಗಳು ತಿಳಿದಿರಬೇಕು. ಅಕ್ಕ ಕೂಡ ಇದಕ್ಕೆ ಹೊರತಲ್ಲ. ನಾನು, ನೀವು ಬದುಕುವ ಜಗತ್ತು ಇದೆ. ಅದು ನಮಗೆ ಕಾಣುವ ಲೋಕ. ನಾನು ನೀವು ಕಾಣುವ ದೇಹ ನಮಗೆ ಗೊತ್ತಿದೆ. ಅದು ನಮ್ಮ ಅನುಭವಕ್ಕೆ ಬಂದಿದೆ. ಆದರೆ ಅದಷ್ಟೇ ಇಲ್ಲಿ ಅಸ್ತಿತ್ವದಲ್ಲಿದೆಯೇ? ಇದ್ದರೆ ಇಲ್ಲದುದರ ಹುಡುಕಾಟ ಯಾಕೆ? ಅಕ್ಕ ಬೆತ್ತಲಾಗಬೇಕು ಯಾಕೆ? ಬಸವಣ್ಣ ಮನೆ, ಮಠ, ಸಂಪತ್ತು ಬಿಟ್ಟು ಹೋದದ್ದು ಎಲ್ಲಿಗೆ? ತುಂಡು ಬಟ್ಟೆ ಉಟ್ಟ ಅಲ್ಲಮನಿಗೆ ಅಷ್ಟು ಗೌರವ ಹೇಗೆ? ಅವೆಲ್ಲ ಈ ಲೋಕದಲ್ಲಿ ಸಲ್ಲದ ಸಂಗತಿಗಳು. ಏನು ಹಾಗಾದರೆ......?

ನಾನು ಕಾಣುವ ಸಂಗತಿ ಇಷ್ಟು
ನಾವು ಕಾಣದ ಒಂದು ಲೋಕ ಇದೆ.
ನಾವುಕಾಣದ ಒಂದು ಶರೀರ ಇದೆ.

ನಮಗೆ ತಿಳಿದಿರುವ ಸ್ತ್ರೀಪುರುಷ ಎಂಬ ಎರಡು ದೇಹ ಮಾತ್ರವಲ್ಲದ ಮೂರನೆಯ ಲಿಂಗವು ಒಂದಿದೆ.

ಇದನ್ನು ದಯವಿಟ್ಟು ಅಸಂಗತ ಎಂದಾಗಲಿ, ಭ್ರಮೆ ಎಂದಾಗಲಿ ಬದಿಗೆ ತಳ್ಳುವುದು ಬೇಡ. ಇದರ ಕುರಿತು ಆಡಿದರೆ ಮುಂದಿನದು ಹೆಚ್ಚ ಸರಳವಾದೀತು. ಈ ಲೋಕದ ಕುರಿತ ನಮ್ಮ ಜ್ಞಾನ ಹೆಚ್ಚು. ಆದ್ದರಿಂದ ಅದನ್ನೇ ನೋಡಿದರೆ ಇಲ್ಲಿ ನಾನು, ನನ್ನದು, ನನ್ನವರು, ಸುಖ-ದುಃಖ, ಕಾಮ-ಭೀತಿ ಎಲ್ಲವೂ ಇವೆ. ಈ ಲೋಕವಲ್ಲಿರುವವರೆಗೆ ಹಾಗಾಗಿ ಕಾಡುವ ಮುಖ್ಯ ಸಂಗತಿ ಎಂದರೆ ಕಾಮ ಮತ್ತು ಭೀತಿ. ಕಾಮ ಎನ್ನುವುದನ್ನು ದೈಹಿಕ ಲಾಲಸೆಯಿಂದ ಹಿಡಿದು ಎಷ್ಟು ವಿಸ್ತಾರಕ್ಕೂ ಒಯ್ಯಿರಿ. ಒಟ್ಟಿನಲ್ಲಿ ದೈಹಿಕ ಅಥವಾ ಮಾನಸಿಕ ಅಪೇಕ್ಷೆ. ಅದನ್ನು ಇಲ್ಲಿರುವವರೆಗೆ ಬಿಟ್ಟಿರಲಾಗದು. ಇದು ಇರುವವರೆಗೆ ನಿರ್ಭೀತಿ ಮತ್ತು ಸ್ವಾತಂತ್ರ್ಯ ಅಥವಾ ಪ್ರೀತಿ ನಮ್ಮಲ್ಲಿ ಹುಟ್ಟಲು ಸಾಧ್ಯವೇ ಇಲ್ಲ. ಕಾಮ ಇರುವತನಕ ಭೀತಿ ಅದಕ್ಕೆ ಅಂಟಿಕೊಂಡೇ ಇರುತ್ತದೆ.

ನನ್ನ ಮಾತು ತೀರ ಅಸಂಗತವೆನಿಸಿದರೆ ನಾನು ಇದಕ್ಕೆ ಒಂದು ಚಿಕ್ಕ ಉದಾಹರಣೆ ಕೊಟ್ಟು ಮುಂದುವರಿಯುತ್ತೇನೆ. ನೀವು ಮಲಗುತ್ತೀರಿ. ರಾತ್ರಿ ಕನಸಿನಲ್ಲಿ ಪಕ್ಕದ ಮನೆಯ ಕೃಷ್ಣ ನಿಮ್ಮೊಂದಿಗೆ ಮಲಗಿ ಎದ್ದ ಕನಸು ಬಿದ್ದಿತ್ತು ಎಂದಿಟ್ಟುಕೊಳ್ಳಿ. ನೀವು ಬೆಳಿಗ್ಗೆ ಎದ್ದು ಇದನ್ನು ನಿಮ್ಮ ಗಂಡನಿಗೋ ಮನೆಯವರಿಗೋ ಹೇಳಲಾರಿರಿ. ನಿಮ್ಮ ಕನಸಿನಲ್ಲಿ ದೇವ ಪುರುಷನಾದ ಕೃಷ್ಣನೇ ಬಂದಿದ್ದ. ನೀವು ಬೆಳಿಗ್ಗೆ ಅದನ್ನು ವೈಭವದಿಂದ ನಿಮ್ಮವರೊಂದಿಗೆ ಹಂಚಿಕೊಳ್ಳಬಲ್ಲಿರಿ.

ಈಗ ನಾನು ನೇರವಾಗಿ ಕಾಣದಿರುವ ಇನ್ನೊಂದು ಲೋಕವನ್ನು ಪ್ರವೇಶಿಸುತ್ತೇನೆ. ನಾನು ಹೇಳುವ ನಿರ್ಭೀತಿ ಅಲ್ಲಿ ಸಾಧ್ಯವಿದೆ. ಅಲ್ಲಿ ಕಾಮವಿಲ್ಲ ಭೋಗವಿಲ್ಲ ಅಪೇಕ್ಷೆಗಳಿಲ್ಲವಾಗಿ ಸ್ವತಂತ್ರ ಹಕ್ಕಿಯ ಹಾಗೆ ಬದುಕು ಇರುತ್ತದೆ. ಅಲ್ಲಿ ಪ್ರೀತಿ ನಾನು ನನ್ನವರೆಂಬ ಕಟ್ಟುಪಾಡುಗಳಿಲ್ಲದೆ, ಅವನು, ಅವಳು ಎಂಬ ಲಿಂಗಭೇದವಿಲ್ಲದೆ ಎಲ್ಲರೂ ನಮ್ಮವರಾಗಿ ಯಾರೂ ನಮ್ಮವರಲ್ಲದವರಾಗಿ ಹರಿದಾಡುತ್ತಿರುತ್ತದೆ. ಅಲ್ಲಿ ಭೀತಿಯ ಲವಲೇಶವೂ ಇಲ್ಲ. ಏಕೆಂದರೆ ಆ ಲೋಕದಲ್ಲಿ ದೇಹವೇ ಇರುವುದಿಲ್ಲ ಅಲ್ಲಿರುವುದು ನಾನು ಮುಂದೆ ಹೇಳಬೇಕಾದ ಕಾಣದಿರುವ ಶರೀರ ಮಾತ್ರ, ಕಾಣದೆ ಇರುವ ಶರೀರದ ಕಡಗೆ ನೂಕಿಕೊಂಡವನಿಗೆ ಹೊರಗೆ ಕಾಣಿಸುವ ದೇಹ ಇರುವುದಿಲ್ಲ. ಈ ದೇಹವಿಲ್ಲದ ಮೇಲೆ ಲಿಂಗ ಪ್ರಜ್ಞೆ ಇರುವುದಿಲ್ಲ. ಲಿಂಗ ಪ್ರಜ್ಞೆಯು ಲಯವಾದಲ್ಲಿ ಮುಂದೆ ಬಯಲೋ ಬಯಲು.

ಅನುಭಾವಿಗಳು ಬದುಕಿರುವಾಗಲೇ ಈ ದೇಹದಿಂದ ಹೊರಬರುವ ಪ್ರಯತ್ನ ಮಾಡಿದರು. ಆಗ ಅವರ ಲೋಕ ಬೇರಾಯಿತು, ದೇಹವೂ ಬೇರಾಯಿತು. ಕಂಡ ಸತ್ಯವು ಹೊಸದಾಯಿತು. ಕಾಮಕ್ಕೆ ಬೇರೆ ಮುಖ ಬಂತು. ಈಗ ನಾವು ಕೆಲವು ವಚನ ಮತ್ತು ಕೀರ್ತನೆಗಳ ಸಾಲನ್ನು ನೋಡೋಣ.

ದಾಸರು ಹಾಡಿದರು - ಬೆತ್ತಲಾಗದೆ ಬಯಲು ಸಿಕ್ಕದಯ್ಯಾ

ಅಕ್ಕ ಹೇಳುತ್ತಾಳೆ - ಎನ್ನ ದೇವ ಚೆನ್ನಮಲ್ಲಿಕಾರ್ಜುನನೆಂಬ ಗರುವಂಗೆ ಜಗವೆಲ್ಲ ಹೆಣ್ಣು ನೋಡಾ.

ಭಾವಿಸುವೊಡೆ ಗಂಡು ರೂಪು  
ಪುರಂದರರ ಹಾಡು - ಘಟ್ಟನೆ ತುಟಿಯ ಚುಂಬಿಸುವದೇನು ನೀನು  
ರಟ್ಟು ಮಾಡಲು ಬೇಡ ರಾಜ್ಯದೊಳಗೆ  
ಗುಟ್ಟಿನಿಂದಲಿ ತವಕದಿ ಎನ್ನ ಕೂಡೊ  
ಅಟ್ಟಹಾಸದಿ ಮೆರೆವ ಪುರಂದರವಿಠಲ!  
ಏನು ಹೀಗೆಂದರೆ?

ಅಲ್ಲಮಪ್ರಭು ಒಮ್ಮೆ ಗೋರಖನಾಥರ ಮುಂದೆ ಯೋಗ ಚಮತ್ಕಾರಕ್ಕೆ ಮುಖಾಮುಖಿ ಆದರಂತೆ. ಆಗ ಗೋರಖರು ಖಡ್ಗದಿಂದ ತಮ್ಮ ದೇಹಕ್ಕೆ ಅಲ್ಲಮರಿಂದ ಹೊಡೆಸಿಕೊಂಡರು.

ಖಡ್ಗ 'ಖಲ್' ಎಂದು ಕಲ್ಲಿಗೆ ಬಡಿದು ಕಿಡಿ ಹಾರಿಸಿತು. ದೇಹ ಕಲ್ಲಾಗಿತ್ತು. ಅದು ಗೋರಖರು ದೇಹದ ಮೇಲೆ ಸಾಧಿಸಿದ ಪ್ರಭುತ್ವ.

ಆದರೆ ಅದೇ ಖಡ್ಗ ಗೋರಖರ ಕೈಗೆ ಬಂತು ಅಲ್ಲಮರು ಕೂತರು. ಖಡ್ಗ ಹಾಯಿಸಿದರೆ ದೇಹವೇ ಇಲ್ಲದ ಬಯಲಲ್ಲಿ ಅದು ಗಾಳಿಗುದ್ದಾಟ ನಡೆಸಿ ಹಾಯ್ದು ಬರುತ್ತಿತ್ತು. ಏನಿದರ ಅರ್ಥ? ಈ ದೇಹದಿಂದ ಹೊರಗೆ ಬಂದರಲ್ಲವೇ? ಬಯಲಾದ ಬೆತ್ತಲೆಂದರೆ ಇದೇ ಅಲ್ಲವೇ?

ಅಕ್ಕಳಿಗೆ ಇಲ್ಲಿ ಯಾರೂ ಗಂಡಸರೇ ಇಲ್ಲ. ಎಲ್ಲರು ಹೆಂಗಸರು ಅವಳಿಗೆ ಗಂಡಸು ಕಂಡಿದ್ದರೆ ಅದು ಅಲ್ಲಿ ಮಾತ್ರ, ಆ ಲೋಕದ ಒಡೆಯ ಚೆನ್ನಮಲ್ಲಿಕಾರ್ಜುನ. ತನ್ನ ದೇಹದ ಸಂಗತಿ ಬಂದಾಗ ಹೊರಗೆ ಹೆಣ್ಣಾದರೆ ಭಾವಿಸುವೊಡೆ ಗಂಡುರೂಪು; ಕಾಮವೇ ಇಲ್ಲದ ಲೋಕದಲ್ಲಿ ದಾಸರು ಕೃಷ್ಣನೊಂದಿಗೆ ಗೋಪಿಯಾಗಿ ರತಿಕ್ರೀಡೆ ಆಡುತ್ತಾರೆ.

ಹೆಚ್ಚು ಸ್ಪಷ್ಟ ವಿಷಯಕ್ಕೆ ಬರುತ್ತೇನೆ. ಅಕ್ಕಳಿಗೆ ಈ ಲೋಕದಲ್ಲಿ ಕಾಡುವ ಕಾಮ ಭೀತಿ ಬೇಡವಾಯ್ತು. ಆ ಲೋಕಕ್ಕೆ ಹೋಗುವ ಒಳಗುದಿ ತುಂಬ ಪ್ರಬಲವಿತ್ತು. ಆಗ ಅವಳಿಗೆ ಈ ದೇಹವು ಅಮುಖ್ಯವಾಯ್ತು. ಕೊನೆಗೆ ಅವಳೊಂದಿಗೆ ಉಳಿದದ್ದು ಆ ಲೋಕ ಮತ್ತು ದೇಹವಿಲ್ಲದ ಒಂದು ದೇವಾನುಭವ. ಈಗ ನಮಗೆ ತೀರ ಮೂಲಭೂತ ಎನಿಸುವ ಲೌಕಿಕ ಅಲೌಕಿಕ್ಕೇ ಬಂದರೆ ಅಕ್ಕ ಮಾಡಿಕೊಂಡ ತನ್ನ ಬೆಳವಣಿಗೆಯ ಸ್ವಾತಂತ್ರ್ಯ ತುಂಬ ಅದ್ಭುತವಿದೆ.

ಈ ದಾರಿಯಲ್ಲಿ ಮೊದಲು ಮಾಡಬೇಕಾದ ಕೆಲಸ ಬೇಡವಾದದ್ದನ್ನು ಬಿಡುವುದು. ಬೇಕಾದದ್ದನ್ನು ಪಡೆಯಬೇಕಾದರೆ ಬೇಡವಾದದ್ದನ್ನು ಬಿಡಲೇ ಬೇಕು. ಇದಕ್ಕೆ ಅಕ್ಕ ಒಬ್ಬಳ ಮಾತಲ್ಲ. ಎಲ್ಲ ಅನುಭಾವಿಗಳು ಮಾಡಿದ್ದು ಅದನ್ನೇ. ಅವರು ಮೊದಲು ಮಾಡುವ ಕೆಲಸ ಬಿಡುವುದು, ತ್ಯಜಿಸುವುದು. ಶಂಕರಾಚಾರ್ಯರಿಂದ ತೊಡಗಿ ಇಂದಿನವರೆಗಿನ ಎಲ್ಲ ಅನುಭಾವಿಗಳ ಬದುಕಿನ ಆರಂಭ ನೋಡಿ ಅವರು ಮೊದಲು ಮನೆ, ತಂದೆ,ತಾಯಿ, ಊರು ಬಿಡುತ್ತಾರೆ. ಮುಂದೆ ಅವರು ತೊರೆಯುವುದರ ಪಟ್ಟಿಯೇ ಬೆಳೆಯುತ್ತದೆ.

ಯಾರಿಗೆ ಈ ದೇಹವನ್ನೇ ತಾನೆಂದು ಒಪ್ಪಿಕೊಳ್ಳುವುದು ಸಾಧ್ಯವಿಲ್ಲವೋ ಅವರಿಗೆ ಈ ದೇಹಕ್ಕಂಟಿದ ಸಂಬಂಧಗಳನ್ನು, ಕಾಮಲಾಲಸೆಗಳನ್ನು, ಈ ದೇಹದ ಸುಖ ದುಃಖಗಳನ್ನು ಒಪ್ಪಿಕೊಳ್ಳುವುದು ತುಂಬ ಕಷ್ಟವಾಗುತ್ತದೆ. ಆಗ ಅವರು ಒಂದು ಹುಡುಕಾಟಕ್ಕೆ ತೊಡಗುತ್ತಾರೆ. ಅಕ್ಕಳ ಬದುಕಿನಲ್ಲಿ ನಡೆದದ್ದೂ ಇದೇ. ಅವಳಿಗೆ ತನ್ನ ದೇಹ ತನ್ನ ಇರವಲ್ಲ ಅನಿಸಿತು. ಇದರಾಚೆಗೆ ಏನೋ ಇದೆ ಎಂಬ ಸತ್ಯ ಅಸ್ಪಷ್ಟವಾಗಿ ಕಾಣುವುದಕ್ಕೆ ತೊಡಗಿತ್ತು. ಇಲ್ಲಿರುವುದೆಂದರೆ ತೆರಣಿಯ ಹುಳು ತನ್ನ ನೂಲನೆ ಸುತ್ತಿ ಸಾವ ತೆರನಂತೆ ಎಂಬ ಎಚ್ಚರವಿತ್ತು.

ಆಗ ಅಕ್ಕ ತನ್ನ ದಾರಿಯ ಆರಂಭದ ಕೆಲಸಕ್ಕೆ ತೊಡಗಿದಳು. ಅದೆಂದರೆ ಬೇಡವಾದದ್ದನ್ನು ಬಿಡುವುದು. ಅವಳು ಮೊದಲು ಗಂಡನನ್ನು ಬಿಟ್ಟಳು. ಏಕೆಂದರೆ ಆ ದೇಹಕ್ಕೆ ಅಂಟಿದ ಕಾಮ ಅವಳಿಗೆ ಬೇಡವಾಗಿತ್ತು. ಮನೆ ಬಿಟ್ಟಳು, ಅದು ಈ ದೇಹಕ್ಕೆ ಅಂಟಿದ ಲೋಕವೇ ಇತ್ತು. ಆ ಬಳಿಕ ದೇಹವನ್ನೇ ಬಿಟ್ಟಳು. ಆಗ ಬಟ್ಟೆಯು ಬೇಡವಾಯ್ತು.

ಇದನ್ನೇ ನಾವು ಕಾಣದ ಲೋಕ ಅಥವಾ ಅಲೌಕಿಕ ಎನ್ನುವುದು. ವಾಸ್ತವಿಕವಾಗಿ ಅಲೌಕಿಕ ಎನ್ನುವ ಒಂದು ಲೋಕವಿಲ್ಲ. ನಾವು ಯಾವ ಬಂಧನ, ಕಾಮ ಮತ್ತು ಭೀತಿಗಳನ್ನು ಅನುಭವಿಸುತ್ತೇವೆಯೋ ಅವಿಲ್ಲದ ನಿರ್ಭೀತ ಸ್ವಾತಂತ್ರ್ಯದ ಮತ್ತು ಪ್ರೀತಿ ತುಂಬಿದ ಲೋಕವೇ ಅಲೌಕಿಕ, ಆದರೆ ಹಾಗೆ ಬದುಕಲಾಗದ ಕಾರಣಕ್ಕೆ ನಾವು ಅದನ್ನು ದೂರ ಇಟ್ಟೆವು. ಕಾಣದ ಲೋಕ ಎಂದು ಕರೆದೆವು.

ಆ ಲೋಕದಲ್ಲಿ ಸ್ವಾತಂತ್ರ್ಯ ಮತ್ತು ನಿರ್ಭೀತಿಯ ಮಹಾಪೂರವೇ ಇರುತ್ತದೆ. ಆದ್ದರಿಂದ ಅದರ ಕಡೆಗೆ ಹೋಗುವ ಪ್ರಯತ್ನವನ್ನು ಅಕ್ಕ ಮಾಡುತ್ತಾಳೆ. ಆದರೆ ಅದು ಒಂದು ದಿನದಲ್ಲಿ ಒಂದು ಕ್ಷಣದಲ್ಲಿ ನಡೆದ ಸಂಗತಿಯಲ್ಲ. ಅದರ ತುಂಬ ನೂರಾರು, ಸಾವಿರಾರು ದಿನಗಳ ಒದ್ದಾಟವಿದೆ. ಅಕ್ಕಳ ಅನೇಕ ವಚನಗಳು ಈ ಲೌಕಿಕದ ಆಕರ್ಷಣೆಗಳು ತನ್ನನ್ನು ಕಾಡುವ ರೀತಿಯನ್ನು ಗೋಗರೆದು ತೋಡಿಕೊಳ್ಳುತ್ತವೆ. ಅದು ಅವಳನ್ನು 'ಎರಡಕ್ಕೆ ಬಿಟ್ಟ ಕರುವಿನಂತೆ' ಅತ್ತಲಿತ್ತ ಎಳೆದಾಡುತ್ತದೆ. ಆದರೂ ಅಕ್ಕಳಿಗೆ ಅದನ್ನು ಬಿಟ್ಟು ಬರುವ ತುಡಿತ ಮತ್ತು ಈ ಲೋಕ ಎಷ್ಟು ನಶ್ವರೆಂಬ ಎಚ್ಚರಿಕೆಯೂ ಇದೆ.

ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ
ತನ್ನ ನೂಲು ತನ್ನನೆ ಸುತ್ತಿ ಸಾವಂತೆ
ಮನ ಬಂದುದ ಬಯಸಿ ಬೇವುತ್ತಿದ್ದೆನಯ್ಯ
ಎನ್ನ ಮನದ ದುರಾಶೆಯ ಮಾಣಿಸಿ
ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನಾ |

ಅಕ್ಕ ತಾನು ಕೆಲವನ್ನು ಬಿಟ್ಟರೂ ಅವಳು ಹೆಣ್ಣಾಗಿರುವುದರಿಂದ ಅವಳನ್ನು ಬೆನ್ನಟ್ಟಿ ಬರುವ ಸಮಸ್ಯೆಗಳು ಹಲಾವರು ಇವೆ. ಅಕ್ಕ ಅವುಗಳನ್ನು ದಾಟಬೇಕು. ಅಕ್ಕ ಹೇಳಿಕೊಳ್ಳುವ,

ನೋಡುವ ಕಂಗಳಿಗೆ ರೂಪಿಂಬಾಗಿರಲು
ನೀವು ಮನ ನಾಚದೆ ಬಂದಿರಣ್ಣಾ
ಕೇಳಿದ ಶ್ರೋತ್ರ ಸೊಗಸಿಗೆ ನೀವು ಮರುಳಾಗಿ ಬಂದಿರಣ್ಣಾ
ನಾರಿಯೆಂಬ ರೂಪಿಗೆ ನೀವು ಒಲಿದು ಬದಿರಣ್ಣಾ
ಮೂತ್ರವು ಬಿಂದು ಒಸರುವ ನಾಳವೆಂದು
ಕಂಗಾಣದೆ ಮುಂದುಗೆಟ್ಟು ಬಂದಿರಣ್ಣಾ

ಬುದ್ಧಿಗೇಡಿತನಿಂದ ಪರಮಾರ್ಥದ ಸುಖವ ಹೋಗಲಾಡಿಸಿಕೊಂಡು ಇದಾವ ಕಾರಣ ವೆಂದರಿಯದೆ.

ನೀವು ನರಕ ಹೇತುವೆಂದರಿತು ಮನಹೇಸದೆ ಬಂದಿರಣ್ಣಾ ಚೆನ್ನಮಲ್ಲಿಕಾರ್ಜುನನಲ್ಲದೆ ಧಿಕ್ಕಿಹ ಪುರುಷರೆನಗೆ ಸಹೋದರರು ಛಿ! ಹೋಗಾ ಮರುಳೆ!

ಇಂಥ ಬಿಕ್ಕಟ್ಟನ್ನು ಅಕ್ಕ ದಾಟಬೇಕಾಗಿತ್ತು. ಇಂಥ ನೂರಾರು ಆಕರ್ಷಣೆಯ, ಪೀಡಿಸುವ ಸಂಗತಿಗಳನ್ನು ಅಕ್ಕ ಹೇಳಿಕೊಳ್ಳುತ್ತ ಕಟ್ಟ ಕಡೆಗೊಮ್ಮೆ ದೃಢ ಸ್ಥಿತಿಯನ್ನು ತಲುಪುತ್ತಾಳೆ.

ಇದನ್ನೇ ನಾವು ಆತ್ಮ ಸಾಕ್ಷಾತ್ಕಾರ ಎನ್ನುವುದು ಅಥವಾ ಮುಕ್ತಿ ಎನ್ನುವುದು. ಅಲ್ಲಿ ಈ ಲೋಕಕ್ಕೆ ಮರಳಿ ಬರುವ ಯಾವ ಗೊಂದಲವು ಇರುವುದಿಲ್ಲ.

ಕಟಿಹಾದ ಬಿದಿರಿನಲ್ಲಿ ಮರಳಿ ಕಳಲೆ ಮೂಡ ಬಲ್ಲುದೆ?
ಸುಟ್ಟಮಡಕೆ ಮುನ್ನಿನಂತೆ ಮರಳಿ ಧರೆಯನಪ್ಪ ಬಲ್ಲುದೆ?
ತೊಟ್ಟಬಿಟ್ಟು ಬಿದ್ದ ಹಣ್ಣು ಮರಳಿ ತೊಟ್ಟನಪ್ಪ ಬಲ್ಲುದೆ?
ಕಷ್ಟಕರ್ಮಿ ಮನುಜರು ಕಾಣದೆ ಒಂದ ನುಡಿದರೆ
ನಿಷ್ಠೆಯುಳ್ಳ ಶರಣರು ಮರಳಿ ಮರ್ತ್ಯಕ್ಕೆ ಬಪ್ಪರೆ ಚೆನ್ನಮಲ್ಲಿಕಾರ್ಜುನಾ?

ಇದು ಅಕ್ಕ ಅಥವಾ ಅನುಭಾವಿಗಳು ಈ ಲೋಕದಿಂದ ಪಡೆದ ಮುಕ್ತಿಯ ಸ್ಥಿತಿ. ಇಲ್ಲಿಂದ ಮರಳಿ ಬರುವ ಯಾವ ಸಾಧ್ಯತೆಗಳೂ ಇಲ್ಲ. ಆದರೆ ಈ ಲೋಕವನ್ನು ಬಿಟ್ಟ ಎಲ್ಲ ಅನುಭಾವಿಗಳು ಅವರದೇ ಒಂದು ಲೋಕ ನಿರ್ಮಿಸಿಕೊಳ್ಳುತ್ತಾರೆ. ಅಲ್ಲಿ ಹಿಗ್ಗೋ ಹಿಗ್ಗು. ಸುಖ ಒಂದೇ ಅನುಭವ. ಸ್ವಾತಂತ್ರ್ಯ ಒಂದೇ ಬದುಕು.

ಅಕ್ಕ ಕೂಡ ಅಂಥ ಲೋಕವನ್ನು ನಿರ್ಮಿಸಿಕೊಂಡವಳು. ಅವಳ ವಚನ ಇಂಥ ಅನೇಕ ಸಂಗತಿಗಳನ್ನು ತೋರಿಸುತ್ತದೆ. ಆ ಲೋಕದ ನಿರ್ಮಾಣ ದೇವರನ್ನು ಕಾಣುವ ದಾರಿಯ ಮೊದಲ ಹೆಜ್ಜೆ ಮಾತ್ರ. ದೇವರು ಆ ಲೋಕದಲ್ಲಿ ಸಂಭವಿಸುವ ಕೊನೆಯ ಕಾಣ್ಕೆ. ಅದಕ್ಕೆ ಮೊದಲು ಅನೇಕ ಮಜಲುಗಳನ್ನು ಅನುಭಾವಿಗಳು ದಾಟಬೇಕು. ಅಕ್ಕಳ ವಚನಗಳ ಅಭಿವ್ಯಕ್ತಿಯನ್ನು ಒಟ್ಟು ಕೂಡಿಸಿ ನೋಡಿದಾಗ ಇದು ಸ್ಪಷ್ಟವಾಗುತ್ತದೆ.

ದೇಹವನ್ನು ಹುಟ್ಟಿಸಿದ ತಂದೆ ತಾಯಿಯನ್ನು ಈ ದಾರಿಯಲ್ಲಿ ತೊರೆದು ಬಂದಿರುವ ಅನುಭಾವಿಗಳು ಮೊದಲು ತಿಳಿಯುವ ಸಂಗತಿ - ತಂದೆ ಇದ್ದರೆ ಅದು ಆ ದೇವರು ಮಾತ್ರ ಇಲ್ಲಿ ಎಲ್ಲರೂ ಹುಟ್ಟಿದ್ದಾರೆ. ಇದು ಒಬ್ಬೊಬ್ಬರಿಂದ ನಡೆಯಲಿಲ್ಲ ಅವನಿಂದ ನಡೆದಿದೆ.

ಅದರ ಮುಂದಿನ ಹಂತ ಉಳಿದವರೆಲ್ಲ ಬಂಧುಗಳಾಗಿ ಬಿಡುವುದು. ಆದ್ದರಿಂದಲೇ ಅಕ್ಕ ಕಾಣುವ ಎಲ್ಲ ಗಂಡಸರೂ ಅವಳಿಗೆ ಅಣ್ಣಂದಿರಾಗುತ್ತಾರೆ. ಹೆಂಗಸರು ಅಕ್ಕ ತಂಗಿಯರಾಗುತ್ತಾರೆ. ರಕ್ತ ಸಂಬಂಧ ತೊರೆದುಕೊಂಡು ಮೂಲವು ಒಳಶರೀರಕ್ಕೆ ಹರಿದಾಗ ಇದು ಒಂದು ಹೊಸ ಕುಟುಂಬವನ್ನು ನಿರ್ಮಿಸುತ್ತದೆ. ಆಗ ಲೋಕವಿಡೀ ಕುಟುಂಬವಾಗುತ್ತದೆ. ಆದ್ದರಿಂದ ಅಕ್ಕ ತನ್ನ ಕನಸುಗಳನ್ನು ತಂಗಿ, ಅಕ್ಕಾ, ಅಣ್ಣಾ, ಈ ಸಂಬೋಧನೆಗಳಲ್ಲಿ ಹೇಳುವುದಕ್ಕೆ ಉದ್ದೇಶವಿದೆ. ಇವು ಆಕಸ್ಮಿಕಗಳಲ್ಲ. ಅನುಭಾವಿ ಬದುಕಿನಲ್ಲಿ ನಿರ್ಮಾಣವಾಗುವ ದೇಹದಾಚೆಗಿನ ಸಂಬಂಧದ ಮೂಲ ಸೆಲೆ ಇದು, ಆದ್ದರಿಂದಲೇ ಅಕ್ಕ "ಕಿನ್ನರಿ ಬೊಮ್ಮಯ್ಯನಂಥ ಸಹದೋರರೆನಗೆ" ಎಂದು ತನ್ನ ದೇಹದ ಬಳಿ ಬಂದ ಗಂಡಸನ್ನು ಲಿಂಗಭಯವಿಲ್ಲದೆ ಕಾಣುವುದು ಸಾಧ್ಯವಾಗುತ್ತದೆ.

ಈ ಬಂಧುತ್ವದ ಜತೆಗೆ ಅನುಭಾವಿ ಬದುಕಿನ ಇನ್ನೊಂದು ಅಪೂರ್ವ ಮುಖವೆಂದರೆ ಗಿಡ, ಮರ, ಪಕ್ಷಿಗಳೂ ಬದುಕಿನ ಅಂಗಗಳಾಗಿ ಬಿಡುವುದು. ಅದರ ನೋವು ನಲಿವು ಅವರಿಗೆ ಕಾಣಿಸುತ್ತದೆ. ಸುಖ ದುಃಖ ವಿನಿಮಿತವಾಗುತ್ತದೆ. ಹಾಗಾಗಿ ಯಾವುದೇ ಅನುಭಾವಿಗಳಲ್ಲಿ

ವರ್ಣನೆಯ ಭಾಗಗಳಿಲ್ಲ. ಅದಕ್ಕೆ ಪ್ರಮುಖ ಕಾರಣವಿದೆ. ಭೋಗಿಸುವ ಮನಸ್ಸು ಮಾತ್ರ ತನಗೆ ಕಂಡದ್ದನ್ನು ಭೋಗಕ್ಕೆ ಬಳಸುತ್ತದೆ. ಆದರೆ ಅನುಭಾವಿಗಳಿಗೆ ಭೋಗವೇ ಇಲ್ಲವಾಗಿ ಕಂಡದ್ದು ವರ್ಣಿಸುವ ವಸ್ತುವಾಗುವುದಿಲ್ಲ. ಆತ್ಮೀಯ ಸಂವಹನ ಜೀವನವಾಗುತ್ತದೆ.

ಅಕ್ಕ ಚೆನ್ನಮಲ್ಲಿಕಾರ್ಜುನ ಎಲ್ಲಿರುವನೆಂಬುದನ್ನು ಕಾಲದೇಶಕ್ಕೆ ಬಾಧಿತರಾದ ಮನುಷ್ಯರ ಬಳಿ ಕೇಳುವುದಿಲ್ಲ; ಪಕ್ಷಿಗಳೊಂದಿಗೆ ಕೇಳುತ್ತಾಳೆ. ಅಂಥ ಸುಂದರ ವಚನ -

ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೆ, ನೀವು ಕಾಣಿರೆ!
ಸ್ವರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ
ಕೊಳಗಿನ ತಟಿಯೊಳಾಡುವ ಹಂಸೆಗಳಿರಾ ನೀವು ಕಾಣಿರೆ ನೀವು ಕಾಣಿರೆ
ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ ನೀವು ಕಾಣಿರೆ
ಎನ್ನ ದೇವ ಚೆನ್ನಮಲ್ಲಿಕಾರ್ಜುನ ಎಲ್ಲಿಹನೆಂದು ನೀವು ಹೇಳಿರೆ ನೀವು ಹೇಳಿರೆ!

ಈ ಬಂಧುತ್ವ ಮತ್ತು ಪ್ರಕೃತಿ ಸಂಬಂಧ ನಿರ್ಮಾಣವಾಗಿಯೂ ದೇವ ದೂರವೇ ಉಳಿಯುತ್ತಾನೆ. ಆ ದೇವರ ಒಳಗೆ ಒಯ್ಯುವ ಮತ್ತೊಂದು ಮೆಟ್ಟಿಲನ್ನು ನಾವು ಅಕ್ಕಳಲ್ಲಿ ಕಾಣುತ್ತೇವೆ. ಅದು ತಾಯಿಯ ಮಿಲನ. ದೇಹ ಹುಟ್ಟಿಸಿದ ತಾಯಿಯಲ್ಲ ಅವಳು ಆಗಲೇ ವಿವರಿಸಿದ ದೇಹದ ಒಳಗೊಂದು ನಮಗೆ ಕಾಣದ ಶರೀರವಿದೆ. ಆ ಒಳಶರೀರ ಎಂಬ ಮಗುವನ್ನು ಅವಳು ಹುಟ್ಟಿಸುತ್ತಾಳೆ. ಅದೇ ಮೂರನೇಯ ಲಿಂಗ, ಮಗುವಿಗೆ ಯಾವ ಲಿಂಗ? ಮುಂದೆ ಆ ಮಗುವನ್ನು ತಾಯಿಯೇ ಬೆಳೆಸಿ ದೇವನ ಬಳಿಗೆ ಬಿಟ್ಟು ಬರುತ್ತಾಳೆ. ಹುಟ್ಟಿಸಿದ ಮಗುವನ್ನು ಯೋಗ್ಯ ವರನಿಗೆ ಮದುವೆ ಮಾಡಿಸುವಂತೆ ಈ ತಾಯಿಯ ಸಂಬಂಧವಿರುತ್ತದೆ. ಈ ತಾಯಿಯೇ ದೇವರು ಮತ್ತು ಅನುಭಾವಿಗಳ ದರ್ಶನ ಸ್ಥಿತಿಯನ್ನು ಕೂಡಿಸಲು ಬರುವ ಕೊನೆಯ ಸೇತುವೆ. ಆದ್ದರಿಂದ ಅನುಭಾವಿಗಳ ಬದುಕಿನಲ್ಲಿ ತಾಯಿಗೆ ಮಹತ್ವದ ಸ್ಥಾನ. ಅಲ್ಲಿಂದ ಮುಂದೆ ದೇವನೆಂಬ ಅಗೋಚರನಾಗಿದ್ದ ಶಕ್ತಿ ನಿಧಾನಕ್ಕೆ ಗೋಚರವಾಗುವ ಸ್ಥಿತಿ ಆರಂಭವಾಗುತ್ತದೆ. ನೀವು ಗಮನಿಸಿದರೆ ಅಕ್ಕಳ ವಚನಗಳ ಆರಂಭದಲ್ಲಿ ತಾಯಿಯೊಂದಿಗೆ ತನ್ನ ಲೌಕಿಕದ ಆಕರ್ಷಣೆಯಿಂದ ಬಿಡಿಸೆನ್ನುವ ಬೇಡಿಕೆಯಿದ್ದರೆ ಕಾಲಾಂತರದಲ್ಲಿ ಅದು ತಾಯಿಯೊಂದಿಗೆ ತನ್ನ ಮತ್ತು ಚೆನ್ನಮಲ್ಲಿಕಾರ್ಜುನನ ಭೇಟಿಯನ್ನು ತನ್ನ ಅವನ ಮದುವೆಯನ್ನು ಹೇಳಲು ತೊಡಗುತ್ತದೆ. ತಾಯಿ ಬಂದ ಬಳಿಕ ಅಕ್ಕಳಿಗೆ ತಾನು ಚೆನ್ನಮಲ್ಲಿಕಾರ್ಜುನನನ್ನು ಮದುವೆಯಾದ ರೀತಿಯನ್ನು ಹೇಗೆ ವಿವರಿಸಿದರೂ ಸಾಕೆನಿಸುವುದಿಲ್ಲ. ಕಳೆದು ಹೋದ ದೇವನನ್ನು 'ತಾಯಿಯೇ ಕರೆದು ತರಬೇಕು -

ಕಳವಳದ ಮನ ತಲೆಕೆಳಗಾದುದವ್ವಾ
ಸುಳಿದು ಬೀಸುವ ಗಾಳಿ ಉರಿಯಾದುದವ್ವಾ
ಬೆಳದಿಂಗಳು ಬಿಸಿಲಾಯಿತ್ತು ಕೆಳದಿ
ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವಾ

ತಿಳುಹಾ ಬುದ್ಧಿಯ ಹೇಳಿ ಕರೆತಾರೆಲಗವ್ವಾ
ಚೆನ್ನಮಲ್ಲಿಕಾರ್ಜುನಂಗೆ ಎರಡರ ಮುನಿಸವ್ವಾ.

ಅವನು ತನ್ನನ್ನು ಕೂಡಿದ್ದನ್ನು ತಾಯಿಯ ಬಳಿಯೇ ಹೇಳಬೇಕು

ಮಚ್ಚು ಅಚ್ಚುಗವಾಗಿ ಒಪ್ಪಿದ ಪರಿಯ ನೋಡಾ
ಎಚ್ಚಡೆ ಗರಿದೋರದಂತಿಬೇಕು
ಅಪ್ಪಿದಡೆ ಅಸ್ತಿಗಳು ನುಗ್ಗುನುಸಿಯಾಗಬೇಕು
ಬೆಚ್ಚಪ್ಪ ಬೆಸುಗೆಯನರಿಯದಂತಿರಬೇಕು
ಮಚ್ಚು ಒಪ್ಪಿತ್ತು ಚೆನ್ನಮಲ್ಲಿಕಾರ್ಜುನನ ಸ್ನೇಹ ತಾಯೆ!

ದೇವರನ್ನು ಬಿಟ್ಟರೆ ಅತ್ಯಂತ ಹತ್ತಿರದವಳು ತಾಯಿಯೆ. ಇದು ಅನುಭಾವಿ ಬದುಕಿನ ಸೊಗಸು; ಅಕ್ಕ ಆ ಬದುಕಿನ ಕೂಸೇ.

ಈ ಅಲೌಕಿಕ ಬದುಕಿನ ಸಾಧನೆಯ ಕೊನೆಯ ಹಂತ ಸಮರ್ಪಣೆ. ಇದುವರೆಗಿನ ತ್ಯಜಿಸುವಿಕೆಗಳು ಸಮರ್ಪಣೆಯಾದರೂ ಅದರ ಪರಿಪೂರ್ಣ ಅಂಶ ದೇಹಾರ್ಪಣೆಯೇ ಆಗಿರುತ್ತದೆ. ಅಕ್ಕ ಕೂಟ ಆ ಸ್ಥಿತಿಯನ್ನು ಅನುಭವಿಸುತ್ತಾಳೆ.

ಆಗ ಲೌಕಿಕದಲ್ಲಿ ಹೇಳುವ ಯಾವ ಕಾಮ ಪರಿತ್ಯಾಜ್ಯವಿತ್ತೋ ಅದು ಇಲ್ಲಿ ಪೂಜ್ಯವಾಗುತ್ತದೆ. ದೇಹ ದೇವನಿಗೆ ಅರ್ಪಿಸುವ ಕಾಣಿಕೆಯಾಗುತ್ತದೆ. ಆಗ ಉಳಿಯುವುದು ನಿರ್ಭೀತ ಸ್ವಾತಂತ್ರ್ಯ ಮತ್ತು ಮುಕ್ತಪ್ರೇಮ ಮಾತ್ರ ಸಾವಿರಾರು ಸ್ತ್ರೀಯರೊಂದಿಗಿದ್ದೂ ಯಾರೊಂದಿಗೂ ಉಳಿಯದ ಕೃಷ್ಣಾನುಭವ. ಆಗ ದೇವರ ಜತೆಗೆ ಮಿಲನದ, ವಿರಹದ, ಕೂಡವ, ಸಂಭೋಗಿಸುವ ಎಲ್ಲ 'ಲೈಂಗಿಕ' ಎನ್ನುವ ಆದರೆ ದೇಹದಿಂದ ತಮ್ಮನ್ನು ಹೊರನೂಕಿಕೊಳ್ಳುವ ಸಂಗತಿಗಳು ಈ ಲೋಕದಲ್ಲಿ ಮುಕ್ತವಾಗಿ ನಡೆಯುತ್ತವೆ. ಇದು ಲೌಕಿಕದ ಬಂಧನವೇ ಅಲ್ಲವಾಗಿ, ಬೆಳವಣಿಗೆಯ ದಾರಿಯ ಸಮರ್ಪಣಾ ಭಾವವಾಗಿ ಕರಗಿ ಲಯವಾಗುವ ಕಡೆಗೆ ಒಯ್ಯುತ್ತದೆ. ಇದು ಭಕ್ತ ತಲುಪುವ ಕೊನೆಯ ಹಂತ. ಆದ್ದರಿಂದಲೇ ಗಂಡನನ್ನು ಬಿಟ್ಟ ಅಕ್ಕ ಇಲ್ಲಿ

'ಧರ್ಮವೆಂಬ ಗಂಡನ ಬಾಯ ಟೊಣೆದು.
ಚೆನ್ನಮಲ್ಲಿಕಾರ್ಜುನನ ಕೂಡ ಹಾದರವ ಮಾಡುವೆನು' ಎನ್ನುತ್ತಾಳೆ.

ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳೆಂದು ನಿರ್ಭಿಡೆಯಿಂದ ಘೋಷಿಸಿಕೊಳ್ಳುತ್ತಾಳೆ. ಏಕೆಂದರೆ ಈ ಕೂಡುವಿಕೆಗೆ "ಮೂತ್ರ ಒಸರುವ ಬಿಂದು ನಾಳದ ಜತೆಗೆ ಯಾವ ಸಂಬಂಧವೂ ಇರುವುದಿಲ್ಲ. ಆದ್ದರಿಂದ ಅಕ್ಕಳಿಗೆ ಅವನನ್ನು ಕಾಯುವುದು ಬೇಕಾಗಿಲ್ಲ, ಅವನು 'ಸಿಕ್ಕೂ ಸಿಗದ ಸಿತಗನಂತಿರುವ'ನೆಂದು ಅವಳು ಉಗ್ರಳಾಗುತ್ತಾಳೆ ಕೂಡುವುದಿಲ್ಲವೇಕೆಂದು ಬಾಯಾರುತ್ತಾಳೆ.

'ಭರದ ಜವ್ವನದ ಒಡಲು ವೃಥಾ ಹೋಯಿತ್ತಲ್ಲಾ'*

'ಎನ್ನನೆಂದಿಗೆ ಒಳಕೊಂಡಿ ಚೆನ್ನಮಲ್ಲಿಕಾರ್ಜುನಾ' ಎಂದು ಪರಿಪರಿಯಾಗಿ ಬೇಡುವ ಅಕ್ಕ ತುಂಬಿ ಪರಿಮಳವನೆ ಕೊಂಬೆ ಲಂಬಿಸುವ ತೆರನಂತೆ' ಎಂದು ಅವನ ವಿರಹದುರಿ ತಾಳಲಾರದೆ ದೇಹವನ್ನು ಅವನ ಮುಂದೆ ಈಡಾಡುತ್ತಾಳೆ. 'ನಾನು' ಎಂಬ ಮದ ಹೊರಭಾವ ಕ್ಕಿಂತಲೂ ದೇಹಕ್ಕೆ ಅಂಟಿಕೊಂಡಿರುವುದೇ ಹೆಚ್ಚು. ಅದರಲ್ಲೂ ಸೊಕ್ಕಿದ ಯೌವ್ವನದ ದೇಹ ಇನ್ನಷ್ಟು ಅಹಂಕಾರಿ. ಅದು ಅಳಿಯದೆ ಅವನ ಬರುವಿಕೆ ಸಾಧ್ಯವಿಲ್ಲ. ಆದ್ದರಿಂದ ಮುದಿತನಕ್ಕೆ ಸಂನ್ಯಾಸ ಎನ್ನುವುದು ಮೂರ್ಖತನ. ದೇವನಿಗೆ ಮಾರಿದ ಮಾಧುರ್ಯದ ಹಣ್ಣನ್ನು ಸಮರ್ಪಿಸಬೇಕೇ ವಿನಾ ಕೊಳೆತ ಹಣ್ಣನ್ನಲ್ಲ ಅಂಥ ಮದ ತುಂಬಿದ ದೇಹ ಕಡೆಗೊಮ್ಮೆ ಕೂಡುವ ಸ್ಥಿತಿ ಬಂದಾಗ ಅಲ್ಲಿ ಎಲ್ಲವನ್ನು ಕಳೆದುಕೊಂಡು ಬಯಲಾದ ಸುಖ ವಿರುತ್ತದೆ.

ಸಜ್ಜೆ ಉಪ್ಪರಿಸಿ ಶಿವಲಿಂಗ ಕರಸ್ಥಲಕ್ಕೆ ಬರೆ
ಪ್ರಜ್ವಲಿಸಿ ತೊಳತೊಳಗಿ ಬೆಳಗುತ್ತಿಹ ಕಾಂತಿಯಲ್ಲಿ ಒಜ್ಜರಿಸಿ
ತನುಮನ ದೃಷ್ಟಿ ನಟ್ಟು ಲಿಂಗದಲ್ಲಿ ಒಜ್ಜರಿಸುವ
ಶಿವಸುಖದೊಳೋಲಾಡುತ್ತ ಸಜ್ಜನ ಸದ್ಭಕ್ತಿರತಿಯೊಡನೆ ಕೂಡಾಡಿ
ಲಜ್ಜೆಗೆಟ್ಟು ನಿಮ್ಮ ನೆರೆವೆ ಚನ್ನಲ್ಲಿಕಾರ್ಜುನಾ!

ಎಂಬ ನಿರ್ಭೀತ ಸ್ವಾತಂತ್ರ್ಯ ಮತ್ತು ಪ್ರೇಮಮಯಿಯಾಗಿ ಬಿಡುತ್ತಾಳೆ. ಇದು ನಾನು ಎಂಬುದನ್ನು ಅರ್ಪಿಸಿಕೊಳ್ಳುವ ಕೊನೆಯ ಹಂತ. ಮುಂದೆ ಅನುಭಾವಿಗಳ ಬದುಕು ಬಯಲಾ ಗುತ್ತದೆ. ಅದಕ್ಕೆ ಅಂತ್ಯ ದೊರೆಯದೆ ಕದಳೀವನ ಪ್ರವೇಶಿಸಿದಳು, ನೀರಿನಲ್ಲಿ ಮುಳುಗಿದಳು ಹೀಗೆ ಈ ಲೋಕದ ಅರ್ಥ ಹಚ್ಚುತ್ತೇವೆ. ಎಲ್ಲ ಮುಗಿದ ಬಳಿಕ ಆಡುವುದಕ್ಕೆ ಏನೂ ಇರುವುದಿಲ್ಲ.

ಕೊನೆಯದಾಗಿ ಒಂದು ಸತ್ಯವನ್ನು ಹೇಳಿ ಮುಗಿಸುತ್ತೇನೆ.
ಸಾಹಿತ್ಯ ಎನ್ನುವುದು ಬರಹಗಾರರ ಅಹಂಕಾರಕ್ಕೆ ಹುಟ್ಟಿದ ಶಿಶು.

ಆದರೆ ವಚನ, ಕೀರ್ತನೆಗಳನ್ನು ಸಾಹಿತ್ಯವೆಂಬ ಪಟ್ಟಿಯಲ್ಲಿರಿಸಿ ಅದರ ಶಬ್ದಾರ್ಥ ಶರೀರಗಳನ್ನು ಹಿಗ್ಗಾಮುಗ್ಗ ಎಳೆದು ಕುಲಗೆಡಿಸಿದ್ದೇವೆ. ವಾಸ್ತವಿಕ ವಚನವಾಗಲಿ, ಕೀರ್ತನೆ ಯಾಗಲಿ, ಅವರ ಪಾಡು.

ಅದು ದೇವರೊಂದಿಗೆ ಸಮಾನ ಹೃದಯವುಳ್ಳ ಭಕ್ತರೊಂದಿಗೆ ಕೂಗಿಕೊಂಡು ಅತ್ತು ಕರೆದ ದೇವ ಪ್ರಲಾಪಗಳು.

ಅದನ್ನು ಸಾಹಿತ್ಯವೆಂದವರಿಗೆ ಏಕಾಂತ ಗೊತ್ತಿಲ್ಲ. ಕಿವಿ ತೆರೆದು ಆಲಿಸುವ ಗುಣ ಹುಟ್ಟಿಲ್ಲ. ನಾವು ಈ ಅಪಾಯದಿಂದ ಮುಕ್ತರಾಗಬೇಕಾಗಿದೆ.

ಆದ್ದರಿಂದ -

ವಚನ ಸಾಹಿತ್ಯವಲ್ಲ, ಶರಣರು ಬರೀ ಮನುಷ್ಯರಲ್ಲ.
ಅಕ್ಕಮಹಾದೇವಿ ಕೇವಲ ಹೆಣ್ಣಲ್ಲ

ಇಲ್ಲಿರುವ ಲೋಕವೇ ಲೋಕವಲ್ಲ
ಹೊರಗೆ ಕಾಣಿಸುವ ದೇಹವೇ ಲಿಂಗವಲ್ಲ
ನಮಗಿರುವುದು ಎರಡೇ ಕಣ್ಣಲ್ಲ
ನಮ್ಮ ಎರಡು ಕಣ್ಣಿಗೆ ಕಂಡದ್ದೇ ಸತ್ಯವಲ್ಲ.

ಕಾಣಲಿಲ್ಲದ್ದು ಇಲ್ಲ ಎನ್ನುವುದಕ್ಕಿಂತಲೂ ನಾವಿನ್ನೂ ಕುರುಡರೆಂದ ಒಪ್ಪಿಕೊಳ್ಳುವುದು ಹೆಚ್ಚು ಒಳ್ಳೆಯದು.

# ಕರ್ನಾಟಕದಲ್ಲಿ ಲಿಂಗಸಂಬಂಧಗಳು ಮತ್ತು ಸಮುದಾಯ ಸಂಘಟನೆಯ ವಸಾಹತುಶಾಹಿ ಜನಗಣತಿ ಪಾತ್ರ

ಡೊಮಿನಿಕ್

ವಸಾಹತುಶಾಹಿ ಆಧುನಿಕತೆ ನಮ್ಮಲ್ಲಿ ತಂದಿರುವ ತೀವ್ರವಾದ ಬದಲಾವಣೆ ಎಂಥದ್ದು ಎನ್ನುವುದಕ್ಕೆ ಈ ಕೆಳಗಿನ ಎರಡು ರೂಪಕಗಳನ್ನು ಪಾರಿಭಾಷಿಕ ಪರಿಕಲ್ಪನೆಗಳನ್ನಾಗಿ ಬಳಸಲು ಪ್ರಸ್ತುತ ಲೇಖನದಲ್ಲಿ ಪ್ರಯತ್ನಿಸುತ್ತಿದ್ದೇನೆ :

೧. ಸೀಮೆ ಹಸು, ಮತ್ತು

೨. ಸೀಮೆ ಎಣ್ಣೆ

ಈ ಎರಡು ಪರಿಭಾಷೆಗಳು ನಮ್ಮ ಜನಮಾನಸದಲ್ಲಿ ಇಂದು ಎಷ್ಟು ಸಾಮಾನ್ಯವಾದ ಪದಗಳಾಗಿಬಿಟ್ಟಿವೆ ಎಂದರೆ ಅವುಗಳು ನಮ್ಮ ದೈನಂದಿನ ಬದುಕಿನ ಅವಿಭಾಜ್ಯ ಅಂಗಗಳೇ ಆಗಿಬಿಟ್ಟಿವೆ ಎಂದು ಕಾಣುತ್ತದೆ. ಒಂದೆಡೆ ಈ ಎರಡು ಪರಿಭಾಷೆಗಳು ವಸಾಹತುಶಾಹಿ ಆಧುನಿಕತೆಯ ಸಕಾರಾತ್ಮಕ ಪರಿಣಾಮಗಳಿಗೆ ಸಾಕ್ಷಿಯಾಗಿವೆ ಎಂದರೆ ತಪ್ಪಾಗಲಾರದು. ಆದರೆ ಈ ವಸಾಹತುಶಾಹಿ ಆಧುನಿಕತೆಯ ನಕಾರಾತ್ಮಕ ಪರಿಣಾಮಕ್ಕೆ ಮತ್ತೊಂದು ಬಗೆಯ ಪರಿಭಾಷೆಯೂ ಸಹ ನಮ್ಮಲ್ಲಿ ಪ್ರಚಾರದಲ್ಲಿದೆ. ಅದೆಂದರೆ "ಪರಂಗಿ" ಎನ್ನೋ ಪದ. ಈ ಪದ ಪುನಃ "ಫಾರಿನ್" ಎನ್ನೋ ಆಂಗ್ಲ ಪದದ ತದ್ಭವ ರೂಪವಾದರೂ ಅದಕ್ಕೆ ಅಣಕ ಮತ್ತು ಅಪಹಾಸ್ಯ ಎನ್ನೋ ಅರ್ಥಗಳೂ ಇವೆ. ಆದ್ದರಿಂದ ವರ್ತಮಾನದ ಒಳಸುಳಿಗಳು ವಸಾಹತುಶಾಹಿ ಆಧುನಿಕತೆಯಲ್ಲೇ ಅಡಗಿದೆ ಎಂದರೆ ತಪ್ಪಾಗಲಾರದು.

"ಕರ್ನಾಟಕದಲ್ಲಿ ಲಿಂಗಸಂಬಂಧಗಳು ಮತ್ತು ಸಮುದಾಯ ಸಂಘಟನೆಯಲ್ಲಿ ವಸಾಹತುಶಾಹಿ ಜನಗಣತಿಯ ಪಾತ್ರ" ಎನ್ನುವುದು ಈ ಪ್ರಬಂಧದ ವಿಷಯ. ಅದಕ್ಕೂ ಮತ್ತು ಮೇಲಿನ ಪರಿಭಾಷೆಗಳಿಗೂ ಏನಾದರೂ ಸಂಬಂಧವಿದೆಯೇ ಎನ್ನುವಾಗ ಖಂಡಿತವಾಗಿಯೂ ಇದೆ. ಆ ಕಾರಣಕ್ಕಾಗಿಯೇ ಮೇಲಿನ ಮೂರು ಪರಿಭಾಷೆಗಳನ್ನು ಇಲ್ಲಿ ಉದಾಹರಿಸುವ ಮೂಲಕ ವಸಾಹತುಶಾಹಿ ಆಧುನಿಕತೆಗೆ ಕರ್ನಾಟಕದಲ್ಲಿ ಎಂಥ ಪ್ರತಿಕ್ರಿಯೆ ದೊರಕಿತು ಎನ್ನುವುದನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಹಾಗೆ ವಿಶ್ಲೇಷಿಸುವಾಗ "ವಸಾಹತುಶಾಹಿ ಆಧುನಿಕತೆ" ಎನ್ನುವುದನ್ನು ಒಂದು ಪಠ್ಯ ಎಂದು ಈ ಪ್ರಬಂಧದಲ್ಲಿ

ಬೆಳೆಸಲು ಪ್ರಯತ್ನಿಸಲಾಗಿದೆ. ಆದರೆ ಇಲ್ಲಿ ಪಠ್ಯ ಎನ್ನುವುದನ್ನು ಒಬ್ಬ ಲೇಖಕ/ಲೇಖಕಿಯ ಕಾಪಿ ರೈಟ್ ಎನ್ನದೆ ರೊನಾಲ್ಡ್ ಬಾರ್ತೆಸ್ ಹೇಳುವ ಪರಿಕಲ್ಪನೆಯಲ್ಲಿ ಎನ್ನುವುದನ್ನು ಗಮನಿಸಬೇಕಾಗುತ್ತದೆ. "ವ್ಯಕ್ತಿಗೆ ಹೇಗೆ ನೂರಾರು ಸಂದರ್ಭ-ಸನ್ನಿವೇಶಗಳ ಸಾಂಸ್ಕೃತಿಕ ಉತ್ಪಾದನೆಯೋ ಹಾಗೆಯೇ, "ಒಂದು ಪಠ್ಯವೆನ್ನುವುದು ಅನೇಕ ಸಾಂಸ್ಕೃತಿಕ ಕೇಂದ್ರಗಳಿಂದ ಹೆಕ್ಕಿಕೊಂಡ ಉಲ್ಲೇಖಗಳ ಕೋಶವಷ್ಟೆ."[೨] ಆದ್ದರಿಂದ ಸಾಮಾಜಿಕ ಅಧಿಕಾರ ಸಂಬಂಧಗಳಲ್ಲಿನ ಸೂಕ್ಷ್ಮತೆಯನ್ನು ಒಳಗೊಂಡಂತೆ, ಪಠ್ಯವೆನ್ನುವುದು ಸಣ್ಣ ಸಣ್ಣ ಕಥನ ಸಂಕಥನಗಳನ್ನು ಒಳಗೊಂಡಿರುತ್ತದೆ." ಅಂದರೆ ಬಾರ್ತೆಸ್‌ನ ಪ್ರಕಾರ, ಪಠ್ಯಕ್ಕೆ ಒಂದು ವ್ಯಕ್ತಿತ್ವವನ್ನು ಅನ್ವಯಿಸುವುದೆಂದರೆ ಪಠ್ಯದ ಮೇಲೆ ಮಿತಿಯನ್ನು ಹೇರಿದಂತೆ ಹಾಗೂ ಅದಕ್ಕೊಂದು ಅಂತಿಮ ಸೂಚಿತವೊಂದನ್ನು ಸಂಘಟಿಸುವುದಾಗುತ್ತದೆ. ಆದರೆ, ಯಾವುದೇ ಸಂಕಥನವು ಬಹುರೂಪಿ ವಾಸ್ತವಗಳನ್ನು ಅನಾವರಣಗೊಳಿಸಬೇಕಲ್ಲದೆ, ಏನನ್ನೋ ಶೋಧಿಸುವುದು ಎಂದಲ್ಲ. ಆದ್ದರಿಂದ ಸಂಕಥನವು ಅವಿರತವಾಗಿ ಇರುವುದೆಂದರೆ, ಅರ್ಥಗಳನ್ನು ನಿರಂತರವಾಗಿ ಹೊರಡಿಸುವುದು ಮತ್ತು ಪಠ್ಯಕ್ಕೆ ಅಂತಿಮ 'ರಹಸ್ಯ'ವೊಂದನ್ನು ನಿರಾಕರಿಸುವುದೇ ಆಗುತ್ತದೆ. ಈ ಕ್ರಿಯೆ ಕ್ರಾಂತಿಕಾರಕವಾಗಿ ಅರ್ಥವೊಂದನ್ನು ನಿಗದಿಪಡಿಸಿದೆ. ಪಠ್ಯಕ್ಕೆ ದೈವ ಮತ್ತು ಬ್ರಹ್ಮ ಲಿಖಿತವಾದ-ತರ್ಕ, ವಿಜ್ಞಾನ, ನಿಯಮವನ್ನು ತಿರಸ್ಕರಿಸುತ್ತದೆ. ಅಂದರೆ ಪಠ್ಯವೊಂದು ಬಹುರೂಪಿ ಸಂಕಥನಗಳ ಮೊತ್ತವಾಗಿರುತ್ತದೆ. ಅವನ್ನು ಅನೇಕ ಸಂಸ್ಕೃತಿಗಳಿಂದ ಸ್ವೀಕರಿಸಲಾಗಿರುತ್ತದೆ ಮತ್ತು ಇಂಥದ್ದನ್ನು ಸಮಾನ ನೆಲೆಯ ಸಂವಾದ, ವ್ಯಂಗ್ಯ, ವಾದಗಳಿಂದ ವಿಶ್ಲೇಷಣೆಗೆ ಒಡ್ಡಬಹುದಾಗಿರುತ್ತದೆ. ಇದಕ್ಕೆ ಪೂರಕವಾಗಿ ಬೌದ್ಧರ ಜ್ಞಾನಮೀಮಾಂಸೆಯನ್ನು ಇಲ್ಲಿ ಗಮನಿಸುವುದು ಸೂಕ್ತವಾದುದು. ಅವರ ಪ್ರಕಾರ, "ಪ್ರತಿಯೊಂದು ಸಂಗತಿಯೂ ಸಹ ಬದಲಾಗುತ್ತಿರುತ್ತದೆ ಮತ್ತು ಅನಿತ್ಯವಾಗಿರುತ್ತದೆ. ಶಾಶ್ವತವಾದುದು ಏನೂ ಇಲ್ಲ. ಹುಟ್ಟು-ಬೆಳವಣಿಗೆ-ಸಾವು ಅಸ್ತಿತ್ವದ ಮೂಲ ಲಕ್ಷಣಗಳು. ಎಲ್ಲಿ ಆರಂಭ ಇದೆಯೋ ಅಲ್ಲಿ ಅಂತ್ಯವೂ ಇರುತ್ತದೆ. ಉದಯದೊಡನೆ ಮರೆಯಾಗುವಿಕೆಯೂ ಸೇರಿರುತ್ತದೆ." ಈ ಅವಲೋಕಿತ ಸಂಗತಿಗಳನ್ನಿಟ್ಟುಕೊಂಡು ಬುದ್ಧ **"ಬದಲಾವಣೆ"** ಮತ್ತು **"ಅನಿತ್ಯ"** ಪರಿಕಲ್ಪನೆಗಳನ್ನು ವಿವರಿಸುತ್ತಾನೆ. ಆದ್ದರಿಂದ ಯಾವುದೇ ಪಠ್ಯ ಎನ್ನುವುದೂ ಸಹ ಸ್ವಯಂ-ಅಸ್ತಿತ್ವ ಎನ್ನುವುದನ್ನು ಹೊಂದಿರುವುದಿಲ್ಲ. ಅದು ಅನೇಕ ಸಂಗತಿಗಳ-ಸಂಬಂಧಗಳ ಹೆಣೆಗೆಯಿಂದ ಮಾತ್ರ ಸಾಧ್ಯವಾಗುವುದು.[೩] ಇವತ್ತಿನ ಆಧುನಿಕೋತ್ತರ ಚಿಂತನೆಗಳೂ ಸಹ ಇದೇ ತೆರನ ವಿಷಯಗಳನ್ನು ಅಚ್ಚರಿಯೆಂಬಂತೆ ಪ್ರತಿಪಾದಿಸುತ್ತಿವೆ. ಆದ್ದರಿಂದ "ವಸಾಹತುಶಾಹಿ ಆಧುನಿಕತೆ" ಎನ್ನುವುದೊಂದು ಪಠ್ಯ ಆಗಬೇಕಾದರೆ ಮೇಲಿನ ಜ್ಞಾನ ಮೀಮಾಂಸೆಯೊಳಗೆ ಗ್ರಹಿಸಬೇಕಾಗುತ್ತದೆ. ಈ ನಿರೂಪಣಾ ವಿಧಾನದಲ್ಲಿ ಪ್ರಸ್ತುತ ಪ್ರಬಂಧದ ಮೊದಲಲ್ಲಿ ಅದರ ಜ್ಞಾನ ಮೀಮಾಂಸಾ ನೆಲೆಗಳನ್ನು ಚರ್ಚಿಸಿದರೆ, ಅದರ ಎರಡನೇ ಭಾಗ ಕರ್ನಾಟಕದಲ್ಲಿ ಲಿಂಗಸಂಬಂಧಗಳು ಮತ್ತು ಸಮುದಾಯವನ್ನು ವಸಾಹತುಶಾಹಿ, ಜನಗಣತಿ ಹೇಗೆ ಸಂಕಥಿಸಿದೆ ಎಂಬುದನ್ನು ಚರ್ಚಿಸಲಾಗುವುದು.

ವಸಾಹತುಶಾಹಿ ಆಧುನಿಕತೆಯೆಂದರೆ ಅದೊಂದು ಸಂಕಥನ. ಅದೊಂದು ನಿರ್ದಿಷ್ಟ ಬಗೆಯ ಅಭಿವೃದ್ಧಿ ಕಥನ, ನಿರ್ದಿಷ್ಟ ಬಗೆಯ ವಿಜ್ಞಾನ-ತಂತ್ರಜ್ಞಾನ ಹಾಗೂ ನಿರ್ದಿಷ್ಟ ಬಗೆಯ ಜೀವನ ಕ್ರಮವಾಗಿದೆ. ಈ ಪ್ರಕ್ರಿಯೆ ಮಾನ್ಯಗೊಳ್ಳುವುದು ಇನ್ನೊಂದು ಭಾಷೆಯನ್ನು 'ಅನ್ಯ' ಎಂದು ವ್ಯಾಖ್ಯಾನಿಸುವಾಗ. ಆದ್ದರಿಂದಲೇ ಈ ವಸಾಹತುಶಾಹಿ ಭಾಷೆ ವ್ಯಕ್ತಿ ನೆಲೆಯದಾಗಿದ್ದರೂ, 'ಸಾಮುದಾಯಿಕ ಐಡೆಂಟಿಟಿ'ಯ ಭಾಷೆಯಾಗಿ ಪ್ರತಿನಿಧೀಕರಣಗೊಳ್ಳುತ್ತದೆ. ಆದ್ದರಿಂದ ಮೈಸೂರು ಸೀಮೆಯಲ್ಲಿ ವಸಾಹತುಶಾಹಿ ಆಧುನಿಕತೆ ಜಾರಿಯಾಗಲು ಪ್ರಪ್ರಥಮವಾಗಿ ಒಂದು ಅಖಂಡವಾದ ಕನ್ನಡ ಭಾಷೆಯನ್ನು ಮೈಸೂರಿನ ಭಾಷೆಯನ್ನಾಗಿ ಸಂಘಟಿಸಲಾಗುತ್ತದೆ. ಅರ್ನೆಸ್ಟ್ ಗೆಲ್ನೆರ್, ತನ್ನ ಕೃತಿ 'ನೇಷನ್ಸ್ ಆ್ಯಂಡ್ ನ್ಯಾಷನಲಿಸಂ'ನಲ್ಲಿ ನಾಡ/ರಾಷ್ಟ್ರ ಭಾಷೆಯೆನ್ನುವುದು ಸಾಂಸ್ಥಿಕ ಪರಿಣಾಮವಾಗಿ ಪ್ರೈಮರಿ ಶಾಲಾ ಶಿಕ್ಷಣದಲ್ಲಿ ಸಂಘಟಿತವಾಗುತ್ತದೆ ಮತ್ತು ಇದೊಂದು ಪ್ರಭುತ್ವದ ಬಹು ಮುಖ್ಯ ಕ್ರಿಯೆಯಾಗುತ್ತದೆ ಎನ್ನುತ್ತಾನೆ. ಹಾಗೆಯೇ ಬೆನೆಡಿಕ್ಟ್ ಆ್ಯಂಡರ್‌ಸನ್ ತನ್ನ ಇಮಾಜಿನ್ಡ್ ಕಮ್ಯುನಿಟೀಸ್‌ನಲ್ಲಿ 'ಪ್ರಿಂಟ್ ಕ್ಯಾಪಿಟಲಿಸಂ' ಮತ್ತು ನಾವೆಲ್(ಕಾದಂಬರಿ)ನ ಉದಯ ಒಂದು ನಾಡ/ರಾಷ್ಟ್ರ-ಭಾಷೆಗೆ ಕಾರಣವಾಗುತ್ತದೆ ಎನ್ನುತ್ತಾನೆ. ಇಲ್ಲಿ ಸಾಕ್ಷರತೆ ಎನ್ನುವುದು ಬಹಳ ಮುಖ್ಯವಾಗಿ ಕ್ರಿಯಾಶೀಲವಾಗಿರುತ್ತದೆ. ಮುದ್ರಿತ ಭಾಷೆ, ಪಠ್ಯ ಮತ್ತು ವರ್ತನಾ ಸಂದರ್ಭದಲ್ಲಿ ಒಂದು ಸಾಂಸ್ಕೃತಿಕ ರಾಜಕಾರಣ ಇರುತ್ತದೆ. ಅದು ಬಹುವಿಧವಾಗಿ ವ್ಯಕ್ತಿ ಮತ್ತು ಸಮುದಾಯದ ಐಡೆಂಟಿಟಿ ಪಾಲಿಟಿಕ್ಸ್ ಆಗಿ ಹೊರಹೊಮ್ಮುತ್ತದೆ. ಇದಕ್ಕೆ ಎರಡು ಆಯಾಮಗಳಿವೆ: ಒಂದು, ಸಾಂಸ್ಥಿಕ ಸ್ವರೂಪದ್ದು: ಅಂದರೆ ವಸಾಹತುಶಾಹಿ ಪ್ರಭುತ್ವ ತನ್ನದೇ ಆದ ಸಂಸ್ಥೆಗಳನ್ನು ಹೊಂದಿದ್ದು, ಆ ಮೂಲಕ 'ನೇಟಿವ್'ವನ್ನು ನಿಯಂತ್ರಿಸಿ ಸಂಘಟಿಸುತ್ತದೆ. ಅಂಥ ಸಂಸ್ಥೆಗಳೆಂದರೆ ಕಾನೂನು, ಶಾಲಾ-ಕಾಲೇಜು ಮತ್ತು ಎಲ್ಲಕ್ಕಿಂತಲೂ ಮಿಗಿಲಾಗಿ ಆಡಳಿತಾತ್ಮಕ ವ್ಯವಸ್ಥೆಗಳನ್ನು ಹೆಸರಿಸಬಹುದು. ಎರಡನೆಯದ್ದು, ಎಲ್ಲವನ್ನು ಸಮರ್ಥಿಸುವಂತಹ ಸಂಕಥನ ಕ್ರಮಗಳು. ಈ ಪ್ರಕ್ರಿಯೆ 'ಎನ್ಲೈಟನ್ಮೆಂಟ್' ಐಡಿಯಾಲಜಿಗೆ ಸಂಬಂಧಿಸಿದ್ದಾಗಿ ಎಲ್ಲವನ್ನು ಏಕೀಕರಿಸುತ್ತಿರುತ್ತದೆ. ಮೊದಲು ಅದು ವಸ್ತುನಿಷ್ಠತೆಯ ಭ್ರಮೆಯನ್ನು ಸಂಘಟಿಸಿ, ಕಾಣುವ ವಿದ್ಯಮಾನದ ಸ್ವಯಂ-ದ್ರವ್ಯವನ್ನು ಮುಂದಿಡುವ ಮೂಲಕ ಅಧಿಕಾರ-ಸಂಬಂಧಗಳನ್ನು ಮರೆಮಾಚುತ್ತದೆ. ಹಾಗೆ ಮಾಡುವುದರ ಮೂಲಕ ಈ ವಸಾಹತುಶಾಹಿ ಸತ್ಯವನ್ನು ಪ್ರಮಾಣವನ್ನಾಗಿ ಸ್ಥಿರೀಕರಿಸುತ್ತದೆ ಮತ್ತು ಅದನ್ನು ಸಾಂಸ್ಕೃತಿಕ ಚಲನಶೀಲತೆಯಿಂದ ಹೊರಗಿರಿಸುತ್ತದೆ. ಹೀಗೆ ಮೈಸೂರಿನ ಚರಿತ್ರೆ ಎಂಬ ಸಾಮಾಜಿಕ ಪಠ್ಯವೊಂದು ತಯಾರಾಗುತ್ತದೆ. ಇದಕ್ಕೆ ಅಡಿಪಾಯ ಹಾಕಿದ್ದು ವಸಾಹತುಶಾಹಿ ಜನಗಣತಿ ಎಂದರೆ ಅಚ್ಚರಿಯಾದೀತು.

ಇಂಥ 'ಸಾಮಾಜಿಕ ಪಠ್ಯ' ನಿರ್ಮಾಣವಾಗುವುದೇ ವಸಾಹತುಶಾಹಿ ಬಳಸಿದ 'ಇಂಗ್ಲೀಷ್' ಭಾಷೆ ಮತ್ತು ಅದರ ಮೂಲಕ ಸಂಘಟಿತವಾದ 'ವರ್ನಾಕ್ಯುಲರ್' ಅಥವಾ ದೇಶಿಭಾಷೆಯಿಂದ. ಈ ದೇಶಿ ಭಾಷೆಯನ್ನು ಆರ್ಯ-ದ್ರಾವಿಡ ಎಂದು ರಾಷ್ಟ್ರ ವ್ಯಾಪ್ತಿಯಲ್ಲಿ ಗುರುತಿಸಿದರೆ, ಪ್ರಾದೇಶಿಕ ಮಟ್ಟದಲ್ಲಿ ಕನ್ನಡ, ತೆಲುಗು, ತಮಿಳು, ಮಲೆಯಾಳಂ, ಮರಾಠಿ...

ಇತ್ಯಾದಿಯಾಗಿ ಗುರುತಿಸಲಾಗುತ್ತದೆ. ಹಾಗೆಯೇ ಅವುಗಳನ್ನು ವರ್ಗೀಕರಿಸಿ ಕಾಲ-ದೇಶಗಳ ನೆಲೆಯಲ್ಲಿ ಸಾಮುದಾಯಿಕ ಐಡೆಂಟಿಟಿಯನ್ನಾಗಿ ಸಂಘಟಿಸಲಾಗುತ್ತದೆ. ಈ ಅಂಶದ ತರ್ಕವನ್ನು ಅರಿಯಬೇಕಾದರೆ ಬರ್ನಾಡ್ ಎಸ್ ಕ್ಹೊನ್‌ರವರ "The command of language and the language of command"[೪] ಲೇಖನವನ್ನು ಗಮನಿಸಬೇಕಾಗುತ್ತದೆ. ಆತನ ಪ್ರಕಾರ ಇಂಗ್ಲೀಷ್‌ನ ಮೂಲಕ ವರ್ನಾಕ್ಯುಲರನ್ನು ಸಂಘಟಿಸುವ ಪ್ರಕ್ರಿಯೆಯಲ್ಲಿ ಕಾಣುವ ಅಂಶವೆಂದರೆ ಯೂರೋಪಿಯನ್ನರು ದಾಖಲಿಸಿ, ಮುದ್ರಣದ ಮೂಲಕ ಚಲಾವಣೆಗೆ ತರುವಾಗಿನ ಶ್ರಮಕ್ಕಿಂತ ಇಲ್ಲಿನ ಸಂಕೀರ್ಣವಾದ ಜ್ಞಾನ ಪರಂಪರೆಗಳನ್ನು ಹೆಕ್ಕಿ ಕೊಟ್ಟ ಇಲ್ಲಿನವರ ಶ್ರಮ ಮಹತ್ವದ್ದು. ಅಂದರೆ ವರ್ನಾಕ್ಯುಲರನ್ನು ಸಂಘಟಿಸುವುದೆಂದರೆ ಅಂತಿಮವಾಗಿ ಇಲ್ಲಿನ ನಾಡು-ನುಡಿಯ ಜ್ಞಾನ ಪರಂಪರೆಗಳನ್ನು ಆಕ್ರಮಿಸಿಕೊಳ್ಳುವುದು ಎಂದರ್ಥ. ಇಲ್ಲಿಯೂ ಸಹ ಸೂಕ್ಷ್ಮವಾಗಿ ಗಮನಿಸತಕ್ಕದೆಂದರೆ ಎಂಥ 'ಜ್ಞಾನ' ಮುಖ್ಯ ಎನ್ನುವಾಗ ವಸಾಹತುಶಾಹಿ ಪ್ರಭುಗಳ ಹಿತಾಸಕ್ತಿಗೆ ಯಾವುದು ಪ್ರಯೋಜನಕಾರಿ ಎನ್ನುವುದು ಮುಖ್ಯವಾಗುತ್ತದೆ. ೧೭-೧೮ನೇ ಶತಮಾನದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ದಾಖಲೆಗಳನ್ನು ಗಮನಿಸಿದಲ್ಲಿ ಬ್ರಿಟಿಷರಿಗೆ ಮುಖ್ಯರಾದವರು ಮತ್ತು ಪ್ರಯೋಜನಕಾರಿಯಾಗಿದ್ದವರು ಯಾರೆಂದರೆ-ದ್ವಿಭಾಷಿಗಳು ಅಥವಾ ಅನುವಾದಕರು. ಅವರನ್ನು ಹೆಸರಿಸುವುದಾದರೆ, "ಅಖುಂದ್, ಬನ್ಯನ್, ದಳ್ಳಾಲ್, ಗೋಮಸ್ತ, ಮುನ್ಶಿ, ಪಂಡಿತ, ಶರೀಫ ಮತ್ತು ವಕೀಲ"[೫] ಈ ಹೆಸರುಗಳು ಪ್ರಾದೇಶಿಕವಾಗಿ ವ್ಯತ್ಯಾಸವನ್ನು ಹೊಂದಿದ್ದವಾದರೂ, ಅವರೆಲ್ಲಾ ದ್ವಿಭಾಷಿಗಳಾಗಿದ್ದು, ತಮ್ಮ ತಮ್ಮ ಕ್ಷೇತ್ರಗಳಲ್ಲಿ ನುರಿತ ಜ್ಞಾನವನ್ನು ಹೊಂದಿದ್ದರು. ಇಂಥ ಸ್ಥಳೀಯ ಪಂಡಿತರನ್ನು ಬಳಸಿಕೊಂಡು ಬ್ರಿಟಿಷ್ ಆಡಳಿತಕ್ಕೆ ಅಗತ್ಯವಾದ ಜ್ಞಾನವನ್ನು ತಯಾರಿಸಿದ್ದು.

ತಮ್ಮ ವಾಣಿಜ್ಯ ವ್ಯವಹಾರಗಳಿಗೆ ಸಂಬಂಧಿಸಿದಂತೆ ಮೊದಲಿಂದಲೂ ಬ್ರಿಟಿಷರು ಇಲ್ಲಿನ ಪ್ರಭುಗಳಿಂದ ಅದರಲ್ಲೂ ಮೊಗಲ್ ಚಕ್ರವರ್ತಿಯಿಂದ ಮಾನ್ಯತೆ ಮತ್ತು ರಕ್ಷಣೆಯನ್ನು ಬೇಡಿದ್ದರು. ಇದಕ್ಕಾಗಿ ೧೬೧೫ರಲ್ಲಿ ಸರ್ ತೋಮಸ್ ರೋ ಮೊಗಲ್ ದರ್ಬಾರಿಗೆ ಬಂದಿದ್ದ. ಆ ಸಂದರ್ಭದಲ್ಲಿ ಆತನಿಗೆ ಪರ್ಶಿಯನ್ ಭಾಷೆ ಗೊತ್ತಿರದೆ ಪಜೀತಿಗೊಳಗಾಗುತ್ತಾನೆ. ಹೀಗೆ ಬ್ರಿಟಿಷರು ಪರ್ಶಿಯನ್ ಭಾಷೆಯನ್ನು ಕಲಿಯುವ ಅನಿವಾರ್ಯತೆಗೆ ಒಳಗಾಗುತ್ತಾರೆ. ಆದರೆ ಈ ಭಾಷಾ ಜ್ಞಾನ ಮೀಮಾಂಸೆ ಇಂಗ್ಲೀಷ್ ಮೀಮಾಂಸೆಗಿಂತ ಬೇರೆಯೇ ಇತ್ತು.[೬] ೧೭ನೇ ಶತಮಾನದ ಯುರೋಪಿಯನ್ನರು ತಮ್ಮದೇ ಆದ ಸಂಕೇತ-ಸಂಬಂಧಗಳನ್ನು ಹೊಂದಿದ್ದರು. 'ಯೂರೋಪ್ ಮತ್ತು ಇಂಡಿಯಾದಲ್ಲಿ ಜನಸಮುದಾಯ ಮತ್ತು ದೇಶಗಳ ಹಾಗೂ ಆಳುವವ ಮತ್ತು ಆಳಿಸಿಕೊಳ್ಳುವವರ ನಡುವಿನ ಸಂಬಂಧಗಳು ಭಿನ್ನವಾಗಿ ಇರುತ್ತಿದ್ದವು. ೧೭ನೇ ಶತಮಾನದ ಬ್ರಿಟಿಷರು ಇಲ್ಲಿ ಎಲ್ಲಕ್ಕೂ ಮತ್ತು ಎಲ್ಲರಿಗೂ ಒಂದು ಖಚಿತ ಬೆಲೆ ಇತ್ತೆಂಬ ಆಲೋಚನೆಯಿಂದ ವರ್ತಿಸುತ್ತಿದ್ದರು. ಉಡುಗೊರೆಗಳ ಮೂಲಕ ಸಂಬಂಧಗಳು ಬೆಸೆಯುತ್ತಿದ್ದುದು ಬ್ರಿಟಿಷರಿಗೆ ಕೇವಲ ವಿನಿಮಯವಷ್ಟೆ, ಅವುಗಳನ್ನು ಕ್ರಯಕ್ಕೆ

ಒಳಪಟ್ಟಿದ್ದವು. ಅವನ್ನು ಒಂದು ತುಣುಕಾಗಿ ಪರಿವರ್ತಿಸಬಹುದಾಗಿತ್ತು. ಹಾಗಾಗಿ ಅವರ ವಾಣಿಜ್ಯ ವಸ್ತುವಾದ ಬಟ್ಟೆಯೂ ಪ್ರಾಯೋಜನಿಕವಾಗಿದ್ದು, ಅದರ ಮೌಲ್ಯ ಮಾರುಕಟ್ಟೆಯಲ್ಲಿ ನಿರ್ಧರಿತವಾಗಿತ್ತು.'[೭] ಆದರೆ ಮೊಗಲರ ಕಾಲದಲ್ಲಿ ಇಲ್ಲಿ ಅದೇ ಸಂಕೇತಗಳು ಬೇರೆಯದೇ ಆದ ಸಾಂಸ್ಕೃತಿಕ ಸತ್ಯವನ್ನು ಪ್ರತಿನಿಧಿಸುತ್ತಿದ್ದವು. 'ದೇಹ ಅಕ್ಷರಶಃ ಆತನ ಅಧಿಕಾರ, ಅದರ ದ್ರವ್ಯವನ್ನು ಯೂರೋಪಿನ ಪರಿಭಾಷೆಯಲ್ಲಿ ವಸ್ತುವಿಗೆ ರವಾನಿಸಬಹುದು. ಉಡುಪು, ಶಸ್ತ್ರ, ಆಭರಣ ಮತ್ತು ಕಾಗದಗಳ ಮೂಲಕ ಅರಸನೊಬ್ಬ ತನ್ನ ಅಧಿಕಾರ ದ್ರವ್ಯವನ್ನು ಆಯ್ದ ಸಹಪಾಠಿಗೆ ರವಾನಿಸುತ್ತಿದ್ದ. ಬಲಶಾಲಿ ವ್ಯಕ್ತಿಯೋರ್ವನ ದೃಷ್ಟಿಗೆ ಬೀಳುವುದು ಅಥವಾ ಆತನ ಗಮನದಲ್ಲಿರುವುದು, ತನ್ನೊಡೆಯನಿಂದ ಆಹಾರ ಸ್ವೀಕರಿಸುವುದು ಅಥವಾ ಆತನ ಉಕ್ತಿಯನ್ನು ಆಲಿಸುವುದೆಂದರೆ ಆತನಿಂದ ಪ್ರಭಾವಿತವಾಗುವುದು.'[೮] ಇದೇ ಅಂಶವು ಮಿಶನರಿ ಲಿಯೋನಾರ್ದೊ ಚಿನ್ನಾಮಿ ಮೈಸೂರು ಮಹಾರಾಜರಿಗೆ ಭೇಟಿಯಾದಾಗಲು ಮಾಡುವುದನ್ನು ಡಿ. ಫೆರೋಲಿ ಗುರುತಿಸುತ್ತಾರೆ. "ಸನ್ಯಾಸಿಯಂತೆ ಬಾಗಿದ ಫಾದರ್, ಕ್ರಿಶ್ಚಿಯನ್ನರ ಪವಿತ್ರ ಭಾಷೆಯೆಂದು ಕರೆಯಲಾಗುವ ಲ್ಯಾಟಿನ್ ಭಾಷೆಯಲ್ಲಿ, ರಾಜನ ಹೆಸರು ಹೇಳಿ, ಅನಂತರ ಕ್ಯಾನರೀಸ್ ಭಾಷೆಯಲ್ಲಿ ರಾಜನನ್ನು ಸಿಂಹದಂತೆ ಧೈರ್ಯಶಾಲಿ, ಬಲಶಾಲಿ ಎಂದು ಹೊಗಳಿದ. ತದನಂತರ ಖಡ್ಗ ಮತ್ತು ಇತರ ಸಣ್ಣ ಕಾಣಿಕೆಗಳನ್ನು ಕೊಡುತ್ತಾನೆ. ರಾಜ ಫಾದರ್‌ಗೆ ರೇಷ್ಮೆ ಬಟ್ಟೆ ಕೊಟ್ಟು, ತನ್ನ ಮಾತನ್ನು ಮುಂದುವರೆಸುವಂತೆ ಕೋರುತ್ತಾನೆ."[೯]

ಆದರೆ ಯುರೋಪಿಯನ್ನರಿಗೆ ಅರ್ಥವೆನ್ನುವುದ ಪದ, ನುಡಿಗಟ್ಟು ಮತ್ತು ವಸ್ತುವೊಂದಕ್ಕೆ ಅನ್ವಯಿಸಿರುವಂಥದ್ದು. ಆದ್ದರಿಂದ ಅದನ್ನು ನಿರ್ದಿಷ್ಟಗೊಳಿಸಬಹುದು ಮತ್ತು ಅನುವಾದಿಸಿಕೊಳ್ಳಬಹುದು. ಬಾಹ್ಯ ಜಗತ್ತಿನ ಯಾವುದಾದರೊಂದು ವಸ್ತುವನ್ನು ನೇರವಾಗಿ 'ಅರ್ಥ' ಸೂಚಿಸುತ್ತಿರುತ್ತದೆ. ಈ ಅಂಶವೇ ಮುಂದೆ ವಿಟ್ಗನ್ ಸ್ಟೈನ್.... ಮುಂತಾದವರ ಮೂಲಕ ಭಾಷಾ ವಿಜ್ಞಾನವಾಗಿ ಪ್ರತಿಪಾದಿತವಾಗುವುದು. ಅಂದರೆ ಭಾಷೆ ಯಾವುದೇ ಇರಲಿ ಅದನ್ನು ಎಂಪಿರಿಕಲಾಗಿ ಪರಿವರ್ತಿಸಬಹುದೆನ್ನುವ ಗ್ರಹಿತ ನಮಗೆ ದೊರೆತು ಕ್ರಿಯಾಶೀಲವಾಗುವುದು ವಸಾಹತುಶಾಹಿಯಿಂದಲೇ.

ಇದಲ್ಲದೆ, ವಸಾಹತುಶಾಹಿ ಪ್ರದೇಶಗಳಲ್ಲಿ ಬ್ರಿಟಿಷರಿಗೆ ಭಾಷಾ ಸಮಸ್ಯೆಯೊಡನೆ ಅವರ ಜೀವನ ಶೈಲಿಯೂ ಸಹ ತ್ರಾಸದಾಯಕವಾಗಿತ್ತು. ೧೭ನೇ ಶತಮಾನದ ಮಧ್ಯ ಭಾಗದಿಂದ ೧೮ನೇ ಶತಮಾನದ ಮಧ್ಯದವರೆಗೆ ಈಸ್ಟ್ ಇಂಡಿಯ ಕಂಪನಿಯ ನೇತಾರರು ಅತೀ ವಿರಳವಾಗಿದ್ದರು. '೧೬೬೫ರಲ್ಲಿ ಈಸ್ಟ್ ಇಂಡಿಯಾ ಕಂಪನಿಯಲ್ಲಿ ಕೇವಲ ೧೦೦ ಮಂದಿ ಅಧಿಕಾರಿಗಳಿದ್ದರು. ೧೭೪೦ರಲ್ಲಿ ಆ ಸಂಖ್ಯೆ ೧೭೦ ಇತ್ತು. ೧೭೫೭ರ ಪ್ಲಾಸೀ ಕದನದ ಸಂದರ್ಭದಲ್ಲಿ ಆ ಸಂಖ್ಯೆ ೨೨೪ ಆಯ್ತು. ಇವರಲ್ಲಿ ಬಹುಮಂದಿ ರೇವುಪಟ್ಟಣಗಳಲ್ಲಿ, ಅಂದರೆ ಸಾಮಾನ್ಯವಾಗಿ ಅವರ ಕಾರ್ಖಾನೆಗಳ ಆವರಣದಲ್ಲಿ ಜೀವಿಸುತ್ತಿದ್ದರು'. ಹೀಗಿರುವಾಗ ಪ್ಲಾಸೀ ಕದನದ ನಂತರ ಬಂಗಾಳ ಮತ್ತಿತರ ಕಡೆಗಳಿಂದ ರೆವಿನ್ಯೂ

ಬರಲಾರಂಭಿಸಿದ್ದಾಗಲಷ್ಟೇ ಮತ್ತಷ್ಟು ಬ್ರಿಟಿಷ್ ನಾಗರೀಕರು ಇತ್ತ ಬರಲಾರಂಭಿಸಿದ್ದು ಮತ್ತು ಇಲ್ಲಿನ ಭಾಷೆಗಳನ್ನು ಕಲಿಯಲಾರಂಭಿಸಿದ್ದು. ೧೭೭೦-೧೭೮೫ರ ಸುಮಾರಿಗೆ ಬ್ರಿಟಿಷರು ತಮ್ಮ ಆಡಳಿತಕ್ಕೆ ಪೂರಕವಾದ ವರ್ನಾಕ್ಯುಲರ್ ಭಾಷೆಗಳನ್ನು ಕಲಿಯಲಾರಂಭಿಸುತ್ತಾರೆ. ಅವಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡರಲ್ಲದೆ, ತಮ್ಮ ತಂತ್ರಗಾರಿಕೆಯನ್ನು ಬಳಸಿಕೊಳ್ಳುತ್ತಾರೆ. ಹಾಗಾಗಿ ವ್ಯಾಕರಣಗಳು, ಅರ್ಥಕೋಶಗಳು, ಸಿದ್ಧಾಂತಗಳು, ತರಗತಿ ಪಠ್ಯಗಳು ಮತ್ತು ಅನುವಾದಗಳು ಇಲ್ಲಿನ ಭಾಷೆಗಳ ಬಗ್ಗೆ ಬರಲಾರಂಭಿಸುತ್ತವೆ.[೧೦]

ಹೀಗೆ ಸ್ಥಳೀಯರನ್ನು ಬಳಸಿಕೊಂಡ ವಸಾಹತುಶಾಹಿಗೆ ಐಡಿಯಾಲಜಿಕಲ್ ಪ್ರತಿನಿಧೀಕರಣ ನೀಡಿದವನು ಮ್ಯಾಕ್ಸ್‌ಮುಲ್ಲರ್. ಈ ಸಂದರ್ಭದಲ್ಲಿ ಐಡಿಯಾಲಜಿಗೆ ಬಗ್ಗೆ ಆಲ್ಥೂಸರ್ ನೀಡಿದ ಒಂದು ವ್ಯಾಖ್ಯೆಯನ್ನು ಗಮನಿಸುವುದು ಸೂಕ್ತವಾದುದು: "ಐಡಿಯಾಲಜಿ ಎಂದರೆ ವ್ಯಕ್ತಿಗಳು ತಮ್ಮ ಅಸ್ತಿತ್ವದ ನೈಜ ಸ್ಥಿತಿ-ಗತಿಗಳೊಡನೆ ಹೊಂದಿರುವ ಕಲ್ಪನಾತ್ಮಕ ಸಂಬಂಧಗಳ ಪ್ರತಿನಿಧೀಕರಣವೇ ಆಗಿದೆ. ಅಂದರೆ ಜನ ತಮ್ಮ ನಿಜ ಪರಿಸ್ಥಿತಿಗಳು, ತಮ್ಮ ನೈಜ ಅಸ್ತಿತ್ವ ಮತ್ತು ಅವರ ನಿಜವಾದ ಜಗತ್ತನ್ನು ಐಡಿಯಾಲಜಿಯಲ್ಲಿ ಪ್ರತಿನಿಧಿಸದೆ, ಅವುಗಳೆಲ್ಲವುಗಳೊಡನೆ ಅವರು ಹೊಂದಿರುವ ಸಂಬಂಧಗಳನ್ನು ಮಾತ್ರ ಪ್ರತಿನಿಧಿಸುತ್ತಾರೆ. ಈ ಸಂಬಂಧಗಳೇ ಅಂತಿಮವಾಗಿ ಐಡಿಯಾಲಜಿಕಲ್ ಕೇಂದ್ರವಾಗಿ ಪರಿಕಲ್ಪನಾ ಜಗತ್ತನ್ನು ಪ್ರತಿನಿಧಿಸುವುದು. ಹಾಗೆಯೇ ಈ ಸಂಬಂಧವೇ ಆ ಐಡಿಯಾಲಜಿಕಲ್ ಪ್ರತಿನಿಧೀಕರಣಕ್ಕೆ ಕಾರಣವಾಗುವುದು. ಅಲ್ಲದೆ, ವ್ಯಕ್ತಿ ಸಂಬಂಧಗಳು ಮತ್ತು ಉತ್ಪಾದನಾ ಸಂಬಂಧಗಳನ್ನು ಸಹ ಅದು ಪ್ರೇರೇಪಿಸುತ್ತಿರುತ್ತದೆ ಹಾಗೂ ಅವುಗಳಿಂದಲೇ ಸ್ವಾಯತ್ತ ಸಾಧ್ಯತೆಯನ್ನು ಪಡೆಯುತ್ತದೆ. ಇಲ್ಲಿ ವ್ಯಕ್ತಿಗಳು ಜ್ಞಾತೃಗಳಾಗೇ ಇರುತ್ತಾರೆ. ಆದ್ದರಿಂದಲೇ ಅವರು ತಾವು ವಾಸ್ತವದಲ್ಲಿ ಏನಾಗಿದ್ದಾರೋ ಅದಕ್ಕೆ ಅಮೂರ್ತರಾಗಿ ಸ್ಪಂದಿಸುತ್ತಾರೆ."[೧೧]

ಮ್ಯಾಕ್ಸ್‌ಮುಲ್ಲರ್ ಜರ್ಮನಿಯವನಾಗಿದ್ದು, ಜರ್ಮನಿಯಲ್ಲೇ ಸಂಸ್ಕೃತ ಕಲಿತು ಆನಂತರ ಲಂಡನ್ನಿನಲ್ಲಿ ಈಸ್ಟ್ ಇಂಡಿಯಾ ಕಂಪನಿಗಾಗಿ ಸಂಸ್ಕೃತ ಪಠ್ಯಗಳನ್ನೆಲ್ಲಾ ಅನುವಾದಿಸಿಕೊಡುತ್ತಾನೆ. ಹೀಗೆ ಮಾಡುವಾಗ ಯುರೋಪಿನಲ್ಲಿ ಪೂರ್ವವನ್ನು ಟೀಕಿಸುವ ಮತ್ತು ಅನುವಾದಿಸುವ ಕ್ರಿಯೆಯ ಬಗ್ಗೆ ಸಾಕಷ್ಟು ವಿರೋಧ ಧ್ವನಿಗಳು ಬಂದಿದ್ದವು. ಅದನ್ನು ಮ್ಯಾಕ್ಸ್‌ಮುಲ್ಲರ್ ತಳ್ಳಿಹಾಕಿ, ತನ್ನ ಪಾಂಡಿತ್ಯದ ಕಾರಣದಿಂದಾಗಿ ಆತನಿಗೆ ವಿಮರ್ಶಾ ಹಕ್ಕು ಬಂದಿರುವುದಾಗಿಯೂ ವಾದಿಸುತ್ತಾನೆ. ಹೀಗೆ ತನ್ನ ನಿಲುವನ್ನು ಸಮರ್ಥಿಸಿಕೊಳ್ಳುತ್ತಾ, ಅಂದಿನ ಭಾಷಾಶಾಸ್ತ್ರ, ಡಾರ್ವಿನನ್ನ ಸಾಮಾಜಿಕ ವಿಕಾಸವಾದ ಮತ್ತು ತನ್ನ ಧಾರ್ಮಿಕ ನಂಬಿಕೆಗಳಿಂದ ಇಡೀ ಪೂರ್ವದ ಪಠ್ಯಗಳನ್ನು ಅನುವಾದಿಸುತ್ತಾ ಸಾಗುತ್ತಾನೆ. ಈತನ ಪ್ರಕಾರ ಇಂಡೋ-ಯುರೋಪಿಯನ್ ಭಾಷೆಗಳಿಗೆಲ್ಲಾ ಸಂಸ್ಕೃತ ಮೂಲವಾದದ್ದು; ಅದರಿಂದಲೇ ಭಾಷಾ ಗುಂಪುಗಳು ಮತ್ತು ಜನಾಂಗೀಯ ಗುಂಪುಗಳು ಉದಯಿಸಿದ್ದು. ಹೀಗೆ ಬಹುಭಾಷೆಗಳು ಮತ್ತು ಜನಾಂಗಗಳು ಒಂದೇ ಎಂದು ಆತ ಸಾಧಿಸುತ್ತಾನೆ. ಆ ಮೂಲಕ ತಮ್ಮ ಪೂರ್ವಜರು ಆರ್ಯನ್ನರಾಗಿದ್ದರು ಎಂದು ಜನಾಂಗೀಯವಾದವನ್ನು ಭಾಷಿಕವಾಗಿ ೧೮೫೯ರ ವೇಳೆಗೆ

ಆಚರಣೆಗೂ ತಂದು ಬಿಡುತ್ತಾನೆ. "ಈ ಆರ್ಯನ್ ವ್ಯಕ್ತಿಯ ಚಾರಿತ್ರಿಕ ಬೆಳವಣಿಗೆಯಲ್ಲಿ ಗ್ರೀಕ್ ಮತ್ತು ಭಾರತಗಳೆರಡು ವಿರುದ್ಧ ದಿಕ್ಕಿನಲ್ಲಿರುವಂಥದ್ದು" ಎಂದು ವೇದಗಳ ಬಗ್ಗೆ ಉಪನ್ಯಾಸ ನೀಡುತ್ತಾನೆ. ಈತ ಓರಿಯಂಟಲಿಸ್ಟ್ ಆದರ್ಶವಾದಿಗಳ ನೇತಾರನಾಗಿ ಇಡೀ ಇಂಡಿಯಾದ ಆತ್ಮ ವೇದ ಕಾಲದಲ್ಲಿದೆ ಎಂದು ಘೋಷಿಸುತ್ತಾನೆ. ಇಂಥ ಮ್ಯಾಕ್ಸ್‌ಮುಲ್ಲರ್‌ನ ಬಗ್ಗೆ ಅಮರ ಗೀತೆಯನ್ನು ಪ್ರತಾಪ್‌ಚಂದ್ರ ಮುಜುಮ್‌ದಾರ್ ಹಾಡುತ್ತಾರೆ, "ಆತ ಪಶ್ಚಿಮಕ್ಕೆ ಪೂರ್ವವನ್ನು ಅನುವಾದಿಸಿದ್ದಲ್ಲದೆ ಪೂರ್ವವನ್ನು ಪೂರ್ವಕ್ಕೂ ಸಹ ಅನುವಾದಿಸಿದ್ದಾನೆ" (ಬಿ.ಎಂ.ಶ್ರೀಯವರಂತೆ) ಮುಲ್ಲರ್ ಬ್ರಿಟಿಷ್ ರಾಜ್ಯತ್ವವನ್ನು ಒಪ್ಪಿ, ಬ್ರಿಟಿಷ್ ರಾಷ್ಟ್ರಗೀತೆಯನ್ನು ಸಂಸ್ಕೃತಕ್ಕೆ ಭಾಷಾಂತರಿಸುತ್ತಾನೆ. ಹಾಗೆಯೇ ಸ್ವಾಮಿ ವಿವೇಕಾನಂದರು ೧೮೯೬ ಜುಲೈ ೨೬ರಂದು ಮರಾಠಿ ಪತ್ರಿಕೆಯಲ್ಲಿ ಮ್ಯಾಕ್ಸ್‌ಮುಲ್ಲರ್‌ನನ್ನು ಮನಸಾರೆ ಹೊಗಳಿದ್ದಾರೆ: 'ಆತನಿಗೆ ಭೇಟಿ ನೀಡುವುದೆಂದರೆ ಪುಣ್ಯ ಸ್ಥಳಕ್ಕೆ ಭೇಟಿ ನೀಡಿದಂತೆ'. ಅಂದರೆ ಮ್ಯಾಕ್ಸ್‌ಮುಲ್ಲರ್‌ನ ಪ್ರಭಾವ ಎಷ್ಟು ಗಾಢವಾಗಿತ್ತೆಂದು ಊಹಿಸಬಹುದಲ್ಲವೇ? ಆತನ ಲಿಬರಲ್ ಧೋರಣೆಗಳಿಗೆ ೧೮೫೭ರ ಸಿಪಾಯಿದಂಗೆ ಅಥವಾ ಮೊದಲ ಸ್ವಾತಂತ್ರ್ಯ ಸಂಗ್ರಾಮವು ಕಾರಣವಾಗಿತ್ತೆನ್ನಬಹುದು. ಅಲ್ಲದೆ, ಜರ್ಮನಿಯ ಇಂಡಾಲಜಿಶಾಸ್ತ್ರವೂ ಕಾರಣವಾಗಿತ್ತು. ಯಾರೂ ಹೇಗೆ ಬೇಕಾದರೂ ಆ ಹೋರಾಟವನ್ನು ವ್ಯಾಖ್ಯಾನಿಸಲಿ, ಒಂದಂಶವಂತೂ ಸ್ಪಷ್ಟ. ಮೇಲ್ಜಾತಿ, ಮೇಲ್ವರ್ಗಗಳ ಉದಯ ಆಗಷ್ಟೇ ರೂಪುಗೊಳ್ಳುತ್ತಿದ್ದಿತ್ತು. ಬ್ರಿಟಿಷ್ ಆಳ್ವಿಕೆಯ ಅವಮಾನವನ್ನು ಸಹಿಸಲಾರದೆ ದಂಗೆಯನ್ನು ಪ್ರೇರೇಪಿಸಲಾಯಿತೆನ್ನುವುದನ್ನು ಅಲ್ಲಗಳೆಯಲಾಗದು.

ಈ ಹೋರಾಟದ ನಂತರ ಬ್ರಿಟನ್ ನೇರವಾಗಿ ಇಲ್ಲಿನ ಆಡಳಿತವನ್ನು ವಹಿಸಿಕೊಳ್ಳುತ್ತದೆ. ಇದೇ ಸಮಯದಲ್ಲಿ ಸರಕಾರ ಯಾವುದೇ ಧಾರ್ಮಿಕ ಮತ್ತು ಸಾಮಾಜಿಕ ಆಚರಣೆಗಳಲ್ಲಿ ಭಾಗಿಯಾಗಕೂಡದೆಂದು ಘೋಷಿಸುತ್ತದೆ. ಇದಕ್ಕೆ ಕಾರಣಗಳು ಇದ್ದವು. ೧೯ನೇ ಶತಮಾನದ ಮಧ್ಯಭಾಗದಲ್ಲಿ ತೀವ್ರಗೊಂಡ ಸುಧಾರಣಾವಾದಿ ಚಳವಳಿಗಳು ರಾಷ್ಟ್ರೀಯತೆಯ ಸುಪ್ತಸ್ಥಿತಿ ಹಾಗೂ ಸಾಮುದಾಯಿಕವಾಗಿ ವಸಾಹತುಶಾಹಿ ನಿರ್ಮಿಸಿಕೊಟ್ಟಂತಹ ಐಡೆಂಟಿಟಿಗಳ ವಿರುದ್ಧ ಚಳವಳಿಗಳು ಆರಂಭವಾಗಿದ್ದವು. ಅವುಗಳಲ್ಲಿ ಮುಖ್ಯವಾದುವುಗಳೆಂದರೆ ರೈತಾಪಿ ಚಳವಳಿಗಳು, ಬುಡಕಟ್ಟು ಚಳವಳಿಗಳು, ಮಹಾತ್ಮ ಫೂಲೆಯ ದಲಿತ ಚಳವಳಿಗಳ ತನಕ ಹೆಸರಿಸಬಹುದಾಗಿದೆ. ತಾತ್ತ್ವಿಕವಾಗಿ, ಈ ಹಿಂದೆ ವಿವರಿಸಲಾದ ಓರಿಯಂಟಲಿಸ್ಟ್ ಎಂಪಿರಿಸಿಸಮ್ ಮತ್ತು ಜರ್ಮನಿಯ ಆದರ್ಶವಾದಿ ಸಿದ್ಧಾಂತಗಳು ಈ ಎಲ್ಲಾ ಚಳವಳಿಗಳಿಗೂ ಸ್ವ-ಪ್ರಜ್ಞೆಯನ್ನು ಪ್ರೇರೇಪಿಸಿತ್ತು ಎಂಬುದನ್ನು ಕಾಣಬಹುದು. ಅಲ್ಲದೆ ಯುರೋಪಿನಲ್ಲಿ ಉದಯಿಸಿದ ವ್ಯಕ್ತಿನಿಷ್ಠ ಸೆಕ್ಯುಲರ್ ಪ್ರತಿನಿಧೀಕರಣಗಳು ಸಹ ಇಲ್ಲಿನ ಧರ್ಮ, ಸಮಾಜ ಮತ್ತು ರಾಜಕೀಯಗಳ ಮಧ್ಯೆ ಸೂಕ್ಷ್ಮವಾದ ಸಂಕೀರ್ಣ ಪದರಗಳನ್ನು ಸಂಘಟಿಸುತ್ತದೆ.

ಹೀಗೆ ಅಂದಿನ ವಸಾಹತುಶಾಹಿ ಪ್ರಭುತ್ವಕ್ಕೆ ಅಗತ್ಯವಾಗಿದ್ದ ಜ್ಞಾನವನ್ನು ಉತ್ಪಾದಿಸಲಾಗುತ್ತದೆ. ಹೀಗೆ ಉತ್ಪಾದಿಸಿದ ಜ್ಞಾನದ ತಾತ್ತ್ವಿಕ ಕೇಂದ್ರ ಎಂಪಿರಿಸಿಸಮ್‌ನ್ನು ಆಧರಿಸಿದ

ಓರಿಯಂಟಲಿಸ್ಟ್ ವಿದ್ವತ್ತೇ ಆಗಿತ್ತು. ಹೀಗೆ ಬ್ರಿಟಿಷ್ ಆಡಳಿತಕ್ಕೆ ಬೇಕಾದ ನೇಟಿವ್ ಕಾನೂನನ್ನು ಓರಿಯಂಟಲಿಸಮ್ ಉತ್ಪತ್ತಿ ಮಾಡುತ್ತದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಪಠ್ಯಗಳನ್ನು ಎಂಪಿರಿಕಲ್ ದೃಷ್ಟಿಯಲ್ಲಿ ನಿರೂಪಿಸುತ್ತಾ ಒಂದು ಮೂಲ ಪಠ್ಯ(Ur-Text)ವನ್ನು ಹುಡುಕುವುದು. ಹೀಗೆ ಹುಡುಕಿ ತೆಗೆದ ಪಠ್ಯವನ್ನು ಮೌಲ್ಯೀಕರಿಸಿ ಪ್ರಕಟಿಸುವುದು. ಹಾಗೆ ಪ್ರಕಟಿಸಿದ್ದೇ ಎಲ್ಲದಕ್ಕೂ ಸಾಕ್ಷೀಭೂತವಾಗಿ ಪ್ರತಿನಿಧೀಕರಣಗೊಳ್ಳುತ್ತದೆ. ಆದ್ದರಿಂದಲೇ ಮ್ಯಾಕ್ಸ್‌ಮುಲ್ಲರ್ ವಿರಚಿತ 'ಋಗ್ವೇದ' ಪಠ್ಯವು ಜಾತಿಪದ್ಧತಿಗೆ ಮೂಲಪಠ್ಯವಾಗಿ ಪರಿಣಮಿಸುತ್ತದೆ. ಇದು ಷಲ್ಡನ್ ಪೊಲಾಕ್ ಪ್ರಕಾರ, "ಜರ್ಮನಿಯಲ್ಲಿ ವಸಾಹತೀಕರಿಸುವ ಯೋಜನೆಯು ಆಂತರಿಕವಾಗಿ ತನ್ನೊಳಗೇ ಓರಿಯಂಟಲ್‌ವಾದವನ್ನು ಹುಟ್ಟುಹಾಕುತ್ತಾ, ಧಣಿ ಜನಾಂಗ ಮತ್ತು ಗುಲಾಮಿ ಜನಾಂಗ ಎನ್ನುವ ಭಿನ್ನತೆಗೆ ಕಾರಣವಾಗುತ್ತದೆ."[೧೨]

ಅಂದರೆ ಸಂಸ್ಕೃತವು ಒಂದು ಅಗತ್ಯವಾದ ವಿಭಾಗೀಕರಣವಾಗಿ "Indo - Cerman" ಮತ್ತು ಯಹೂದಿಯನ್ನು ರೂಪಿಸಲು ಬಳಕೆಯಾಗುತ್ತದೆ. ಈ ಜನಾಂಗೀಯ ಸಿದ್ಧಾಂತಕ್ಕೆ ಭಾಷಾಶಾಸ್ತ್ರ ಸಮರ್ಥನೆಯನ್ನು ನೀಡುವ ಮೂಲಕ ಭಾರತದಲ್ಲೂ ಬ್ರಾಹ್ಮಣರನ್ನು ಆರ್ಯನ್ ಧಣಿಗಳನ್ನಾಗಿಸಿ, ಅದಕ್ಕೆ ತಕ್ಕಂತೆ ಶೂದ್ರ ಜನಾಂಗವನ್ನು ಸಂಘಟಿಸಲಾಗುತ್ತದೆ.[೧೩] ಇದು ಮುಂದೆ ಜರ್ಮನಿಯಲ್ಲಿ ರಾಷ್ಟ್ರೀಯವಾದವನ್ನು ಸಂಘಟಿಸುತ್ತದೆಯಲ್ಲದೆ ಹಿಟ್ಲರ್‌ಗೆ 'ಸ್ವಸ್ತಿಕ್ ಪ್ರತೀಕ'ವನ್ನು ತಂದುಕೊಟ್ಟು ಜರ್ಮನಿಯ 'ಪರಿಶುದ್ಧತೆ'ಯನ್ನು ಸೂಚಿಸುವ ನ್ಯಾಜಿಜಮ್‌ಗೆ ಕಾರಣವಾಗುತ್ತದೆ.

ಆದರೆ, ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ, "ಓರಿಯಂಟಲ್ ವಿದ್ವತ್ತು ಜರ್ಮನಿಯಲ್ಲಿ ಭಿನ್ನವಾದ ಪಾತ್ರವನ್ನು ವಹಿಸಿದ್ದು, ಅಲ್ಲಿ ಭಾಷಿಕ ಮತ್ತು ಎತ್ನಿಕ್ ರಾಷ್ಟ್ರೀಯತೆಗೆ ಕಾರಣವಾದರೆ, ಬ್ರಿಟನ್ನಿನಲ್ಲಿ ರಾಷ್ಟ್ರೀಯತೆಯು ಜನಾಂಗೀಯವಾಗಿ ಜೈವಿಕ ವಿಜ್ಞಾನದ ಮೂಲಕ ಮಾನ್ಯತೆಗೊಂಡಿತು."[೧೪] ಮ್ಯಾಕ್ಸ್‌ಮುಲ್ಲರ್ ಬ್ರಿಟನ್‌ನಲ್ಲಿದ್ದ ಜರ್ಮನಿಯುವನಾಗಿ ಬ್ರಿಟಿಷ್ ಓರಿಯಂಟಲಿಸಮ್‌ನ ವಿಶ್ವಸ್ಥ ಪರಂಪರೆಯನ್ನು ಮುಂದುವರೆಸಿ, ಭಾಷಾವಿಜ್ಞಾನ ಮತ್ತು ಆರ್ಯನ್ ಜನಾಂಗೀಯ ಥಿಯರಿಗಳನ್ನು ಬಳಸಿ, ಭಾರತೀಯ ಭ್ರಾತೃತ್ವವನ್ನು ಯಹೂದಿಗಳಿಂದ ಪಾರು ಮಾಡಲು ಅಗತ್ಯವಾದುದು ಎಂದು ವಾದ ಮಾಡುತ್ತಾನೆ. ಹೀಗೆ ಮ್ಯಾಕ್ಸ್‌ಮುಲ್ಲರ್ ಜರ್ಮನಿಯ ರಮ್ಯವಾದವನ್ನು ಒಪ್ಪದೇ, ಕಾಂಟ್ ತತ್ತ್ವಜ್ಞಾನಿಯ ವಿಶ್ವಸ್ಥ. ತಾರ್ಕಿಕ ಜ್ಞಾನೋದಯ ಸಿದ್ಧಾಂತಕ್ಕೆ ಹಿಂದಿರುಗುತ್ತಾನೆ, ಆ ಮೂಲಕ ತನ್ನ ವೈಯಕ್ತಿಕ ಅಭಿಲಾಷೆಯನ್ನು ಪೂರೈಸಿಕೊಳ್ಳುತ್ತಾನೆ. ಹೀಗೆ ಮಾಡುವಾಗ ಆತ ಪಠ್ಯೀಕೃತ ಪರಂಪರೆಯನ್ನು ಮೌಖಿಕ ಪರಂಪರೆಯ ವಿರುದ್ಧ ಎತ್ತಿ ಹಿಡಿಯುತ್ತಾನಲ್ಲದೆ, ಅವೆರಡರ ಮಧ್ಯೆ ವೈರುದ್ಧಾತ್ಮಕ ಬಿಕ್ಕಟ್ಟನ್ನು ಸಂಘಟಿಸುತ್ತಾನೆ. ಏಕೆಂದರೆ ವೈದಿಕ ಪರಂಪರೆಯ ವೇದಾಧ್ಯಯನವನ್ನು ಮೌಖಿಕವಾಗಿ ಪಠಿಸಲಾಗುತ್ತಿತ್ತೆ ವಿನಃ ಬರವಣಿಗೆಯಿಂದೇನೂ ಆಗಿರಲಿಲ್ಲ. ಇದು ಇಂದಿಗೂ ನಡೆಯುತ್ತಿರುವುದನ್ನು ಗಮನಿಸಬಹುದು (ಇಲ್ಲಿ ಬರವಣಿಗೆ

ಯಲ್ಲಿರುವ ದಾಖಲೆಗಳು ಚರಿತ್ರೆಯನ್ನು ನಿರೂಪಿಸುವ ಸತ್ಯಗಳಾಗಿ ವಸಾಹತುಶಾಹಿ ಸಂದರ್ಭದಲ್ಲಿ ಪ್ರಾಮುಖ್ಯತೆಯನ್ನು ಪಡೆಯುತ್ತವೆ). ಇವತ್ತಿನ ಹಿಂದುತ್ವ ರಾಜಕಾರಣದ ಬೀಜಗಳು ಪುಟಿಯುತ್ತಿರುವ ಕಾರಣಗಳನ್ನು ಸಹ ೧೯ನೇ ಶತಮಾನದ ಮಧ್ಯಭಾಗದಲ್ಲಾದ ವೇದಾಧ್ಯಯನದಲ್ಲೇ ಕಾಣಬಹುದಾಗಿದೆ.

ಆದರೆ ವೈದಿಕರಿಗೂ ಸಹ 'ಒಂದು ಕೇಂದ್ರ ಪವಿತ್ರ ಗ್ರಂಥ (UR-TEXT) ಎನ್ನುವಂತಹ ಪಠ್ಯ ದೊರಕುವುದು ಸಹ ಮ್ಯಾಕ್ಸ್‌ಮುಲ್ಲರ್‌ನ ಭಾಷಾಂತರದ ಮೂಲಕವೇ ಎನ್ನುವುದನ್ನು ಅಲ್ಲಗಳೆಯಲಾಗದು. ಮ್ಯಾಕ್ಸ್‌ಮುಲ್ಲರನಿಗೂ ಸಹ ತಾನು ಮಾಡಿದ ಕ್ರಿಯೆಯಿಂದ ಆದ ಆಘಾತವನ್ನು ತಡೆದುಕೊಳ್ಳಲಾಗುವುದಿಲ್ಲ. ಆತನ ಋಗ್ವೇದದ ಅನುವಾದ ೧೯ನೇ ಶತಮಾನದ ಕೊನೆಯಲ್ಲಿ ಭಾರತದಲ್ಲಿ ಆಗುವ ಎಲ್ಲಾ ಹಿಂದೂ ಸುಧಾರಣಾವಾದಿ ಬದಲಾವಣೆಗಳಿಗೆ ಮೂಲ ನೆಲೆಯಾಗಿ ನಿಲ್ಲುತ್ತದೆ. ಆರ್ಯ ಸಮಾಜದ ಉಗಮ ಅಥವಾ ಬ್ರಹ್ಮ ಸಮಾಜದ ತಾರ್ಕಿಕ ಧರ್ಮದ ಆಕರ್ಷಣೆ ಎಲ್ಲವೂ ಸಹ ಈ ಅನುವಾದಗಳಿಗೆ ಜೋತು ಬೀಳುತ್ತವೆ. ಕಾರಣ ಯಾರೂ ಸಹ ಎಲ್ಲಾ ವೇದಗಳನ್ನು ಅಖಂಡವಾಗಿ ಸಂಸ್ಕೃತದ ಮೂಲಕ ಓದಿಕೊಂಡಿರುವುದಿಲ್ಲ. ಅದು ಸಾಧ್ಯವಾಗುವುದು ಇಂಗ್ಲೀಷ್ ಭಾಷೆಯ ಮೂಲಕವೆಂದೇ ಹೇಳಬೇಕಾಗುತ್ತದೆ. ಇದೆಲ್ಲವೂ ಸಹ ಮ್ಯಾಕ್ಸ್‌ಮುಲ್ಲರ್ ಹೇಳಿದಂತೆ ಸಾಧ್ಯವಾಗುವುದು ಭಾಷಾಶಾಸ್ತ್ರದ ಮೂಲಕವೇ. ಅಂದರೆ ಭಾರತದಲ್ಲಿ ಹಿಂದೂ ಸುಧಾರಣಾವಾದ ಹಾಗೂ ಜರ್ಮನಿಯಲ್ಲಿ ರಾಷ್ಟ್ರೀಯವಾದಗಳೆರಡೂ ಭಾಷಾಶಾಸ್ತ್ರವನ್ನು ಅದ್ಭುತವಾಗಿ ಬಳಸುತ್ತವೆ. ಹೀಗೆ ಹಿಂದೂ ಪರಂಪರೆಯನ್ನು ಜರ್ಮನ್ನರು ಅನುವಾದಿಸಿದ ಸಂಸ್ಕೃತ ಪಠ್ಯಗಳ ಮೂಲಕ ಸಂಘಟಿಸಲಾಗುತ್ತದೆ.

ಹೀಗೆ ಮಾಡುವಾಗ ಅನುವಾದಕ್ಕೆ ಬಳಕೆಯಾಗುವ ಸರಳ ವಿಧಾನವೆಂದರೆ ಲೇಖಕನೊಬ್ಬನ ಪ್ರಧಾನ ಪಠ್ಯವೊಂದನ್ನು, ವಂಶಗಳ ವರ್ಗೀಕೃತ ಹಸ್ತಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ಕಟ್ಟುವುದು, ಇಲ್ಲಿರುವ ವಿಚಾರವೆಂದರೆ ಒಂದು ವಂಶಾವಳಿಯ ಬೇರು ವಸ್ತುನಿಷ್ಠತೆಯೊಂದನ್ನು ಒದಗಿಸುವುದರಿಂದ ಲೇಖಕನೊಬ್ಬನ ಪಠ್ಯವನ್ನು ಓದುವಾಗಿನ ಪಠ್ಯಾಂತರವನ್ನು ತಡೆದಂತಾಗುತ್ತಲ್ಲದೆ, ಕಳೆದುಹೋದುದ್ದನ್ನು ಮರುಸಂಘಟಿಸಬಹುದು. ಅಂದರೆ ಡೇವಿಡ್ ಹಲ್ಪ್ ಹೇಳುವಂತೆ, ಈ ವಿಧಾನವು 'A mechanistic scientific approach to method that governed, utilimately by a deceptive measure of subjectivity'[೧೫] ಈ ವಿಧಾನದಲ್ಲಿರುವ ಕ್ರಮವೆಂದರೆ ಸಂಪಾದಕನೊಬ್ಬ ಪಠ್ಯವನ್ನು ಸಂಪಾದಿಸುವಾಗ ಅನುಸರಿಸುವ ಮಾನದಂಡವೆಂದರೆ ಯಾವ ಪಠ್ಯ ಅರ್ಥೈಸಲಾಗುವುದಿಲ್ಲವೋ, ಅದು ಪ್ರಾಮಾಣಿಕ ಪಠ್ಯವೆಂದಾಗುತ್ತದೆ. ಅಂದರೆ ಯಾವುದು ಕಠಿಣವೋ, ಯಾವುದು ವಿಶಿಷ್ಟ್ಯವೋ, ಅದು ಮೂಲ ಪಠ್ಯವೆಂದು ಮಾನ್ಯಗೊಳ್ಳುತ್ತದೆ. ಅಂದರೆ ಸಂಪಾದಕನೊಬ್ಬ ಹಿಂದಿನ ಪಠ್ಯಾಂತರಕಾರರನ್ನು ತಿದ್ದಲು ಸಮರ್ಥನಾಗುತ್ತಾನೆ ಮತ್ತು ಆ ಪಠ್ಯಾಂತರಗಳನ್ನು ಧಿಕ್ಕರಿಸಿ, ತನ್ನ ಸಂಪಾದನೆಯನ್ನು ಮೂಲವೆಂದು ಮೌಲ್ಯೀಕರಿಸಿ ಸಾಬೀತುಪಡಿಸುತ್ತಾನೆ. ಇದು ಮತ್ತಷ್ಟು

ಸ್ಪಷ್ಟವಾಗಬೇಕಾದರೆ ಹಿಂದೂ ಪರಂಪರೆಯನ್ನು ಸಂಘಟಿಸುವಾಗ ಮಹಾಭಾರತ ಮತ್ತು ರಾಮಾಯಣಗಳ ಸಂಪಾದನೆಯು ಹೇಗೆ ನಡೆಯಿತ್ತೆಂಬುದನ್ನು ಗಮನಿಸಬೇಕು. ಇದು ಆಗುವುದು ೧೯೧೮ರಲ್ಲಿ. ಪೂನಾದಲ್ಲಿ ಸ್ಥಾಪಿತವಾಗಿರುವ Oriental Research Instituteನಲ್ಲಿ. ಮಹಾಭಾರತದ ಮೂಲ ಪಠ್ಯವನ್ನು ಸಂಪಾದಿಸಲು ೧೮೯೭ರಲ್ಲೇ ಜರ್ಮನ್ ಇಂಡಾಲಜಿಸ್ಟ್ ಮೋರ್ಟಿಜ್ ವಿಂಟರ್‌ನಿರ್ಝ್ ನಿಯೋಜಿತನಾಗುತ್ತಾನಲ್ಲದೆ, ಅದಕ್ಕಾಗಿ ಬರ್ಲಿನ್ ಮತ್ತು ವಿಯನ್ನಾಗಳಿಂದ ಅನುದಾನವನ್ನು ಪಡೆಯುತ್ತಾನೆ. ಆದರೆ, ಮಹಾಯುದ್ಧದ ಕಾರಣ ಅದು ಕ್ರಿಯಾರೂಪಕ್ಕಿಳಿಯುವುದಿಲ್ಲ. ಆ ಸಂದರ್ಭದಲ್ಲಿ ಭಂಡಾರ್ಕರ್ ಸಂಸ್ಥೆಯು ಮುಂದಾಗುತ್ತದೆ. ಈ ಯೋಜನೆಗೆ ೧೯೨೫ರಲ್ಲಿ ವಿಷ್ಣು ಸೀತಾರಾಮ್ ಸುಕ್ತಂಕರ್ (ಬಾಂಬೆಯ ಗೌಡ ಸರಸ್ವತ ಬ್ರಾಹ್ಮಣ) ನೇತೃತ್ವ ವಹಿಸುತ್ತಾನೆ. ಈ ಯೋಜನೆಯ ಅಗಾಧತೆಯನ್ನು ಅರಿಯಬೇಕಾದರೆ ಆದಿಪರ್ವದ ಮೊದಲ ಪುಸ್ತಕವನ್ನು ಗಮನಿಸಬೇಕು. ಇದು ೧೮ ಪರ್ವಗಳನ್ನು ಒಳಗೊಂಡಿದ್ದು, ಒಂದು ನೂರು ಸಾವಿರ ಶ್ಲೋಕಗಳನ್ನು ಒಳಗೊಂಡಿತ್ತು. ಸುಕ್ತಂಕರ್ ಹೇಳುವಂತೆ ಈ ಪುಸ್ತಕದ ೨೩೫ ಹಸ್ತಪ್ರತಿಗಳು ಆತನಿಗೆ ತಿಳಿದಿದ್ದು, ಅವುಗಳಲ್ಲಿ ೧೦೭ ದೇವನಾಗರಿ ಲಿಪಿಯಲ್ಲಿದ್ದವು. ಈ ೧೦೭ ಪಠ್ಯಗಳಲ್ಲಿ ೭೦ನ್ನು ಮಾತ್ರ ಒಂದುಗೂಡಿಸಿ ನೋಡಲು ಸಾಧ್ಯವಾಗಿತ್ತು.[೯] ಇಂಥ ಸಂದರ್ಭದಲ್ಲಿ ಒಂದು ಮೂಲ ಪಠ್ಯವನ್ನು ಸಂಪಾದಿಸುವುದು ಎಷ್ಟು ಕಷ್ಟ ಎಂಬುದನ್ನು ಆತ ಹೇಳುತ್ತಾನೆ. ಅಂದರೆ ಅತ್ಯಂತ ಹಳೆಯ ಗ್ರಂಥ ಮೂಲ ಪಠ್ಯವಾಗಿ ಬಿಡುತ್ತದೆ. ಇಲ್ಲಿ ಮೌಖಿಕ ಪರಂಪರೆಯ ಪಠ್ಯಗಳಾವುವು ಮುಖ್ಯವಾಗುವುದಿಲ್ಲ. ಇದೇನೆ ಇರಲಿ ಓರಿಯಂಟಲಿಸ್ಟ್ ವಿಚಾರಧಾರೆ ಹೇಗೆ ಈ ಮೂಲ ಪಠ್ಯಗಳ ಸಂಪಾದನೆಯನ್ನು ಪ್ರಚೋದಿಸಿತ್ತು ಎಂಬುದನ್ನಷ್ಟೇ ಇಲ್ಲಿ ಗಮನಿಸಿರುವುದರಿಂದ ಇತರ ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗುವುದಿಲ್ಲ.

ಈ ಹಿಂದೆ ನೋಡಿದಂತೆ ಹಿಂದೂ ರಾಷ್ಟ್ರೀಯವಾದಿಗಳಿಗೆ ಈ ಮೌಖಿಕ ಮತ್ತು ಲಿಖಿತ ಪರಂಪರೆಗಳ ಮಧ್ಯೆ ತೀವ್ರವಾದ ವಾಗ್ವಾದ ನಡೆದು ಕೊನೆಗೆ ಬಹುರೂಪಿ ಅಸಂಖ್ಯಾತ ಜೀವಂತ ಪರಂಪರೆಗಳನ್ನು ಏಕೀಕೃತಗೊಳಿಸಿ, ಆಯ್ದುಕೊಂಡು, ಪ್ರಮಾಣೀಕರಿಸಿ, ಅವುಗಳನ್ನು ಅಧಿಕೃತ ಪಠ್ಯಗಳನ್ನಾಗಿ ಪ್ರಕಟಿಸಲಾಗುತ್ತದೆ. ಮುದ್ರಣವಾಗುವ ಇಂಥ ಪಠ್ಯ-ಪುಸ್ತಕಗಳಿಗೆ ಬೇಡಿಕೆ ಬಂದಿದ್ದರಿಂದ 'ವಿಶ್ಲೇಷಣಾತ್ಮಕ ಸಂಪಾದಕೀಯ'ಗಳು ಬಹುಮುಖ್ಯವಾಗುತ್ತವೆ. ಇದನ್ನೇ ಪ್ರಿಂಟ್ ಕ್ಯಾಪಿಟಲಿಸಮ್ ಮತ್ತು ರಾಷ್ಟ್ರೀಯತೆಗಳ ಮಧ್ಯೆ ಅನ್ಯೋನ್ಯ ಸಂಬಂಧವಿದೆ ಎಂದು ಬೆನೆಡಿಕ್ಟ್ ಅಂಡರ್‌ಸನ್ ಹೇಳುತ್ತಾನೆ. ಅಂದರೆ ಅಂಥ ಮುದ್ರಣಗೊಂಡ ಪಠ್ಯವನ್ನು ಖಾಸಗಿಯಾಗಿ ಓದುವುದು ಮತ್ತು ಓದಿದ್ದನ್ನು, ಸಾರ್ವಜನಿಕ ಅವಕಾಶಗಳಲ್ಲಿ ಆಚರಣೆಗೆ ತರುವುದು ಪ್ರಿಂಟ್ ಕ್ಯಾಪಿಟಲಿಸಮ್‌ನ ಕೊಡುಗೆ ಎಂದೇ ಹೇಳಬೇಕಾಗುತ್ತದೆ. ಹೀಗೆ ಹೇಳುವಾಗ ಮೌಖಿಕ ಪರಂಪರೆಯು ಸಾರ್ವಜನಿಕ ಅವಕಾಶಗಳಲ್ಲಿ ಪ್ರದರ್ಶನಗೊಳ್ಳುವುದನ್ನು ನಾವು ಮರೆಯುವಂತಿಲ್ಲ. ಏಕೆಂದರೆ ಅವುಗಳು ಸಹ ಪ್ರಭುತ್ವದ ಮತ್ತು ಪ್ರತಿರೋಧದ ಮಧ್ಯೆ ಐಡೆಂಟಿಟಿಗಳನ್ನು ನಿರೂಪಿಸುವ ಕ್ರಿಯೆಯಲ್ಲಿ ತೊಡಗಿರುತ್ತವೆ (ಈ ಅಂಶವನ್ನು

ಮುಂದೆ ಮಂಟೆಸ್ವಾಮಿ ಮತ್ತು ಮಲೆಮಹದೇಶ್ವರ ಪರಂಪರೆಗಳನ್ನು ಕುರಿತು ಚರ್ಚಿಸುವಾಗ ನೋಡಬಹುದು). ಹೀಗಿದ್ದರೂ ಸಹ ೧೯ನೇ ಶತಮಾನದ ಕೊನೆಯಲ್ಲಿ ಈ ಮುದ್ರಿತ ಪಠ್ಯಗಳು ತುಂಡು ರಾಜಕುಮಾರರಂತೆ ಅಥವಾ ಪಟ್ಟದ ರಾಣಿಯರಂತೆ ವಸಾಹತುಶಾಹಿ ದೊರೆಗಳಿಗೆ ಮತ್ತು ರಾಷ್ಟ್ರೀಯವಾದಿಗಳಿಗೆ ದೊರಕುತ್ತವೆ.

ಹೀಗಿರುವಲ್ಲಿ ಮುಖ್ಯವಾದ ಸಂಗತಿಯೆಂದರೆ ಚರಿತ್ರೆ ಮತ್ತು ರಾಷ್ಟ್ರ ಎನ್ನುವ ಪರಿಕಲ್ಪಿತ ಪಠ್ಯಗಳು ವಾಸ್ತವದಲ್ಲಿ ಅನುಭವಕ್ಕೆ ಬರುವುದು ಈ ಲಿಖಿತ ಪಠ್ಯಗಳ ಹಾಜರಿಯಿಂದ. ರಾಷ್ಟ್ರೀಯ ಹಿಂದುತ್ವವಾದಿಗಳಿಗೆ ಇದೊಂದು ಸಮಸ್ಯೆಯಾಗುತ್ತದೆ. ಏಕೆಂದರೆ ಇವರೆಲ್ಲರೂ ಆಧುನಿಕ ಶಿಕ್ಷಣವನ್ನು ಪಡೆದು, ಓರಿಯಂಟಲಿಸ್ಟ್ ವಿದ್ವತ್ತಿನೊಂದಿಗೆ ಪೈಪೋಟಿಗಳಿದು, ಲಿಖಿತ ಪರಂಪರೆಯನ್ನು ಯುರೋಪಿಯನ್ನರಂತೆ ಪರಿಭಾವಿಸುತ್ತಾರೆ. ಆದರೆ ವೈದಿಕ ಪರಂಪರೆ ಎನ್ನುವ ಬಹುರೂಪಿ ವಾಸ್ತವಗಳನ್ನು ಗಮನಿಸಿದಾಗಲೂ, ಅಲ್ಲಿ ಮಂತ್ರಗಳನ್ನು ಕೇಳುವುದು ಮತ್ತು ಪಠಿಸುವುದು ಪ್ರಮುಖವಾಗಿ, ಬರವಣಿಗೆಯನ್ನು ನಿಷೇಧಿಸಲಾಗಿದೆ. ಈ ನಿಷೇಧ ಮಂತ್ರಗಳ ಶಾಬ್ದಿಕ ಪ್ರಯೋಗಕ್ಕಿರುವ ಶಕ್ತಿಯನ್ನು ಎತ್ತಿ ಹಿಡಿಯುತ್ತದೆ. ಆದರೆ ಈ ಶಾಬ್ದಿಕ ಶಕ್ತಿಯನ್ನು ಪಡೆಯಲು ಅನ್ಯರು ಅನರ್ಹರಾಗುತ್ತಾರೆ. ಹೀಗಿರುವಲ್ಲಿ ಬರವಣಿಗೆಗೆ ವೇದ ಗಳನ್ನು ಭಟ್ಟಿ ಇಳಿಸಲು ಸಾಧ್ಯವಾಗುವುದು ವಸಾಹತುಶಾಹಿಯೊಡನೆ ಬಂದ 'ಆಧುನಿಕತೆಯ' ಮೂಲಕವೆಂದೇ ಹೇಳಬೇಕಾಗುತ್ತದೆ. ಆದ್ದರಿಂದಲೇ ಮ್ಯಾಕ್ಸ್‌ಮುಲ್ಲರ್‌ನ ಋಗ್ವೇದದ ಆರು ಸಂಪುಟಗಳು ಅದ್ಭುತವಾದ ಜನಪ್ರಿಯತೆಯನ್ನು ಪಡೆಯುತ್ತವೆ. ಅಂದರೆ ಆ ವೇಳೆಗೆ ಶಿಕ್ಷಿತ ಮಧ್ಯಮವರ್ಗವು ಸಾಮ್ರಾಜ್ಯಶಾಹಿ ಪ್ರಭುತ್ವದಲ್ಲಿ ತಮ್ಮ ಪಾಲನ್ನು ಪಡೆಯಲು ಹಾತೊರೆಯುತ್ತಿದ್ದದ್ದು ವಾಸ್ತವವೆಂದು ತಿಳಿಯಬೇಕಾಗುತ್ತದೆ.

ಈ ಹಿಂದೆ ಗುರುತಿಸಿದ ಸುಕ್ತಂಕರ್ ಅವರ ಪಠ್ಯಕ್ರಮಗಳಿಗಿಂತಲೂ ಭಿನ್ನವಾಗಿ ಆಚರಣೆ ಯಲ್ಲಿರುವ ದ್ರೌಪದಿ ಮಹಾಭಾರತ (ತಮಿಳುನಾಡು ಮತ್ತು ಕರ್ನಾಟಕ) ಪರಂಪರೆಗಳು ಸವಾಲೆಸೆದಾಗ ನೇಟಿವ್ ಅಥವಾ ರೀಜನಲ್ ಎನ್ನುವ ಪಠ್ಯಗಳನ್ನಾಗಿ ಸಂಘಟಿಸಲಾಗುತ್ತದೆ. ಅಂದರೆ ಕನ್ನಡ ಭಾಷೆಯನ್ನು ಸಂಘಟಿಸುವಾಗಲು ಚಲಾವಣೆಯಲ್ಲಿರುವ ಲೌಖಿಕ ಮತ್ತು ಅಲೌಖಿಕ ವರ್ಗೀಕರಣವನ್ನು ನೋಡಬೇಕಾಗುತ್ತದೆ. ಹೀಗೆ ಮಾಡುವಾಗಲೂ ವೇದಗಳನ್ನು ಅಧಿಕೃತ ಮಾನದಂಡಗಳನ್ನಾಗಿ ೧೯ನೇ ಶತಮಾನದಲ್ಲಿ ಬಳಸಲಾಗುತ್ತದೆ. ಇದಕ್ಕೆ ಕಾರಣ ಓರಿಯಂಟಲಿಸ್ಟ್ ವಿದ್ವತ್ತಿನಲ್ಲಿ ಎಂಪರಿಸಿಸ್ಟ್ ಧೋರಣೆಗಳೇ ಆಗಿದ್ದವು. ಏಕೆಂದರೆ ಈ ಓರಿಯಂಟಲಿಸ್ಟ್ ವಿದ್ವತ್ತು ಮೂಲ ಪಠ್ಯವನ್ನು ಶೋಧಿಸುವಾಗ ಎಂಪಿರಿಸಿಸ್ಟ್ ಅಂಶಗಳನ್ನೇ ಬಲವಾಗಿ ನಂಬುತ್ತವೆ ಮತ್ತು ಬಳಸುತ್ತವೆ. ಆದ್ದರಿಂದ, ಕುಲ ಸಮುದಾಯಗಳನ್ನು ಗ್ರಹಿಸು ವಾಗ ಮತ್ತು ಆಧುನಿಕತೆಯಲ್ಲಿ ಅವು ಚಲಿಸುವಾಗ, ಅವುಗಳನ್ನು ಬ್ರಾಹ್ಮಣರ ಮುದ್ರಿತ ಮತ್ತು ಸಂಪಾದಿತ ಪಠ್ಯಗಳ ರಾಜಕಾರಣದಲ್ಲಿ ಪ್ರತಿನಿಧಿಸಲಾಗುತ್ತದೆ ಮತ್ತು ವ್ಯಾಖ್ಯಾನಕ್ಕೆ ಒಳಪಡಿಸಲಾಗುತ್ತದೆ. ಅಂದರೆ ಓರಿಯಂಟಲಿಸ್ಟ್ ವಿಚಾರಧಾರೆಯಲ್ಲಿ ಬ್ರಾಹ್ಮಣರ ಲಿಖಿತ ಪರಂಪರೆಯಷ್ಟೇ ಬ್ರಿಟಿಷ್ ಭಾರತದ ಪರಿಭಾವಿಸಿದಂತೆ ಉಳಿದೆಲ್ಲಾ ಸಮುದಾಯಗಳು

ಭಿನ್ನವಾಗಿ (ಈ ಬ್ರಾಹ್ಮಿಣಿಕಲ್ ಓರಿಯಂಟಲಿಸ್ಟ್ ಆಧುನಿಕತೆಗಿಂತ) ಆಧುನಿಕತೆಯನ್ನು ಪರಿಕಲ್ಪಿಸಬಹುದಾಗಿದೆ ಎಂಬ ಸಂಗತಿಯನ್ನು ಮತ್ತಷ್ಟು ವಿವರವಾಗಿ ಚರ್ಚಿಸುವ ಅಗತ್ಯವಿದೆಯಾದ್ದರಿಂದ ಅದನ್ನು ಈ ಅಧ್ಯಯನದ ಕೊನೆಯ ಭಾಗಕ್ಕೆ ಮೀಸಲಿಡಲಾಗಿದೆ.

ಆದ್ದರಿಂದ, ಭಾರತೀಯ ಹಿಂದೂಧರ್ಮ ಎಂದಾಕ್ಷಣ ಸಂಸ್ಕೃತ ಪರಂಪರೆಯ ವೇದ ಮೂಲ ದರ್ಶನವಾಗುತ್ತದೆಯಲ್ಲದೆ, ವೇದಗಳ ಅನಂತರದ ಉಪನಿಷತ್ತುಗಳು ಓರಿಯಂಟಲಿಸ್ಟರ ಸೈದ್ಧಾಂತಿಕ ಚೌಕಟ್ಟಿಗೆ ಮೇವನ್ನು ಕೊಡುತ್ತವೆ. ನಿರಂಜನಧಾರ್ ೧೯೭೭ರಲ್ಲಿ ಪ್ರಕಟಿಸಿದ ತನ್ನ ಕೃತಿ, "Vedantha and the Bengal renaissance"ನಲ್ಲಿ ಹೇಳಿರುವಂತೆ, ವೇದಾಂತವು ಮೊದಲ ಬಾರಿಗೆ ಹಿಂದೂಗಳ ದರ್ಶನವೆಂದು ಪ್ರತಿಪಾದಿತವಾಗುವುದು ಹೆನ್ರಿ ಥಾಮಸ್ ಕೂಲ್ ಬ್ರೂಕ್‌ನಿಂದ. ಈತ ಲಾರ್ಡ್ ವೆಲ್ಲೆಸ್ಲಿ ೧೮೦೦ರಲ್ಲಿ ಆರಂಭಿಸಿದ ಫೋರ್ಟ್ ವಿಲಿಯಂ ಕಾಲೇಜಿನ ಸಂಸ್ಕೃತ ವಿಭಾಗದ ಮುಖ್ಯಸ್ಥನಾಗಿದ್ದ. ವೇದ ಕಾಲದ ಏಕದೈವ ಕಲ್ಪನೆಯನ್ನು ವೇದಾಂತ ಗಟ್ಟಿಗೊಳಿಸುತ್ತದೆ ಎಂದು ಆತ ವಾದಿಸುತ್ತಾನೆ. ಹೀಗೆ ವಸಾಹತುಶಾಹಿ ವಿದ್ವಾಂಸರು ವಾದಿಸುವಾಗ, ಫ್ರಾನ್ಸ್ ಕ್ರಾಂತಿಯ ಪ್ರಭಾವಗಳು ಇಲ್ಲಿನ ಈಸ್ಟ್ ಇಂಡಿಯಾ ಕಂಪನಿಯನ್ನು ಅಲುಗಾಡಿಸಿದ್ದು, ಅದನ್ನು ಗಟ್ಟಿಯಾಗಿಸುವ ಒಂದೇ ಗುರಿ ಅವರ ಭಾರತೀಯ ಪ್ರತಿನಿಧೀಕರಣವನ್ನು ಏಕರೂಪಿಯಾಗಿ ಪ್ರೇರೇಪಿಸಿದ್ದವು ಎನ್ನುವುದನ್ನು ಮರೆಯುವಂತಿಲ್ಲ. ಆದ್ದರಿಂದಲೇ ಫೋರ್ಟ್ ವಿಲಿಯಂ ಕಾಲೇಜಿನ ಸ್ಥಾಪನೆಯ ಸಂದರ್ಭದಲ್ಲಿ ವೆಲ್ಲೆಸ್ಲಿ ಈ ಕಾಲೇಜಿನ ಉದ್ದೇಶವನ್ನು ಹೀಗೆಂದು ಸ್ಪಷ್ಟೀಕರಿಸುತ್ತಾನೆ. "ಭಾರತದಲ್ಲಿ ಬ್ರಿಟಿಷ್ ಅಧಿಕಾರದ ಸ್ಥಿರತೆಗಾಗಿ ಧರ್ಮ ಮತ್ತು ಸರ್ಕಾರಗಳ ನಿಯಮಾವಳಿಯನ್ನು ಸರಿಯಾಗಿ ನಿರೂಪಿಸತಕ್ಕದ್ದು."[೧೭] ಆದ್ದರಿಂದ ಬಂಗಾಳ ಜಮೀನ್ದಾರಿ ಮತ್ತು ಬ್ರಾಹ್ಮಣ ಪಂಡಿತವರ್ಗವನ್ನು ತನ್ನ ತೆಕ್ಕೆಯಲ್ಲಿ ತೆಗೆದುಕೊಳ್ಳಲು ಪಾರಮಾರ್ಥಿಕ ವೇದಾಂತವನ್ನು ಹಿಂದೂಧರ್ಮದ ಕೇಂದ್ರಸಾರವೆಂಬಂತೆ ತೋರಿ, ಪ್ರಾದೇಶಿಕ ಪ್ರತಿಭಟನೆಯನ್ನು ನಿರಸನಗೊಳಿಸಲಾಯಿತೆಂದು ನಿರಂಜನ್‌ಧಾರ್ ವಾದಿಸುತ್ತಾರೆ.[೧೮] ಅಂದರೆ ಬ್ರಿಟಿಷ್ ಆಡಳಿತವು ಆತಂಕಕಾರಿ ಸನ್ನಿವೇಶಗಳನ್ನು ಒಳಗಿನಿಂದಲೂ ಮತ್ತು ಹೊರಗಿನಿಂದಲೂ ಎದುರಿಸುತ್ತಿದ್ದು, ಆವೆರಡನ್ನೂ ನಿಭಾಯಿಸಿಕೊಳ್ಳಬೇಕಾದ ಇಕ್ಕಟ್ಟು ಅದಕ್ಕೆ ಇತ್ತು. ಆದ್ದರಿಂದ ಅದು ತಾನೇನೂ ಪ್ರತಿನಿಧಿಸುತ್ತಿತ್ತೊ ಅದನ್ನು ಸಂಪೂರ್ಣ ನಿಯಂತ್ರಿಸಲು ಬೇಕಾದ ಐಡಿಯಾಲಾಜಿಕ್ ಡಿಸ್ಕೋರ್ಸ್‌ನ್ನು ಜಾರಿಯಾಗಿಸಬೇಕಾಗುತ್ತದೆ.

ಏಷಿಯಾಟಿಕ್ ಸೊಸೈಟಿಯ ೫೦ನೇ ವಾರ್ಷಿಕೋತ್ಸವದ ಸಂದರ್ಭದಲ್ಲಿ ಮಾತನಾಡಿದ ಡಬ್ಲ್ಯು.ಇ.ಟೈಲರ್ ಹೀಗೆಂದು ಘೋಷಿಸುತ್ತಾನೆ. '೧೮ನೇ ಶತಮಾನದಲ್ಲಿ ಬ್ರಿಟಿಷರು ಹಿಂದೂಸ್ತಾನದ ಸಾಹಿತ್ಯದಲ್ಲಿರುವ ಜ್ಞಾನ ಭಂಡಾರವನ್ನು ಜಗತ್ತಿಗೆ ತೆರೆದರು', ತನ್ನ ವಾದ ಸರಣಿಯನ್ನು ಮುಂದುವರೆಸಿ "KNOWLEDGE IS POWER"[೧೯] ಎಂದು ನಿರೂಪಿಸುತ್ತಾನೆ. ೧೭೮೪ರಲ್ಲಿ ಹೇಸ್ಟಿಂಗ್ಸ್ 'ಜ್ಞಾನ ಮತ್ತು ಅಧಿಕಾರ'ಕ್ಕಿರುವ ಸಂಬಂಧವನ್ನು ಕೋರ್ಟ್ ಆಫ್ ಡೈರೆಕ್ಟರ್ಸ್‌ನ ಛೇರ್‌ಮನ್ ಆದ ನತಾನಿಯೆಲ್ ಸ್ಮಿತ್‌ನಿಗೆ ಈ ಕೆಳಗಿನಂತೆ

ವಿವರಿಸುತ್ತಾನೆ. “ಆಕ್ರಮಣದ ಮೂಲಕ ನಾವು ಪ್ರಾಬಲ್ಯ ಸಾಧಿಸಿರುವ ಜನರೊಂದಿಗಿನ ಸಾಮಾಜಿಕ ಸಂವಹನದಿಂದ ಗಳಿಸಿಕೊಳ್ಳುವ ಪ್ರತಿ ಜ್ಞಾನವೂ ಪ್ರಭುತ್ವಕ್ಕೆ ಪ್ರಯೋಜನಕಾರಿಯಾದುದು; ಅದು ದೂರದ ಜನರ ವಿಶ್ವಾಸವನ್ನು ಆಕರ್ಷಿಸುತ್ತದೆ ಮತ್ತು ಒಲಿಸಿಕೊಳ್ಳುತ್ತದೆ. ಅದು ದೇಶಿ ಜನರನ್ನು ಬಂಧಿಸಿರುವ ಸರಪಳಿಗಳ ತೂಕವನ್ನು ಕಡಿಮೆ ಮಾಡುತ್ತದೆ. ಅದು ದೇಶದ ಜನರ ಹೃದಯಗಳಲ್ಲಿ ಉದಾತ್ತತೆ ಮತ್ತು ಬದ್ಧತೆಯನ್ನು ಬೆಳೆಸುತ್ತದೆ. ಅವರ (ಅಂದರೆ ಭಾರತೀಯರ) ನಿಜವಾದ ಗುಣಗಳನ್ನು ನಮ್ಮ ವೀಕ್ಷಣೆಗೆ ಒದಗಿಸುವ ಇದು, ಅವರ ನೈಸರ್ಗಿಕ ಹಕ್ಕುಗಳ ಭಾವನೆಯನ್ನು, ಅವರ ಬಗೆಗೆ ಉದಾರ ಕಲ್ಪನೆಗಳನ್ನು ಒದಗಿಸುತ್ತದೆ. ನಮ್ಮ ಮಾನದಂಡಗಳ ಮೂಲಕ ಅವರನ್ನು ಅಂದಾಜು ಮಾಡಲು ನೆರವಾಗುತ್ತದೆ. ಆದರೆ ಇಂತಹ ದೃಷ್ಟಾಂತಗಳು ನಮಗೆ ಸಿಗುವುದು ಅವರ ಬರಹಗಳಿಂದಲೇ; ಭಾರತದಲ್ಲಿ ದೀರ್ಘಕಾಲದ ಬ್ರಿಟಿಷ್ ಪ್ರಾಬಲ್ಯ ಕೊನೆಗೊಂಡ ನಂತರವೂ ಇವು ಉಳಿದುಕೊಳ್ಳುತ್ತವೆ. ಸಂಪತ್ತು ಮತ್ತು ಅಧಿಕಾರ ಗಳಿಸಿಕೊಳ್ಳಲು ನೆರವಾಗುವ ಮೂಲಗಳ ನೆನಪಾಗಿ ಉಳಿಯುತ್ತವೆ.”[೨೦]

ಈ ಪ್ರಕ್ರಿಯೆಗಳು ಮೊದಲಮೊದಲಿಗೆ ಕಾಣಿಸಿಕೊಂಡಿದ್ದು, ತಮಿಳು ಮತ್ತು ಬೆಂಗಾಳಿ ಭಾಷೆಯಲ್ಲಿ.[೨೧] ಅನಂತರ ಅದು ಇತರೆ ‘ವರ್ನಾಕ್ಯುಲರ್’ ಭಾಷೆಗಳಿಗೂ ವಿಸ್ತರಿಸುತ್ತದೆ. ಈ ಉದ್ದೇಶಕ್ಕಾಗಿಯೇ ೧೯ನೇ ಶತಮಾನದಲ್ಲಿ ಅನೇಕ ಸಂಸ್ಥೆಗಳು ವಸಾಹತುಶಾಹಿಯ ಘೋಷಣೆಯಲ್ಲೇ ತಲೆಯೆತ್ತುತ್ತವೆ. ಕಲ್ಕತ್ತ, ಮದ್ರಾಸು, ಬೆಂಗಳೂರು, ಮುಂಬಯಿ ಮುಂತಾದ ಸ್ಥಳಗಳಲ್ಲಿ ‘ದಿ ಏಷ್ಯಾಟಿಕ್ ಸೊಸೈಟಿ’, ‘ಬಾಂಬೆ ಎಜ್ಯೂಕೇಷನ್ ಸೊಸೈಟಿ’, ‘ಸ್ಕೂಲ್ ಬುಕ್ ಸೊಸೈಟಿ’, ‘ಅಕ್ಸಿಲರಿಯ ಸೊಸೈಟಿ’, ‘ಸ್ಕೂಲ್ ಅಂಡ್ ಟ್ರ್ಯಾಕ್ಟ್ ಬುಕ್ ಸೊಸೈಟಿ’, ‘ವರ್ನಾಕ್ಯುಲರ್ ಸೊಸೈಟಿ’, ‘ನೇಟಿವ್ ಎಜ್ಯೂಕೇಷನ್ ಸೊಸೈಟಿ’, ‘ವರ್ನಾಕ್ಯುಲರ್ ಟ್ರಾನ್ಸ್‌ಲೇಶನ್ ಸೊಸೈಟಿ’ ಮುಂತಾದುವುಗಳೊಂದಿಗೆ ಸರಕಾರಿ ಸ್ವಾಮ್ಯದ ಮುದ್ರಣಗಳು ಆರಂಭವಾಗುತ್ತವೆ. ಈ ಸಂಸ್ಥೆಗಳಲ್ಲಿ ಮುಖ್ಯವಾಗಿ ಮುದ್ರಣವಾಗುತ್ತಿದ್ದ ಪಠ್ಯಗಳೆಂದರೆ, ಕ್ರಿಶ್ಚಿಯನ್ ಮತೀಯ ಪಠ್ಯಗಳು, ಪ್ರಾಚೀನ ಗ್ರಂಥಗಳ ಪರಿಷ್ಕೃತ ಮುದ್ರಣ, ಜ್ಞಾನ-ವಿಜ್ಞಾನ ಪಠ್ಯಗಳ ಅನುವಾದ, ಶಾಲಾ ಪಠ್ಯ ಪುಸ್ತಕಗಳು ಹಾಗೂ ಸರಕಾರಿ ಕಾನೂನು ಪಠ್ಯಗಳು. ಇವುಗಳ ಮೂಲಕ ‘ದೇಶಿ’ ಭಾಷೆಗಳ್ನು ಎಂಪಿರಿಕಲ್ ಆಗಿ ಸಂಘಟಿಸಲಾಗುತ್ತದೆ.

ಹೀಗೆ ಸ್ಥಳೀಯ ಭಾಷೆಗಳು, ಸಾಹಿತ್ಯ, ವಿಜ್ಞಾನ ಮತ್ತು ಚಿಂತನೆಗಳ ಅಧ್ಯಯನವು ಬ್ರಿಟಿಷರಿಗೆ ಮೂರು ಪ್ರಧಾನ ಯೋಜನೆಗಳನ್ನು ರೂಪಿಸುವಂತೆ ಪ್ರೇರೇಪಿಸಿತ್ತೆಂದು ಬರ್ನಾಡ್ ಕ್ಹೂನ್ ಹೇಳುತ್ತಾರೆ :

೧. ಭಾರತೀಯ ಭಾಷೆಗಳನ್ನು ವಸ್ತುನಿಷ್ಠೀಕರಿಸಿದ್ದು ಮತ್ತು ಬಳಸಿದ್ದು. ಅದು ಇಲ್ಲಿನ ವಿಚಿತ್ರ ನಡಾವಳಿಗಳನ್ನು, ಸಂಪ್ರದಾಯಗಳನ್ನು ಮತ್ತು ನೇಟಿವ್ ಜನರ ಪೂರ್ವಗ್ರಹಗಳನ್ನು ನಿಯಂತ್ರಿಸಲು ಮತ್ತು ಅರ್ಥೈಸಲು ಸಾಧ್ಯವಾಗಿ ಜನಗಳನ್ನು ಆಳಲು ಬೇಕಾದ ಸಂಗತಿಗಳನ್ನು ಗುಡ್ಡೆ ಹಾಕಲು ಸಾಧನವಾದದ್ದು.

೨. ಯಾವುದನ್ನು ಯುರೋಪಿಯನ್ನರು 'ಪುರಾತನ ವಿವೇಕ'ವೆಂದು ಶೋಧಿಸಿದರೋ ಅದನ್ನು ೧೮-೧೯ನೇ ಶತಮಾನದಲ್ಲಿ ಗ್ರೀಕ್ ಮತ್ತು ರೋಮ್‌ನ ಜ್ಞಾನವಾಗಿ ಪರಿವರ್ತಿಸಿದಂತೆ, ಇಂಡಿಯಾ ಮತ್ತು ಪಶ್ಚಿಮದ ನಡುವೆ ಇರುವಂತಹ ಚಾರಿತ್ರಿಕ ಸಂಬಂಧವನ್ನು ಕಟ್ಟಿಕೊಂಡದ್ದು ಹಾಗೂ ಆ ಮೂಲಕ ಅದನ್ನು ವರ್ಗೀಕರಿಸಿ ಕ್ರಮಬದ್ಧಗೊಳಿಸಿ, ಅವುಗಳ ನಾಗರೀಕತೆಗಳನ್ನು ಪ್ರಗತಿ ಮತ್ತು ನಾಶವೆಂಬ ಅಳತೆಗೋಲಿನಲ್ಲಿ ಮೌಲೀಕರಿಸಿದ್ದು;

೩. ಬ್ರಿಟಿಷರು ಯಾವುದನ್ನು **'ಆಕ್ರಮಣ ಮಾಡಿದ ಪರಂಪರೆ'** ಎಂದು ಕರೆದರೊ, ಅದು ಅವರಿಂದಲೇ ಘೋಷಣೆಗೊಂಡ ಧಾರ್ಮಿಕ, ಸಾಂಸ್ಥಿಕ ಮತ್ತು ಸಾಹಿತ್ಯಿಕ ಪಂಡಿತರಿಂದ-ಪಠ್ಯಗಳು, ಬರಹಗಳು, ವಾಚನಗಳು, ಪ್ರದರ್ಶನಗಳು, ಚಿತ್ರಗಳು ಮತ್ತು ಶಿಲ್ಪಗಳು, ವಿಧಿ-ಆಚರಣೆಗಳ ಮೂಲಕ ನಿರ್ವಹಣೆಗೊಂಡದ್ದು ಮತ್ತು ಮುಂದುವರೆಯುವಂತೆ ಮಾಡಿದ್ದುದು. ಇಲ್ಲಿನವರ ಕಣ್ಣಲ್ಲಿ ಮಾನ್ಯತೆಗೊಳ್ಳಲು ಬ್ರಿಟಿಷರು ಅನುಸರಿಸಿದ ತಂತ್ರವೆಂದರೆ 'ನೇಟಿವ್ ಸಂಪ್ರದಾಯ-ಪರಂಪರೆಗಳನ್ನು ಗೌರವಿಸಿ, ಅವುಗಳ ಬಗ್ಗೆ ಕುತೂಹಲ ತೋರಿಸಿದ್ದು.

೪. ಹೀಗೆ ಉತ್ಪಾದಿಸಿದ ಜ್ಞಾನವನ್ನು ಲಿಂಗೀಯ ಮತ್ತು ಸಮುದಾಯ ಪ್ರಜ್ಞೆಯಾಗಿ ನೇಟಿವ್ ಜನಕ್ಕೆ ಸಂಘಟಿಸಿಕೊಡಲಾಗುತ್ತದೆ.

ಈ ಜ್ಞಾನ ಉತ್ಪಾದನೆಯ ನೇರ ಪರಿಣಾಮವನ್ನು ಊಹಿಸಬೇಕಾದರೆ ಇನ್ನೊಂದು ಮಾದರಿಯನ್ನು 'ಕನ್ನಡದ ಕಣ್ವ' ಎಂದು ಖ್ಯಾತಿ ಗಳಿಸಿರುವ ಬಿ.ಎಂ. ಶ್ರೀಯವರ ಒಂದು ಪಠ್ಯದ ಮೂಲಕ ವಿಶ್ಲೇಷಣೆಗೆ ತೆಗೆದುಕೊಳ್ಳೋಣ: ಕನ್ನಡ ಕಾವ್ಯ ಮಾಲೆಯಲ್ಲಿ ಪ್ರಕಟವಾದ ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ ಭಾಗಗಳು ೧, ೨, ೩ ಎನ್ನುವುದೇ ಆ ಕೃತಿ.

ಈ ಕೃತಿಗಳು ಭಾಷಣಗಳು ಮತ್ತು ಲೇಖನಗಳು, ಮುನ್ನುಡಿಗಳು ಮತ್ತು ಲೇಖನಗಳನ್ನು ಹಾಗೂ ಕಾವ್ಯಾವಲೋಕನಂ ಕುರಿತು ೧೯೪೧ರಲ್ಲಿ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಪ್ರಕಟವಾದ ಲೇಖನವನ್ನು ಒಳಗೊಂಡಂತೆ ಪ್ರಕಟಿಸಲಾಗಿದೆ.

ಮೊದಲನೇ ಭಾಗದಲ್ಲಿ ಒಟ್ಟು ೨೬ ಭಾಷಣ ಮತ್ತು ಲೇಖನಗಳಿವೆ. ಇವುಗಳಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿರುವ ಭಾಗಗಳೆಂದರೆ :

ಅ. ಕನ್ನಡ ಮಾತು ತಲೆ ಎತ್ತುವ ಬಗೆ
ಆ. ಕನ್ನಡಕ್ಕೆ ಒಂದು ಕಟ್ಟು
ಇ. ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ
ಈ. ಕನ್ನಡದ ಪುನರುಜ್ಜೀವನ
ಉ. ಭಿನ್ನಹಃ ತಾಯಿಯ ಕೈಂಕರ್ಯಕ್ಕೆ ನಿಲ್ಲಿ
ಊ. ನಮ್ಮ ಕುಲ ಕನ್ನಡ ಕುಲ

ಈ ಆರು ಭಾಗಗಳಲ್ಲಿ ಒಂದೇ ಸಂಗತಿಯ ಎಳೆಯಿರುವುದರಿಂದ ಆ ಎಲ್ಲ ಭಾಗಗಳಲ್ಲಿ ಬಂದಿರುವ ಆಯ್ದ ಉಲ್ಲೇಖನಗಳನ್ನಷ್ಟೇ ಇಲ್ಲಿ ಚರ್ಚೆಗೆ ತೆಗೆದುಕೊಳ್ಳಲಾಗಿದೆ. 'ಕನ್ನಡ

ಮಾತು ತಲೆ ಎತ್ತು ಬಗೆ' ಭಾಷಣವು ಡಿಸೆಂಬರ್ ೧೯೧೧ರಲ್ಲಿ ಧಾರಾವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ವಾರ್ಷಿಕ ಸಭೆಯಲ್ಲಿ ಮಾಡಿದ್ದು. 'ಅಧ್ಯಕ್ಷರೇ. ಆರ್ಯರೇ' ಎಂದು ಪ್ರಾರಂಭವಾಗುತ್ತದೆ. "ದೇಶಕ್ಕೆಲ್ಲ ಚಕ್ರವರ್ತಿ ಒಬ್ಬನಾದನು; ದೇಶವೆಲ್ಲ ಕಬ್ಬಿಣದಿಂದ ಕಟ್ಟಿ ಬಿಗಿದಂತೆ ಏಕವಾಯಿತು; ಕೆಂಪು ಜನರ ವಿದ್ಯೆ, ವ್ಯಾಪಾರ, ಕೈಗಾರಿಕೆ ಇವುಗಳ ಉರುಬಿನಲ್ಲಿ ನಾವು ಮೂಲೆಗೆ ಬೀಳುತ್ತಿದ್ದೇವೆ....ಯಾವ ಬೇಧಗಳಿಂದ ಆರ್ಯ ಭೂಮಿ ಯಲ್ಲಿ ಒಗ್ಗಟ್ಟು ಹುಟ್ಟಲಿಲ್ಲವೋ, ಆಯಾ ಬೇಧಗಳನ್ನೆಲ್ಲ ಸುಟ್ಟು ಬೂದಿ ಮಾಡಿ ನೀರಿನಲ್ಲಿ ಕಲಸಿ ಬಿಡಬೇಕು. ಆಚಾರ, ಜಾತಿ, ಮತ ಎಲ್ಲ ಒಂದೇ ಆಗುವಂತೆ ಪ್ರಯತ್ನ ಮಾಡುವಂತೆ ಹೋಗಬೇಕು...

"...ಇಲ್ಲಿ (ಇಂಡಿಯಾ) ಮುಖ್ಯವಾಗಿ ಎರಡು ಬುಡಕಟ್ಟಿಗೆ ಸೇರಿದ ಆರ್ಯ ಶೂದ್ರರೇ ಇದ್ದರೂ ಅವರ ಎರಡು ಭಾಷೆಗಳು ಒಡೆದು ಈಗ ಮೇಲಗಿರತಕ್ಕವು ಹತ್ತು ಹದಿನೈದಿರುತ್ತವೆ-ಸಾಮಾನ್ಯವಾದ ರಾಜಕಾರ್ಯಕ್ಕೂ, ಇಂಡಿಯಾ ರಾಜ್ಯಕ್ಕೆಲ್ಲ ಸಂಬಂಧಪಟ್ಟ ವಿಷಯಗಳಿಗೂ, ಬೇರೆ ಬೇರೆ ಪ್ರಾಂತ್ಯಗಳಿಂದ ಜನ ಕಲೆಯ ತಕ್ಕ ಸಭೆಗಳಿಗೂ, ಬಳಸುವುದಕ್ಕೆ ಇಂಗ್ಲೀಷ್ ಭಾಷೆಯನ್ನು ಇಟ್ಟುಕೊಳ್ಳುವುದು; ಪ್ರಾಂತ್ಯಗಳಲ್ಲಿ ಹುಡುಗರೂ, ಹೆಂಗಸರೂ, ಒಕ್ಕಲಿಗರೂ ಎಲ್ಲರ ವಿದ್ಯಾಭಿವೃದ್ಧಿಗಾಗಿ ಆಯಾ ಜನರ ದೇಶ ಭಾಷೆಯನ್ನಿಟ್ಟುಕೊಳ್ಳುವುದು.... ನಮ್ಮ ಭಾಷೆಯನ್ನು ನಾವು ಎತ್ತದೇ ಹೋದರೆ ಎತ್ತುವವರು ಯಾರು?.... ನಮ್ಮ ಮಾತೇನು ನಿನ್ನೆ ಮೊನ್ನೆಯ ಕಾಡು ಮಾತಲ್ಲ. ನಮ್ಮ ಕಾವ್ಯ ಮಾಲೆ ಓದು ಬರಹ ಬರದ ವಡ್ಡರು ಹೇಳುವ ಕುರುಕು ಪದವು ಅಲ್ಲ. ಆರ್ಯರು ಇಂಡಿಯಾಕ್ಕೆ ಬರದಿರುವುದಕ್ಕೆ ಮೊದಲೇ ಇಲ್ಲಿ ದ್ರಾವಿಡ ಭಾಷೆ ನೆಲೆಸಿತ್ತು. ಕನ್ನಡದಲ್ಲಿ ಸುಮಾರು ಐದು ಆರನೇ ಶತಮಾನದಿಂದಲೂ ಕಾವ್ಯಗಳನ್ನು ಬರೆದಿದ್ದಾರೆಂದು ಸ್ಪಷ್ಟವಾಗಿದೆ. ಕನ್ನಡ ಭಾಷೆ ಪ್ರಬಲವಾಗುವುದಕ್ಕೆ ಸಂಸ್ಕೃತವೇ ಆಧಾರವೆಂದು ಎಲ್ಲರೂ ಬಲ್ಲ ವಿಷಯವಾಗಿದೆ.....

"ಆರ್ಯರು ದಕ್ಷಿಣಕ್ಕೆ ಬಂದು ದ್ರಾವಿಡರಲ್ಲಿ ಉತ್ತಮವಾದ ನಾಗರಿಕತೆಯನ್ನು ಹರಡಿದರು; ಆ ನಾಗರಿಕತೆಗೆ ತಕ್ಕ ಭಾವಗಳಿಗೆ ಶಬ್ದವನ್ನು ಹೊಂದಿಸಿಕೊಟ್ಟು, ಭಾಷೆಯನ್ನು ಪುಷ್ಟಿ ಮಾಡಿದರು; ಬರಹವನ್ನು ಕಲಿಸಿಕೊಟ್ಟರು; ಕಾವ್ಯ ಸ್ವರೂಪವನ್ನು ತೋರಿಸಿಕೊಟ್ಟರು; ಆ ಕಾವ್ಯಕ್ಕೆ ಬೇಕಾದ ವೃತ್ತಗಳನ್ನು ಅಲಂಕಾರ, ವ್ಯಾಕರಣಗನ್ನು ಪುರಾಣ, ಇತಿಹಾಸಗಳನ್ನು ಒದಗಿಸಿಕೊಟ್ಟರು... ಸಾಮಾನ್ಯ ಜನರೆಂದರೆ ದಕ್ಷಿಣದಲ್ಲಿ ಆರ್ಯರಲ್ಲ, ಶೂದ್ರರು; ಶೂದ್ರ ರನ್ನು ಕಂಡರೆ ಆರ್ಯರಲ್ಲಿ ತಿರಸ್ಕಾರ ಈಗಲೂ ಇದೆ. ಹಿಂದೆ ಹೆಚ್ಚಿದ್ದಿರಬೇಕು. ಈ ಶೂದ್ರರು ತಮ್ಮನ್ನು ಗೌರವದಿಂದ ಕಾಣುವುದಕ್ಕೆ ಎಷ್ಟು ಬೇಕೋ ಅಷ್ಟು ಅವರಿಗೆ ಉಪದೇಶ ಮಾಡಿ ದರು; ಮಿಕ್ಕಿದ್ದನ್ನೆಲ್ಲ ತಮ್ಮಲ್ಲೇ ಬಚ್ಚಿಟ್ಟಕೊಂಡರು..... ಆದರೆ ಪಾಂಡಿತ್ಯ ಅತಿವೃಷ್ಟಿಯಾಗಿ ಬ್ರಾಹ್ಮಣ ಜೈನರ ಕಾವ್ಯಗಳು ನೆರೆತುಕೊಂಡವು; ಲಿಂಗಾಯತ ಕಾವ್ಯಗಳು ಪಾಂಡಿತ್ಯ ಸಾಲದೆ ಬಂದು ಕಣ್ಣಿಗೆ ಒಣ ಬರಲಾಗಿ ನಿಂತುಕೊಂಡಿವೆ. ಈಚೀಚೆಗಂತೂ ಯಕ್ಷಗಾನ, ದೊಂಬಿ ದಾಸರ ಪದ, ಶುಕಸಪ್ತತಿ, ಹಲ್ಲಿಯ ಶಕುನ ಇವೇ ಜನಗಳಿಗೆ ಮಹಾಕಾವ್ಯಗಳು! ಭಾಷೆಯ

ವಿಚಾರದಲ್ಲಿ, ಹೊಸಗನ್ನಡವನ್ನೇ ಬರೆಯಬೇಕು. ಗ್ರಾಮ್ಯವನ್ನು ಬಿಟ್ಟು ವಿದ್ಯಾವಂತರೂ ಉತ್ತಮ ಜಾತಿಯವರು ಆಡಳಿತಕ್ಕೆ ಸ್ಫುಟವಾದ ಕನ್ನಡವನ್ನು ಗ್ರಂಥ ಭಾಷೆಯಾಗಿ ತಿರುಗಿಸಿಬಿಟ್ಟರೆ ಅಚ್ಚು ಹಾಕುವುದರಿಂದಲೂ ಮಕ್ಕಳಿಂದ ಕಲಿಸುವುದರಿಂದಲೂ ಇದೇ ನೆಲೆಯಾಗಿ ನಿಂತು ಎತ್ತಲೂ ಹರಡುತ್ತದೆ. ಮುಂದಿನ ಗ್ರಂಥಗಳಿಗೆಲ್ಲಾ ಒಂದೇ ಸಮವಾದ ಭಾಷೆ ಸಿಕ್ಕುತ್ತದೆ... ಹಿಂದೆ ಆರ್ಯ ಭೂಮಿಯಲ್ಲಿದ್ದ ಋಷಿಗಳು ವೀರರೂ ಜನ್ಮವೆತ್ತುವರು; ಎತ್ತಿ ರಾಜ್ಯದಲ್ಲಿ ಧರ್ಮವನ್ನು ಶಾಂತಿಯನ್ನು ನೆಲೆಗೊಳಿಸುವರು. ಏಕೆಂದರೆ ಲೋಕವೆಲ್ಲ ಬಗ್ಗುವುದು ಶ್ರೇಷ್ಠವಾದ ಬುದ್ಧಿಗೆ ತಾನೆ. ಆ ಬುದ್ಧಿ ತಾವರೆಯ ಹಾಗೆ ಅರಳುವುದು ಕಾವ್ಯ ರತ್ನದ ಬೆಳಕಿನಿಂದಲೇ."[೨೨]

ಈ ಭಾಷಣವನ್ನು ಒಟ್ಟಾರೆ ಗಮನಿಸಿದ್ದಲ್ಲಿ ಅವರು ಎಂಥ ಕನ್ನಡ ಭಾಷೆಯನ್ನು ಯಾರಿಗೆ ಕಟ್ಟಿಕೊಡುತ್ತಿದ್ದಾರೆ ಎಂಬುದು ಗೊತ್ತಾಗುತ್ತದೆ. ಅಂದರೆ ಶಿಕ್ಷಿತ ಬ್ರಾಹ್ಮಣರಿಗೆ ಆರ್ಯ ಜನಾಂಗೀಯ ಸಿದ್ಧಾಂತವನ್ನು ಕಟ್ಟಿಕೊಟ್ಟು, ಉಳಿದವರಿಗೆ ಶೂದ್ರತ್ವವನ್ನು ಕಟ್ಟಿಕೊಡುತ್ತಾರೆ. ಹೀಗೆ ಕಟ್ಟಿ ಕೊಡುವಾಗ ಅವರ ತಾತ್ತ್ವಿಕ ಧೋರಣೆಗಳು ವೇದಾಂತ ಪ್ರಣೀತ ಅದ್ವೈತವೇ ಆಗಿರುತ್ತದೆ. ಈ ಧೋರಣೆಗಳನ್ನು ಕನ್ನಡದಲ್ಲಿ ಅಸ್ತಿತ್ವಕ್ಕೆ ಹೇಗೆ ತಂದರು ಎನ್ನುವುದಕ್ಕೆ ಮೇಲಿನ ಮಾತುಗಳಲ್ಲೇ ಉತ್ತರವಿದೆ. ಒಟ್ಟಾರೆಯಾಗಿ ಹೇಳುವುದಾದರೆ ಈ ಕನ್ನಡವನ್ನು ಸಂಘಟಿಸುವ ರೂಪುರೇಷಗಳು ಅವರಿಗೆ ದೊರೆತದ್ದು, ವಸಾಹತುಶಾಹಿ-ಮೈಸೂರು ಮಹಾರಾಜರ ಕೃಪಾಶಯದಲ್ಲಿ. ಅಲ್ಲಿದ್ದುಕೊಂಡು, ಆಗಷ್ಟೇ ಸಾರ್ವಜನಿಕವಾಗಿ, ಸೆಕ್ಯುಲರ್ ನೆಲೆಯಲ್ಲಿ ತಲೆಯೆತ್ತುತ್ತಿದ್ದ, ನೌಕರಶಾಹಿಗೆ ಬೇಕಾದ ಕನ್ನಡ ಭಾಷೆಯನ್ನು ಮತ್ತು ಅದರ ಅಸ್ತಿತ್ವಕ್ಕೆ ಬೇಕಾದ ಸಾಂಸ್ಕೃತಿಕ ನೆಲೆಯನ್ನು ಸಂಘಟಿಸುವುದು ಎದ್ದು ಕಾಣುವ ಅಂಶವಾಗಿದೆ. ಹೀಗೆ ಮಾಡುವಾಗ ಯಾವುದೇ ಮುಚ್ಚು ಮರೆಯಿಲ್ಲದೆ ಓರಿಯಂಟಲಿಸ್ಟರು ಸಂಘಟಿಸಿದ, ಬ್ರಾಹ್ಮಣ-ಆರ್ಯ ಪರಂಪರೆಯನ್ನೇ ಶ್ರೇಷ್ಠವೆಂದು, ಉಳಿದ ಜನರೆಲ್ಲ ಶೂದ್ರರಾಗಿ, ಒಂದು ವಿಧದ ಸಂಸ್ಕೃತೀಕರಣಕ್ಕೆ ಒಳಗಾಗುವುದನ್ನು ಗಮನಿಸಬೇಕಾಗುತ್ತದೆ. ಇದಕ್ಕೆ ಬೇಕಾದ ಸಾಂಸ್ಥಿಕ ರೂಪಗಳು ತಕ್ಷಣವೇ ತಲೆ ಎತ್ತುವುದನ್ನು ನಾವು ನೋಡಬಹುದು. ಕನ್ನಡ ಸಾಹಿತ್ಯ ಪರಿಷತ್, ಕರ್ನಾಟಕ ವಿದ್ಯಾವರ್ಧಕ ಸಂಘ, ಇತರೇ ಸಾಹಿತ್ಯಿಕ ಸಂಘಗಳು, ಶಿಕ್ಷಿತ ಮನಸ್ಸುಗಳನ್ನು ಒಂದೆಡೆ ಸಂಘಟಿಸುವುದನ್ನು ಕಾಣುತ್ತೇವೆ. ಒಂದು ವಿಧದಲ್ಲಿ ಮಧ್ಯಮ ವರ್ಗದ ಬದುಕಿಗೆ ಬೇಕಾದ ಅಡಿಪಾಯ ಅವರ ಬರವಣಿಗೆಗಳಲ್ಲಿ ಎದ್ದು ಕಾಣುತ್ತದೆ. ಆ ಮೂಲಕ ಭಾಷೆ, ಜನಗಳ ಬದುಕಿನ ಕ್ರಮ ಮತ್ತು ಭೌಗೋಳಿಕ ಪ್ರದೇಶಗಳು ಏಕೀಕರಣಗೊಂಡು, ಕೇಂದ್ರೀಕರಣದತ್ತ ಸಾಗುವುದನ್ನು ಇಲ್ಲಿ ಗಮನಿಸಬೇಕಾಗುತ್ತದೆ.

ಅವರ ಇನ್ನೊಂದು ಭಾಷಣ: ಕನ್ನಡದ ಪುನರುಜ್ಜೀವನ[೨೩] ಯುರೋಪಿನ 'ಎನ್ಲೈಟನ್ ಮೆಂಟ್' ಧೋರಣೆಗಳಲ್ಲೇ ರೂಪುಗೊಂಡಿರುವುದಾಗಿದೆ :

"ಅದು ಬರಿಯ ಪುನರುತ್ಥಾನವಲ್ಲ, ಜೀರ್ಣೋದ್ಧಾರವಲ್ಲ, ಅನುಸರಣವಲ್ಲ, ಅನುಕರಣವಲ್ಲ. ಪುನರುಜ್ಜೀವನ. ಏನೋ ಒಂದು ಬಗೆಯ ಧೈರ್ಯ ಕೂಡಿದ ವಿಚಾರ;

ಹೊಸ ಹೊಸ ನಿರ್ಮಾಣ; ಮರುಹುಟ್ಟು; ಆಳವಾದ ಸಮನ್ವಯ-ಹೊಸದು, ಹಳದು, ನಮ್ಮದು, ಎರರದು ಎಲ್ಲವನ್ನೂ ಹೊದಿಕೆ ಮಾಡುವುದು."[೨೪]

"ಮಾತೃಭಾಷೆ, ದೇಶಭಾಷೆ - ದೇಶ ಭಾಷೆಯೆಂದರೆ ಏನೆಂಬುದು ಎಲ್ಲರಿಗೂ ತಿಳಿದೇ ಇದೆ. ಇಂಗ್ಲೀಷ್‌ನಲ್ಲಿ ಇದನ್ನು "Varnacular, Mother Tongue" ಎಂದು ಕರೆಯುತ್ತಾರೆ, "Varnacular" ಎಂದರೆ ಮನೆಯಲ್ಲಿ, ನಾಡಿನಲ್ಲಿ, ಆಡತಕ್ಕ ಮಾತು ಎಂದರ್ಥ: ಇದು ನಾಡ ನುಡಿ, ದೇಶ ಭಾಷೆ. 'Mother Tounge' ಎಂದರೆ ತಾಯಿ ಆಡುವ ಭಾಷೆ, ತಾಯಿ ಯಿಂದ ಕಲಿತ ಭಾಷೆ, ತಾಯಿ ನುಡಿ, ಮಾತೃಭಾಷೆ. ದೇಶದಲ್ಲಿ ಒಂದೇ ಭಾಷೆಯಿದ್ದರೆ, ಅದು ಮಾತೃಭಾಷೆಯೂ ಹೌದು. ದೇಶಭಾಷೆಯು ಹೌದು.... ಇಂಡಿಯಾಕ್ಕೆ ಹೀಗೆ ಒಂದು ದೇಶ ಭಾಷೆ ಬರಲಿಲ್ಲ. ರಾಜರ ಆಶ್ರಯದಿಂದಲೂ ಮತಾಚಾರಗಳ ಭಕ್ತಿಯಿಂದಲೂ ಸಂಸ್ಕೃತ ಭಾಷೆ ವಿದ್ವನ್ ಮಂಡಲಿಯಲ್ಲಿ ರಾಷ್ಟ್ರಭಾಷೆಯಾಗಿ ಗೌರವ ಸ್ಥಾನಕ್ಕೆ ಏರಿತು. ಬಹುಕಾಲ ಭಾರತ ಭೂಮಿಯನ್ನು ಒಂದುಗೂಡಿಸಿತು."[೨೫] ಈ ಮಾತುಗಳನ್ನು ಗಮನಿಸುತ್ತಾ ಹೋದರೆ 'Burden of the White man' ಎನ್ನುವುದು ಬಿ.ಎಂ.ಶ್ರೀಯವರ ಹೊಣೆಯಾಗಿ, ಕನ್ನಡ ಭಾಷೆಯನ್ನು ಸಂಘಟಿಸುವುದೆಂದರೆ, ದೇಶ ಭಾಷೆ ಮಾತೃಭಾಷೆಯಾಗಿ ನಾಗರಿಕತೆಯತ್ತ ಸಾಗುವುದು ಎಂದಾಗುತ್ತದೆ. ಇದೇ ಆಧುನಿಕತೆಯ ಒಂದು ರೂಪವಾಗಿ ಮುಂದೆ ಈ ಮಾತೃಭಾಷೆಯನ್ನು ಉಳಿಸಿ, ಬೆಳೆಸಿ, ಅಭಿವೃದ್ಧಿಗೊಳಿಸುವುದು ಬ್ರಾಹ್ಮರ ಜವಾಬ್ದಾರಿ ಯಾಗುತ್ತದೆ. ಇಲ್ಲಿ ಕನ್ನಡ ಭಾಷೆಯನ್ನು ತಾಯಿಯನ್ನಾಗಿ ಸಂಘಟಿಸುವುದನ್ನು ಗಮನಿಸ ಬೇಕಾಗುತ್ತದೆ. ವಸಾಹತುಶಾಹಿಯ ತರ್ಕ ಅಂತಿಮವಾಗಿ ಒಪ್ಪಿ, ಮೇಲ್ಮುಖ ಚಲನೆಯಲ್ಲಿರು ವವರೆಲ್ಲಾ, ತಮ್ಮ ಸಾಂಸ್ಕೃತಿಕ ಐಡೆಂಟಿಟಿಯನ್ನು ಸ್ಥಾಪಿಸುವುದು ಎಂದಾಗುತ್ತದೆ. ಹೀಗೆ ಸ್ಥಾಪಿಸುವಾಗ ಎದುರಾಗುವ ಬಹುಸಂಖ್ಯಾತ ದುಡಿಯುವ ಜನರನ್ನು 'ದಡ್ಡರೆಂದು' ಗ್ರಾಮ್ಯರೆಂದು, ಶೂದ್ರರೆಂದು ಅವರನ್ನು ಸಂಘಟಿಸಿ, ಅವರ ಅಸ್ತಿತ್ವವನ್ನು ನಾಶ ಮಾಡಿ, ಕೊನೆಗೆ ಅವರನ್ನು ಕೇವಲ ದೈಹಿಕ ವ್ಯಕ್ತಿಗಳನ್ನಾಗಿ ಮಾರ್ಪಡಿಸಿ, ಶ್ರಮ ಸಂಸ್ಕೃತಿಯ ಹಕ್ಕುದಾರರನ್ನಾಗಿಸುವುದು ನಡೆದಿರುವ ಪ್ರಕ್ರಿಯೆಕು. ಆದ್ದರಿಂದ ಬಿ.ಎಂ.ಶ್ರೀಯವರು ಆ ಪ್ರಕ್ರಿಯೆಯ ಮಂಚೂಣಿಯಲ್ಲಿದ್ದು, ಅವರ ನಂತರ ತಂಡೋಪ ತಂಡವಾಗಿ ಅವರ ಹಿಂಬಾಲಕರು ಉದಯಿಸುವುದನ್ನು ಕಾಣುತ್ತೇವೆ.

ಇಂಥ ಸಂಘಟಿತವಾದ ಭಾಷೆಗೆ ಒಂದು ಭೌಗೋಳಿಕತೆಯನ್ನು ನೀಡುವ ಪರಿ ಹೀಗಿದೆ: ಬಿ.ಎಂ.ಶ್ರೀಯವರು ೧೯೩೭ರಲ್ಲಿ ಕನ್ನಡ ಹಬ್ಬದ ಬಗ್ಗೆ ಮಾತನಾಡುವಾಗ ಅವರು ಮಾಡಿದುದನ್ನು ಗಮನಿಸಬೇಕು - ಬಿ.ಎಂ.ಶ್ರೀಕಂಠಯ್ಯನವರು ತಮಗರ್ಪಿಸಿದ ಹಾರವನ್ನು ಹಾಗೆಯೇ ಕನ್ನಡ ನಾಡಿನ ಭೂಪಟಕ್ಕೆ ಹಾಕಿ ಮುಂದೆ ಬಂದು, ಈ ರೀತಿ ಭಾಷಣ ಮಾಡಿದರು, 'ಕನ್ನಡ ನಾಡಿನ ಭೂಪಟವನ್ನು ನಿರ್ದೇಶಿಸಿ ಈ ರೀತಿ ಮುಂದುವರಿಸಿದರು. 'ಇಗೋ ಈ ಕನ್ನಡ ತಾಯಿ![೨೬] ಎಷ್ಟು ಭಾವುಕರಾಗಿ ಕನ್ನಡನಾಡಿನ ನಕಾಶೆಯನ್ನು ಹೆಣ್ಣಾಗಿ ಸಂಘಟಿಸುತ್ತಾರೆ.

ವಸಾಹತುಶಾಹಿ ಯುರೋಪಿಯನ್ನರು ಹೇಗೆ Vernacular ಭಾಷಾ-ಭೌಗೋಳಿಕ ನಕಾಶೆಯನ್ನು ಸಿದ್ಧಪಡಿಸಿ, ಹಂತ ಹಂತವಾಗಿ, ಆ ನೆಲ-ಜಲ ಸಂಪನ್ಮೂಲಗಳೆಲ್ಲವನ್ನೂ ತಮ್ಮ ಭೋಗ್ಯಕ್ಕೆ ಹಾಕಿಕೊಂಡರೋ, ಅದರ ಪುನರುತ್ಥಾನ ಬಿ.ಎಂ.ಶ್ರೀಯವರ ಮೂಲಕ ಆಗುತ್ತಿದೆಯೇನೋ ಎನಿಸುತ್ತದೆ. ೨೦ನೇ ಶತಮಾನದ ಆದಿಭಾಗದಲ್ಲಿ ಬ್ರಿಟಿಷ್ ಇಂಡಿಯಾದಲ್ಲಿ ರಾಷ್ಟ್ರೀಯತೆಯ ಕಾವು ಏಳುತ್ತಿತ್ತು. ಈ ರಾಷ್ಟ್ರೀಯತೆಯ ಪ್ರಭಾವ ಕನ್ನಡ ಭಾಷೆ-ನಾಡಿನ ಮೇಲೂ ಬಿದ್ದು, ಏಕೀಕರಣದತ್ತ ತನ್ನ ಮೊದಲ ಹೆಜ್ಜೆಗಳನ್ನಿಡುವುದು ಇಲ್ಲಿ ಕಾಣಬಹುದಾಗಿದೆ. ಹೀಗೆ ಅವರ ಉಳಿದ ಲೇಖನಗಳೂ ಸಹ ಇದೇ ರೀತಿಯ ಪ್ರಕ್ರಿಯೆಯನ್ನು ತೀವ್ರತರವಾಗಿ ಕಟ್ಟಿಕೊಡುವುದನ್ನು ನಾವು ನೋಡುತ್ತೇವೆ. ಹೀಗೆ ಸಂಘಟಿತವಾದ ಭಾಷೆಯನ್ನು ಕಲಿತು ಮಾತನಾಡುವವರಿಗೆ ಒಳ್ಳೆಯ ಸಾಹಿತ್ಯ ಯಾವುದು ಎಂಬುದನ್ನು ಮಹಾಪೋಷಕರಂತೆ ಬಿ.ಎಂ.ಶ್ರೀ. ಸೂಚಿಸುತ್ತಾರೆ. ಇದೇ 'Patronizing' ನಡಾವಳಿಯನ್ನು ಕಂಪನಿ ಅಧಿಕಾರಿಗಳಲ್ಲೂ ಕಾಣುತ್ತೇವೆ.

ಇದನ್ನು ಮಾಡುವಾಗ, ಬ್ರಿಟಿಷರು ಮತ್ತು ಯುರೋಪಿಯನ್ ಮಿಷನರಿಗಳು ತಮ್ಮ ವಸಾಹತು ಜನಗಳಲ್ಲಿ ಜನಾಂಗವಾದಿ ಥಿಯರಿಗಳನ್ನು ಅಂದಿನ ಸಿದ್ಧ ಶಿಸ್ತುಗಳಾದ ಮಾನವಶಾಸ್ತ್ರ, ಡಾರ್ವಿನ್ನನ ವಿಕಾಸವಾದ, ಸಮಾಜಶಾಸ್ತ್ರ, ಕುಲಶಾಸ್ತ್ರ ಮುಂತಾದವುಗಳ ಮೂಲಕ ಕಟ್ಟಿ ಕೊಡಲಾರಂಭಿಸುತ್ತಾರೆ. ಇಂಥ ಜನಾಂಗವಾದಿ ಥಿಯರಿಗಳಲ್ಲಿ ಇಂಡಿಯಾಕ್ಕೆ ಸಂಬಂಧಿಸಿದಂತೆ ಪ್ರಧಾನವಾದುದೆಂದರೆ, ಆರ್ಯ ಮತ್ತು ದ್ರಾವಿಡ ಜನಾಂಗೀಯ ಸಿದ್ಧಾಂತಗಳು. ಇದೇ ಜನಾಂಗೀಯ ಸಿದ್ಧಾಂತಗಳು ಬಿ.ಎಂ.ಶ್ರೀಯವರಲ್ಲೂ ಕಾಣಿಸಿಕೊಳ್ಳುತ್ತವೆ. ಆದರೆ ತಮ್ಮ ಬ್ರಾಹ್ಮಿಣಿಕಲ್ ಜಾಣ್ಮೆಯಿಂದ ಎರಡನ್ನೂ ಮೇಳೈಸಿಕೊಂಡು 'ಕನ್ನಡ ಜನಾಂಗ'ವನ್ನು ಸೆಕ್ಯುಲರ್ ನೆಲೆಯಲ್ಲಿ ಕಟ್ಟಿ, ಅದರೊಳಗಿನ ಅಸಮಾನ ಅಧಿಕಾರ ಸಂಬಂಧಗಳನ್ನು ಮುಚ್ಚಿ ಹಾಕುತ್ತಾರೆ. ಇದನ್ನೆ ಮುಂದೆ ಇಂಗ್ಲೀಷ್ ಕಲಿತ ಕನ್ನಡ ಸಾಹಿತಿಗಳು ಮಾಡಿದ್ದು.

ಆದ್ದರಿಂದ, ಇಲ್ಲಿ ಯಾರು ಮೇಲ್ಮುಖ ಚಲನೆಯಲ್ಲಿ ತೊಡಗುತ್ತಾರೋ. ಅವರು ತಮಗೆ ಬೇಕಾದ ಸಾಂಸ್ಕೃತಿಕ ಐಡೆಂಟಿಟಿಯನ್ನು ಸಂಘಟಿಸಿಕೊಂಡು ಇವತ್ತಿನ ಶ್ರೇಣೀಕೃತ ವ್ಯವಸ್ಥೆಯಲ್ಲಿ ತಮ್ಮ ಸ್ಥಾನವನ್ನು ಕಾಯ್ದುಕೊಳ್ಳುವ ಮತ್ತು ಅದನ್ನು ಮತ್ತಷ್ಟು ಉತ್ತಮಪಡಿಸಿಕೊಳ್ಳುವ ಕ್ರಿಯೆಯಲ್ಲಿ ತೊಡಗುತ್ತಾರೆ. ಇದೇ ಪ್ರಕ್ರಿಯೆಯನ್ನು ನಾವು ಕಳೆದ ೧೫೦ ವರ್ಷಗಳಿಂದಲೂ ಈ ನೆಲದಲ್ಲಿ ಕಾಣುತ್ತಿದ್ದೇವೆ. ಇಲ್ಲಿ ತಲೆದೋರಿದ ಎಲ್ಲಾ ಚಳವಳಿಗಳೂ ಸಹ ಶ್ರೇಣೀಕೃತ ವ್ಯವಸ್ಥೆಯಲ್ಲಿ ಸ್ಥಿರೀಕರಣಗೊಳ್ಳುವುದನ್ನು ಅಂದರೆ ವೈಯಕ್ತಿಕವಾಗಿ ಮಧ್ಯಮ ವರ್ಗವಾಗಿ ಮಾರ್ಪಡುವುದನ್ನೇ ಬದಲಾವಣೆಯೆಂದು ನಂಬಿಸುತ್ತಲೇ ಬರುತ್ತಿದ್ದಾರೆ. ಈ ವರ್ಗದ ಮೌಲ್ಯಗಳೇ ಅಂತಿಮವಾಗಿ ಪಬ್ಲಿಕ್ ಸ್ಪೇಸ್‌ನ್ನು ನಿರ್ಧರಿಸುತ್ತಾ ಬರುತ್ತವೆ. ಈ ಪ್ರಕ್ರಿಯೆಯಲ್ಲಿ 'ವ್ಯಕ್ತಿ' ಮತ್ತು 'ಸಮುದಾಯ' ಪರಿಕಲ್ಪನೆಗಳು ಜಾರಿಗೊಂಡು, ಮೇಲ್ಮುಖ ಚಲನೆಯಿಂದ ತಪ್ಪಿಸಲು ತಳಸ್ತರದ ವ್ಯಕ್ತಿಗಳಿಗೆ ಸಾಮುದಾಯಿಕ

ಐಡೆಂಟಿಟಿಯನ್ನು ಕಟ್ಟಿಕೊಡಲಾಗುತ್ತದೆ. ಇದು ಓರಿಯಂಟಲಿಸ್ಟ್ ಲಿಬರಲಿಸಂನ ಮುಂದುವರೆದ ಭಾಗವಾಗಿದೆ ಮತ್ತು ಇಂದು ಅಂಥ ಐಡೆಂಟಿಟಿಯಲ್ಲಿ ಜನ ಜೀವಿಸುತ್ತಿದ್ದಾರೆಂದು ದೀಪಕರ್ ಗುಪ್ತ ತಮ್ಮ ಕೃತಿ 'Mistaken Modernity'[೨೨] ಯಲ್ಲಿ ಹೇಳುತ್ತಾರೆ. ಆದ್ದರಿಂದ, ಈ ಎರಡು ಮೇಲಿನ ಪ್ರಕ್ರಿಯೆಗಳು ಕನ್ನಡ ಭಾಷೆಯನ್ನು ಮತ್ತು ಆ ಭಾಷೆಯ ಜನಾಂಗವನ್ನು ಸಂಘಟಿಸುವಲ್ಲಿ ನಡೆದಿರುವ ಮುಖ್ಯ ಪ್ರಕ್ರಿಯೆಯಾಗಿದ್ದು, ಅದು ಅಂತಿಮವಾಗಿ ಆಧುನಿಕತೆ ಎಂಬ ಐಡಿಯಾಲಜಿಯಲ್ಲಿ ಕರಗಿ ಹೋಗುವುದನ್ನು ತಪ್ಪಿಸಲು, ಅದಕ್ಕೆ ವಿರೋಧವಾಗಿ ಪರಂಪರೆಯನ್ನು ಬಡಿದೆಬ್ಬಿಸಲಾಗುತ್ತದೆ. ಇದೇ ಮುಂದೆ ಆ ಆಧುನಿಕತೆಯ ಅನುಕೂಲಗಳಿಗಾಗಿ ಜಾತಿ, ವರ್ಣ, ವರ್ಗ ಮತ್ತು ಲಿಂಗ ಸಂಘರ್ಷವಾಗಿ ಮಾರ್ಪಡುತ್ತದೆ.

ಈ ಮೇಲಿನ ಪ್ರಕ್ರಿಯೆಯಲ್ಲಿ ಗಮನಿಸಬೇಕಾದ ಮತ್ತೊಂದು ಸಂಗತಿಯೆಂದರೆ ವಸಾಹತುಶಾಹಿಯೊಳಗೆ 'ಬಿಳಿಗಂಡಸು' ಒಬ್ಬ ವ್ಯಕ್ತಿಯಾದರೆ, ವಸಾಹತು ಕೇರಿಯ ಗಂಡಸು ಸಮುದಾಯವಾಗಿ ಸಂಘಟಿತವಾಗುತ್ತಾನೆ. ಅನಂತರದಲ್ಲಿ ಈ ಸಮುದಾಯದ ಗಂಡಸು ವ್ಯಕ್ತಿಯಾಗಿ ತನ್ನ ಸಮುದಾಯವನ್ನು ಪ್ರತಿನಿಧೀಕರಿಸಲಾರಂಭಿಸುತ್ತಾನೆ. ಈ ಪ್ರಕ್ರಿಯೆ ಒಂದು ವಿಧದ ದ್ವಿದಳನ ಕ್ರಿಯೆಯಲ್ಲಿ ಅಂತ್ಯವಾಗುತ್ತದೆ. ಹಾಗಾಗಿ ಅಂತಿಮವಾಗಿ ಈ ದ್ವಿದಳನ ಪ್ರಕ್ರಿಯೆ 'ಸ್ವ' ಮತ್ತು 'ಅನ್ಯ'ಗಳ ಪಲ್ಲಟದಲ್ಲಿ ಮತ್ತೊಂದಾಗಲು ಪ್ರಯತ್ನಿಸುತ್ತಿರುತ್ತದೆ. ಆದರೆ ಇದು ಅನೇಕ ಬಾರಿ ಸಂದರ್ಭಕ್ಕೆ ಅನುಗುಣವಾಗಿ ತನ್ನ ಅಸ್ತಿತ್ವವನ್ನು ಸಂಘಟಿಸಿಕೊಳ್ಳುತ್ತಿರುತ್ತದೆ. ಆದರೆ ಇಲ್ಲಿ ವಸಾಹತುಶಾಹಿ ವ್ಯಕ್ತಿ ಬಹಳಷ್ಟು ಸಲ ತನ್ನನ್ನೇ ಕಳೆದುಕೊಳ್ಳುವ ಭಯದಿಂದಾಗಿ, ನಿಯಂತ್ರಣದ ಮೂಲಕ ತಾನು ಮೇಲು ಎಂಬ ಭ್ರಮೆಯಲ್ಲಿ ನರಳುತ್ತಿರುತ್ತಾನೆ. ಆದ್ದರಿಂದಲೇ ಆ ವ್ಯಕ್ತಿ ಮಟೀರಿಯಲಿಸ್ಟಿಕ್ ಆಗಿ, ಉಳಿದವರು ಆಧ್ಯಾತ್ಮಿಕವಾಗಿ ಕಾಣತೊಡಗುತ್ತಾರೆ. ಹೀಗೆ ಸಂಘಟಿತನಾದ ನೇಟಿವ್ ವ್ಯಕ್ತಿ ಮತ್ತು ಸಮುದಾಯಗಳು ಒಂದು ಪ್ರಬಲವಾದ ಜೀವನ ಕ್ರಮದೊಳಗೆ ತಮ್ಮ ಕರ್ತೃತ್ವವನ್ನು ಉಳಿಸಿಕೊಂಡೇ ಭಾಗವಹಿಸಲಾರಂಭಿಸುತ್ತಾರೆ. ಇದು ಆತನಿಗೆ ಅಥವಾ ಸಮುದಾಯಕ್ಕೆ ತಮ್ಮ ಭೂತದಿಂದ ಬಿಡಿಸಿಕೊಳ್ಳುವ ತಂತ್ರವೂ ಆಗುತ್ತಿರುತ್ತದೆ. ಈ ಕ್ರಿಯೆ ಸಾಧ್ಯವಾಗಿದ್ದು, ವಸಾಹತುಶಾಹಿಯು ರೂಪಿಸಿದ ಅಧಿಕಾರ ಮತ್ತು ಎಂಪಿರಿಕಲ್ ಜ್ಞಾನ ಮೀಮಾಂಸಾ ಪ್ರಕ್ರಿಯೆಯಿಂದಲೇ. ಅಲ್ಲದೆ, ರಣಜಿತ್ ಗುಹಾರವರು ಹೇಳುವಂತೆ 'ಇಂಗ್ಲೀಷ್ ಭಾಷೆಗೆ ಶಿಕ್ಷಣ ವ್ಯವಸ್ಥೆಯ ಒಳಗೆ ಅಧಿಕಾರದ ಸಂಕೇತವಾಗಿ ವಿಶೇಷ ಗೌರವ ಸಿಕ್ಕಿದ್ದು, ಆಳುವವರು ನೀಡಿದ ಬೆಂಬಲದಿಂದ ಮಾತ್ರವಲ್ಲ, ವಸಾಹತುಶಾಹಿಯ ಪ್ರಜೆಯು ಬಹುಮುಖಿ ವ್ಯಾಖ್ಯಾನಗಳ ಪರಿಣಾಮವಾಗಿ ಮತ್ತು ಅನೇಕ ಕ್ಷೇತ್ರಗಳಲ್ಲಿ ರೂಪುಗೊಳ್ಳುತ್ತಾನೆ/ಳೆ.' ಆದರೆ ಈ ಪ್ರಕ್ರಿಯೆಯು ಅಧಿಕಾರದೊಳಗಿನ ಸಂಬಂಧಗಳ ನೆಲೆಯನ್ನು ನಿರ್ಧರಿಸುವುದರಿಂದ, ಅಲ್ಲಿ ಬಲಿಯಾಗುವ ಸಂಗತಿಯೆಂದರೆ, ವಸಾಹತುಶಾಹಿಯೊಳಗಿನ ಪ್ರಜೆಯೊಬ್ಬನ/ಳನ್ನು ಹೇಗೆ ಪ್ರತಿನಿಧೀಕರಿಸಲಾಗುತ್ತಿದೆ ಎನ್ನುವುದು. ಅಲ್ಲಿ ಆ ವ್ಯಕ್ತಿಯ ಚಿತ್ರಣ ವಸ್ತುಸ್ಥಿತಿಗಿಂತ ಭಿನ್ನವಾದ

ಪ್ರತಿಮೆಯೊಂದು ಮೂಡಿಬರುತ್ತದೆ. ಈ ಪ್ರತಿಮೆಯೆ ನೇಟಿವ್ ನೆಲೆಯಲ್ಲಿ, ನೇಟಿವ್ ಅಧಿಕಾರ ಸಂಬಂಧಗಳಲ್ಲೇ ವರ್ಣಾಶ್ರಮವೆಂದು ಚಲನಶೀಲತೆಯನ್ನು ಪಡೆಯುವುದು. ಏಕೆಂದರೆ ವಸಾಹತೀಕರಣಕ್ಕೊಳಪಟ್ಟ ವ್ಯಕ್ತಿ ವಸಾಹತುಶಾಹಿಯ ದಬ್ಬಾಳಿಕೆಯನ್ನು ಸಮ್ಮತಿಸುವಂತೆಯೇ ಇರಬೇಕಾದ ಸ್ಥಿತಿ ರೂಪುಗೊಳ್ಳುತ್ತದೆ. ಆದ್ದರಿಂದಲೇ ಅದು 'ಬಲಿಪಶುತನ' ಎಂದು ಪರಿಗಣಿತವಾಗಿ, ಆ ಮೂಲಕವೇ ಪ್ರತಿರೋಧವನ್ನು ಸೂಚಿಸಲಾರಂಭಿಸುತ್ತದೆ. ಆದ್ದರಿಂದ ಇಲ್ಲಿ ನೇಟಿವ್ ಎನ್ನುವುದು ಪಶ್ಚಿಮವು ರೂಪಿಸಿಕೊಟ್ಟ ವಾಸ್ತವತೆ. ಇದು ಪ್ರತಿನಿಧೀಕರಣ ಮತ್ತು ಜ್ಞಾನಮೀಮಾಂಸಾ ಪರಿಕಲ್ಪನೆಗಳಲ್ಲಿ ವ್ಯಾಖ್ಯೆಗೊಳ್ಳುತ್ತಿರುತ್ತದೆ. ಇಲ್ಲಿ ವಾಸ್ತವತೆ ಎನ್ನುವುದು ನೇರವಾಗಿದ್ದು, ಸರಳ ಮತ್ತು ಸಮಸ್ಯಾರಹಿತವಾಗಿದ್ದು, ಅದೊಂದು ಕಂಡುಕೊಳ್ಳುವ ಸತ್ಯವಾಗಿರುತ್ತದೆ. ಆದ್ದರಿಂದ ಇಲ್ಲಿ ಜ್ಞಾನವೆನ್ನುವುದು ಈ ವಾಸ್ತವತೆಯನ್ನು ನೇಟಿವ್ ಆಗಿ ರೂಪಿಸುವ ಅಥವಾ ಪ್ರತಿನಿಧೀಕರಿಸುವ ಅಧಿಕಾರ ಎಂದಾಗುತ್ತದೆ. ಆಗ ಸ್ಫಟಿಕದಂತೆ ಪಾರದರ್ಶಕ ರೀತಿಯಲ್ಲಿ ವಾಸ್ತವ ಎನ್ನುವುದು ನಮ್ಮ ಗ್ರಹಿಕೆ ಬರುತ್ತದೆ. ಆದರೆ ಇಂಥ ಕೇಂದ್ರದಲ್ಲಿ ಜೆ. ಡೆರಿಡಾ ಹೇಳುವ 'ತರ್ಕ ಕೇಂದ್ರಿತ ತಾತ್ವಿಕತೆ' ಇರುತ್ತದೆ. ಈ ನೇಟಿವ್ ಸಂಘಟನೆಗೊಳ್ಳುವಾಗಿನ ವಸಾಹತುಶಾಹಿಯ ಕ್ರೌರ್ಯವನ್ನು ಇಲ್ಲಿ ನಾಜೂಕಾಗಿ ಮರೆಮಾಚಿಬಿಡಲಾಗುತ್ತದೆ. ಹಾಗೆಯೇ ವಸಾತುಶಾಹಿಗೆದುರಾದ ಸವಾಲು ಸಹ ಪರದೆಯ ಹಿಂದೆ ಸರಿದುಬಿಡುತ್ತದೆ. ಅಂದರೆ ವಸಾಹತುಶಾಹಿಗಿಂತ ಮೊದಲು ಇದ್ದ ವ್ಯಕ್ತಿ/ಸಮುದಾಯ, ವಸಾಹತಿನ ವ್ಯಕ್ತಿ/ಸಮುದಾಯ ಆಗಿ ಬದಲಾಗುವ ಪ್ರಕ್ರಿಯೆಯು ಬಹಳ ಹಿಂಸಾತ್ಮಕವೂ ಕ್ರೂರವೂ ಆಗಿರುತ್ತದೆ. ಇದಕ್ಕೆ ಪೂರಕವಾಗಿ ಬರುವಂಥದ್ದು ವಸಾಹತುಶಾಹಿ ಶಿಕ್ಷಣ.

ವೇದ ಪಠ್ಯಗಳ ಕ್ರೋಡೀಕರಣ ಮತ್ತು ಹಿಂದೂ ಕಾನೂನಿನ ಕ್ರೋಡೀಕರಣಗಳಿಂದಾಗಿ ಹಿಂದೂ ಎನ್ನುವ ಪರಿಕಲ್ಪಿತ ಅಸ್ತಿತ್ವಕ್ಕೆ ಸಮ್ಮತಿ ಮತ್ತು ಮಾನ್ಯತೆಯನ್ನು ೧೯ನೇ ಶತಮಾನದ ಕೊನೆಯ ಹೊತ್ತಿಗೆ ಪಡೆಯಲಾಗುತ್ತದೆ. ಇದಕ್ಕೆ ಪೂರಕವೆಂಬಂತೆ ಕುಲಶಾಸ್ತ್ರೀಯ ಸಮೀಕ್ಷೆಗಳು ವರ್ಣವ್ಯವಸ್ಥೆಗೆ ಒಂದು ಸಾಂಖ್ಯಿಕ ರೂಪವನ್ನು ನೀಡುತ್ತವೆ. ಇದನ್ನು ವಸಾಹತುಶಾಹಿಯ ದಶವಾರ್ಷಿಕ ಜನಗಣತಿಯ ಮೂಲಕ ವಸ್ತು ಸಂಗತಿಯನ್ನಾಗಿ ಸಂಘಟಿಸಲಾಗುತ್ತದೆ. ೧೮೭೨ರಲ್ಲಿ ಆರಂಭವಾಗುವ ಜನಗಣತಿಯಲ್ಲಿ ಕಾಸ್ಟನ್ನು ವರ್ಗೀಕರಣದ ಮಾಪನವಾಗಿ ಬಳಸಲು ಎಲ್ಲಾ ವಸಾಹತುಶಾಹಿ ಆಡಳಿತಗಾರರಲ್ಲಿ ಒಮ್ಮತ ಕಂಡುಬರುತ್ತದೆ. ಆದರೆ, ಕಾಸ್ಟ್ ಎಂದರೇನು ಎಂಬುದರ ಬಗ್ಗೆ ಅಂತಹ ಒಮ್ಮತವೇನು ಇರುವುದಿಲ್ಲ. ಅನೇಕ ವಸಾಹತುಶಾಹಿ ಕಮಿಷನರ್‌ಗಳಲ್ಲಿ ಚರ್ಚೆ ನಡೆದು, ಒಂದು ಲಕ್ಷಕ್ಕಿಂತ ಕಮ್ಮಿಯಿರುವ ಸಮುದಾಯವೊಂದನ್ನು ಕಾಸ್ಟ್ ಎಂದು ಪರಿಗಣಿಸಬೇಕೆ ಅಥವಾ ಬೇಡವೇ ಅಥವಾ ಸ್ಪಷ್ಟವಿಲ್ಲದ ಸಮುದಾಯಗಳನ್ನು ವರ್ಗೀಕರಿಸಿ ಸಂಘಟಿಸುವುದು ಹೇಗೆ ಎಂಬ ಗೊಂದಲ ಕಾಡುತ್ತದೆ. ನಿದರ್ಶನಕ್ಕೆ ೧೮೯೧ರಲ್ಲಿ ದಾಖಲಾದ ೨೩,೦೦,೦೦೦ ಹೆಸರುಗಳನ್ನು

ವರ್ಗೀಕರಿಸುವುದರಲ್ಲಿ ತೀವ್ರವಾದ ಸೆಣಸಾಟ ಕಾಣುತ್ತದೆ.[೨೮] ಅಲ್ಲದೆ, ಸಾಮಾಜಿಕ ಸ್ಥಾನಮಾನವನ್ನಾಧರಿಸಿ ಜನ ಸಮುದಾಯಗಳನ್ನು ವ್ಯವಸ್ಥಿತಗೊಳಿಸಬೇಕೆನ್ನುವ ನಿಲುವು ಎಚ್.ಎಚ್. ರೈಸ್ಲಿಯಿಂದ ೧೯೦೧ರ ಜನಗಣತಿಯಲ್ಲಿ ಸ್ಪಷ್ಟವಾಗುತ್ತದೆ.

ಹಾಗಾದರೆ ಜನಗಣತಿ ಯಾವಾಗ, ಏಕೆ ಆರಂಭವಾಯಿತು ಎಂಬ ಪ್ರಶ್ನೆಯನ್ನು ಇನ್ನು ಮುಂದೆ ಚರ್ಚೆಗೆ ತೆಗೆದುಕೊಳ್ಳಬಹುದು. ನಿಜವಾಗಿಯೂ ಈ ಜನಗಣತಿ ಬಂದದ್ದು ೧೮ನೇ ಶತಮಾನದ ಯೂರೋಪಿನಲ್ಲಿ. ಕೈಗಾರಿಕಾ ಕ್ರಾಂತಿಯ ಸಂದರ್ಭದಲ್ಲಿ ಇಂಗ್ಲೆಂಡಿನಲ್ಲಿ ರಾಷ್ಟ್ರೀಯ ಜನಗಣತಿ ೧೭೫೩ರಲ್ಲಿ ಆಗಬೇಕೆಂದಾಗ ಅದರ ದಮನಕ್ಕಾಗಿ ನೆಲೆಯನ್ನು ಕಂಡು ಅದನ್ನು ವಿರೋಧಿಸಲಾಯಿತು. ಆದರೆ ಅದು ಪುನಃ ಗಣನೆಗೆ ಬಂದದ್ದು ೧೭೯೮ರ ತೋಮಸ್ ಮಾಲ್ಥೋಸ್‌ನಿಂದಾಗಿ. ಆತನ ಪ್ರಕಾರ ಜನರನ್ನು ವ್ಯಕ್ತಿಗಳಾಗಿ ವಿಂಗಡಿಸಿ, ಅಂಕಿ-ಅಂಶಗಳಿಗೆ ಭಟ್ಟಿ ಇಳಿಸದಿದ್ದಲ್ಲಿ ಜನಸಂಖ್ಯೆ ಸ್ಫೋಟಗೊಂಡು ದೇಶ ದಾರಿದ್ರ್ಯ ಸ್ಥಿತಿಗೆ ತಲುಪುತ್ತದೆ. ಆದರೆ, ಇದು ಎಲ್ಲಾ ಬಂಡವಾಳಶಾಹಿಗಳ ಹಿತಾಸಕ್ತಿಯನ್ನು ಈಡೇರಿಸಿ ಕೊಳ್ಳಲು, ವಸಾಹತು ದೇಶಗಳೆಲ್ಲಾ ಜಾರಿಗೊಂಡು, ಇಂದು ದಶವಾರ್ಷಿಕ ಜನಗಣತಿ ಸರ್ವಸಮ್ಮತಿಯನ್ನು ಪಡೆದುಕೊಂಡಬಿಟ್ಟಿದೆ. ಇದರ ಕ್ರೂರತನ ಹಿಂಸಾತ್ಮಕ ಪ್ರವೃತ್ತಿ, ಜನ ಸುಮ್ಮನಿರಲೆಂದು ಪರಿಗಣಿತರಾಗಿರುವ ಶ್ರಮಜೀವಿಗಳೂ, ಅರಿಯದೆ ಪದೇ ಪದೇ ಮೋಸ ಹೋಗುತ್ತಿರುವುದು ವಿಷಾದನೀಯ.

ಜನಗಣತಿ ನೀಡುವ ಅಂಕಿ ಅಂಶಗಳ ಮೂಲಕ ಒಂದು ಜನಾಂಗವನ್ನು ಸರ್ವನಾಶ ಮಾಡುವುದಲ್ಲದೆ, ಇಲ್ಲಿನ ಶತ್ರುವನ್ನು ಜನ ಮನಸ್ಸಿನಲ್ಲಿ ಸಂಘಟಿಸಿ, ಕೋಮು ಭಾವನೆ ಯನ್ನು ಹುಟ್ಟು ಹಾಕುತ್ತದೆ. ಆದ್ದರಿಂದ ಜನಗಣತಿ ಎನ್ನುವುದು ನಿಯಂತ್ರಣಾ ಶಕ್ತಿಯಾಗಿ, ಉಳ್ಳವರನ್ನು ಗೊತ್ತಿಲ್ಲದೆ ವೈಭವೀಕರಿಸಿ, ಅವರನ್ನು ಇಲ್ಲದವರ ವಿರುದ್ಧ ಸಂಘಟಿಸ ಲಾಗುತ್ತದೆ. ಈ ಪಿತೂರಿಯ ಕೈಗೊಂಬೆ ನೇಟಿವ್ ಜನರಾಗುವುದನ್ನು ಕಾಣುತ್ತೇವೆ.

ಕನ್ನಡ ಭಾಷೆ ಎಂದು ಸಂಘಟಿತವಾದ ಪ್ರದೇಶದಲ್ಲಿ ಈ ಜನಗಣತಿಯನ್ನು ಆ ಪ್ರಾಂತ್ಯದ ವಂಶಾವಳಿಯೆಂದೇ ಕರೆಯಬೇಕಾಗುತ್ತದೆ. ಬ್ರಿಟಿಷ್ ಆಡಳಿತದ ಸಂದರ್ಭದಲ್ಲಿ ೧೮೫೭ರ ದೊಡ್ಡ ದಂಗೆಯು ತೋರಿಸಿಕೊಟ್ಟ ಒಂದು ಪ್ರಮುಖ ಸಂಗತಿಯೆಂದರೆ ನೇಟಿವ್ ಜನರನ್ನು ವಸ್ತುನಿಷ್ಠವಾಗಿ ವರ್ಗೀಕರಿಸಿ, ನಿಯಂತ್ರಸದಿದ್ದಲ್ಲಿ ಅಪಾಯ ಕಟ್ಟಿಟ್ಟದ್ದೇ ಎಂದು. ಅದಕ್ಕಾಗಿ ೧೮೭೧ರಲ್ಲಿ ಮದ್ರಾಸ್ ಸರಕಾರವು ಒಂದು ಯೋಜನೆಯನ್ನು ತಯಾರಿಸುತ್ತದೆ. ಆ ಯೋಜನೆಯ ಮೇರೆಗೆ ಬ್ರಿಟಿಷ್ ಸಾಮ್ರಾಜ್ಯದ ಜನರ ಅಂಕಿ-ಅಂಶಗಳನ್ನು ಕ್ರೋಢೀಕರಿಸಲು ವ್ಯವಸ್ಥಿತವಾಗಿ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. ಇದಕ್ಕಾಗಿ ೧೮೬೯ರಲ್ಲಿ ಡಬ್ಲ್ಯೂ. ಡಬ್ಲ್ಯೂ.ಹಂಟರ್‌ನನ್ನು ಈ ಕೆಲಸಕ್ಕಾಗಿ ನೇಮಿಸಲಾಗುತ್ತದೆ. ಈತನ ಮೂಲಕ ಮುಂದೆ ಜನರ ಬಗ್ಗೆ, ಪ್ರದೇಶದ ಬಗ್ಗೆ ಗೆಜೆಟಿಯರ್‌ಗಳನ್ನು ಪ್ರಕಟಿಸಲಾಗುತ್ತದೆ. ಈ ಗೆಜೆಟಿಯರ್‌ಗಳ ಪ್ರಮುಖ ಉದ್ದೇಶವೇ ಜನಗಣತಿಯಾಗಿತ್ತು.

ಇದಕ್ಕೆ ಇನ್ನೊಂದು ಪ್ರಬಲವಾದ ಕಾರಣವೂ ಇತ್ತು. ಯೂರೋಪಿನ ಶ್ರಮಶಕ್ತಿಯು ಇಲ್ಲಿ ತುಂಬಾ ಕಮ್ಮಿ ಇದುದ್ದಲ್ಲದೆ, ಅತ್ಯಂತ ದುಬಾರಿಯೂ ಆಗಿತ್ತು. ಅದರ ಅಧಿಕ ಪ್ರಯೋಜನವನ್ನು ಪಡೆಯಲು ಅದನ್ನು ಇತರೆ ಸಣ್ಣಪುಟ್ಟ ಕೆಲಸಗಳಿಂದ ಹೊರತುಪಡಿಸಿ, ಅದಕ್ಕೆ ಹೊಲ-ಗದ್ದೆಗಳಲ್ಲಿ, ಎಸ್ಟೇಟ್‌ಗಳಲ್ಲಿ, ಫ್ಯಾಕ್ಟರಿಗಳಲ್ಲಿ ಕೆಲಸಗಾರರಾಗಿದ್ದ ಮತ್ತು ವಸಾಹತುಶಾಹಿ ನೌಕರಿಯಲ್ಲಿ ಗುಮಾಸ್ತರು ಮತ್ತು ಪೊಲೀಸರಾಗಿದ್ದ ಭಾರತೀಯರನ್ನು ನಿಭಾಯಿಸತಕ್ಕ ಹೊಣೆಗಾರಿಕೆಯನ್ನು ವಹಿಸಲಾಗಿತ್ತು. ಅಂದರೆ ಈ ಮೇಲ್ವಿಚಾರಣೆ ಸುಲಭವಾಗಿಸಲು ಜನರನ್ನು ಸಾಧ್ಯವಾದ ಸಿದ್ಧಮಾದರಿಗಳಿಗೆ ವಹಿಸಲಾಗಿತ್ತು. ಅಂದರೆ ಈ ಮೇಲ್ವಿಚಾರಣೆ ಸುಲಭವಾಗಿಸಲು ಜನರನ್ನು ಸಾಧ್ಯವಾದ ಸಿದ್ಧಮಾದರಿಗಳಿಗೆ ಭಟ್ಟಿ ಇಳಿಸಬೇಕಾಗಿತ್ತು. ಈ ಮೂಲಕ ಜನರನ್ನು ಕೋ-ಅಪ್ಟ್ ಮತ್ತು ಎಕ್ಸ್‌ಕ್ಲೂಡ್ ಎಂಬೆರಡು ಪ್ರಕ್ರಿಯೆಗಳಿಗೆ ಒಳಪಡಿಸಲಾಗುತ್ತದೆ.

ಹೀಗೆ ಜನರನ್ನು ವರ್ಣಾಶ್ರಮದ ಸ್ವತಃ ಸಿದ್ಧ ವರ್ಗದೊಳಗೆ ತೂರಿಸಲಾಗುತ್ತದೆ. “ಒಂದು ಜಾತಿಯನ್ನು ಕುರಿತು ಈ ರೀತಿ ಯೋಚಿಸುವುದು ಆಡಳಿತಗಾರನಿಗೆ ಅಗತ್ಯವಾಗಿತ್ತು. ಏಕೆಂದರೆ ಅದು ಆತನಿಗೆ ತಿಳುವಳಿಕೆಯ ಭ್ರಮೆಯನ್ನು ಹುಟ್ಟಿಸುತ್ತದೆ. ಹೀಗೆ ಆತ ಭಾರತೀಯ ವ್ಯಕ್ತಿಯನ್ನು ಬ್ರಾಹ್ಮಣನೆಂದು ಕೆಲವು ಲಕ್ಷಣಗಳಿಂದ ವ್ಯತ್ಯಾಸ ಮಾಡಬಹುದಾಗಿತ್ತು.”[೨೬] ಹೀಗೆ ಜನರ ಬಗ್ಗೆ ಸಂಗ್ರಹಿಸಿದ ಮಾಹಿತಿಯನ್ನು ಅರ್ಥೈಸಿ, ವರ್ಗೀಕರಿಸಲಾಗುತ್ತದೆ. ಅಲ್ಲದೆ ಅನೇಕ ಸಮುದಾಯಗಳನ್ನು ಕ್ರಿಮಿನಲ್ ಜಾತಿಗಳೆಂದು ಪರಿಗಣಿಸಲಾಗುತ್ತದೆ. ಈ ವಿಚಾರಗಳೇ ಜನಗಣತಿಯಲ್ಲಿ ಚಾಚೂ ತಪ್ಪದೆ ದಾಖಲಾಗುತ್ತವೆ. ಉದಾಹರಣೆಗೆ, ೧೮೬೮ರಲ್ಲಿ ಜೆ.ಎಚ್. ನೆಲ್ಸನ್ ತನ್ನ ಮಧುರೈ ಕೈಪಿಡಿಗಳಲ್ಲಿ ಸಮುದಾಯಗಳನ್ನು “Lawless maravan, Skulking Kallr, the licentious Pariah and the restless Kuruvan” ಎಂದು ದಾಖಲು ಮಾಡುತ್ತಾನೆ. ಹೀಗೆ, ಸಾವಿರಾರು ಸಂಖ್ಯೆಯ ಗಂಡಸರು, ಹೆಂಗಸರು ಮತ್ತು ಮಕ್ಕಳನ್ನು ಏಕವಚನದ ಪುಲ್ಲಿಂಗದಲ್ಲಿ ವರ್ಗೀಕರಿಸಿ ಹೆಸರಿಸಲಾಗುತ್ತದೆ.

ಜನಸಮುದಾಯಗಳನ್ನು ವರ್ಗೀಕರಿಸುವಾಗ ಅನುಸರಿಸುವ ಒಂದು ಪ್ರಧಾನ ನಿಯಮವೆಂದರೆ ವರ್ಣಕ್ರಮದ ಅನುಕರಣೆ ಮತ್ತು ಅನ್ವಯ. ೧೮೭೧ರ ಜನಗಣತಿಯಲ್ಲಿ ಇದನ್ನೇ ಕಾಣಬಹುದು. ಈ ಎಂಪಿರಿಕಲ್ ಯೋಜನೆಯನ್ನು ಓರಿಯಂಟಲಿಸ್ಟ್ ವರ್ಗೀ ಕರಣದ ವಿಧಾನದಲ್ಲಿ ಮೇಳೈಸಿ, ಶ್ರೇಣೀಕರಣವನ್ನು ಆಚರಣೆಗೆ ತರಲಾಗುತ್ತದೆ. ವಾಟರ್ ಫೀಲ್ಡ್ ಎಂಬ ವಿದ್ವಾಂಸನ ಪ್ರಕಾರ ಬ್ರಾಹ್ಮಣರು ಅತ್ಯುನ್ನತ ಸ್ಥಾನವನ್ನು ಅವರ ಕಸುಬಿನ ಹೊರತಾಗಿಯೂ ಹೊಂದಿರುತ್ತಾರೆ. ಇಲ್ಲಿ ಬ್ರಾಹ್ಮಣ ಸಮುದಾಯವನ್ನು ಏಕೀಕರಿಸುವುದನ್ನು ನಾವು ಗುರುತಿಸಬಹುದು. ಪ್ರಿನ್ಸೆಪ್ ಬನಾರಸಿನ ಜನಗಣತಿಯನ್ನು ೧೮೩೪ರಲ್ಲಿ ತೆಗೆದುಕೊಂಡಾಗ ಬನಾರಸ್ ನಗರದಲ್ಲೇ ೧೦೭ ನಿರ್ದಿಷ್ಟ ಬ್ರಾಹ್ಮಣ ಜಾತಿಗಳನ್ನು ಗುರುತಿಸುತ್ತಾನೆ. ಹೀಗಿದ್ದರೂ ಸಹ ನಂತರದಲ್ಲಿ ಈ ಎಲ್ಲಾ ಬ್ರಾಹ್ಮಣ ಸಮುದಾಯಗಳು ಒಂದೇ ಎಂಬಂತೆ ತೋರಿಸಲಾಗುತ್ತದೆ. ಅಂದರೆ ವರ್ಣ ವ್ಯವಸ್ಥೆಯಲ್ಲಿ ಮೊದಲಿಂದಲೇ ಮಿತಿಗಳು ಕಾಣ

ತೊಡಗುತ್ತವೆ. ಆದ್ದರಿಂದ, ವಾಟರ್ ಫಿಲ್ಡ್‌ನೇ ಇದನ್ನು ಒಪ್ಪಿಕೊಂಡಿದ್ದ. ಇದನ್ನು ಮೀರಲು ಆತ ಇತರೇ ಪ್ರಧಾನ ಜಾತಿಗಳನ್ನು ಬೇರೆ ಬೇರೆ ಪ್ರಾಂತ್ಯಗಳಲ್ಲಿ ಗುರುತಿಸಿದ್ದ. ಉದಾಹರಣೆಗೆ, ಬಿಹಾರದಲ್ಲಿ ಬಾಬನ್ಸ್, ಬೆಂಗಾಲ್‌ನಲ್ಲಿ ಕಾಯಸ್ಥರು, ಭಾರತದಾದ್ಯಂತ ಹರಡಿದ ಬನಿಯಾಗಳು, ಪೂರ್ವ-ಬೆಂಗಾಲದಲ್ಲಿನ ಚಂಡಾಲರು, ಮೈಸೂರಿನ ಒಕ್ಕಲಿಗರು, ಮದ್ರಾಸಿನ ವೆಲ್ಲಾಳರು, ಚೆಟ್ಟಿಯರು ಹಾಗೂ ಹೊನ್ನಿಯರುಗಳು. ಅಲ್ಲದೇ ವಾಟರ್ ಫಿಲ್ಡ್‌ನು ಮದ್ರಾಸಿನಲ್ಲಿ ಕಸುಬನ್ನಾಧರಿಸಿ ವರ್ಗೀಕರಿಸುವುದು ಸರಿಯಲ್ಲವೆಂದು ಹೇಳುತ್ತಾನೆ. ಆದರೂ, ಮುಂಬಯಿಯಲ್ಲಿ ಅನುಸರಿಸಿದ ಜನಗಣತಿಯ ವಿಧಾನವನ್ನೇ ಮೈಸೂರಿನ ಜನಗಣತಿಯಲ್ಲೂ ಅನುಸರಿಸಲಾಗುತ್ತದೆ. ಆದರೆ ಇಲ್ಲಿ ಜನಗಣತಿಯನ್ನು ಮಾಡುವಾಗ ವರ್ಣ ವರ್ಗೀಕರಣದೊಳಗೆ ಅಸಂಖ್ಯಾತ ಉಪಜಾತಿ ವರ್ಗಗಳನ್ನು ಶೂದ್ರ ಕ್ಯಾಟಗರಿಯೊಳಗೆ ತುರುಕಲಾಗುತ್ತದೆ. ಹಾಗಾಗಿ, ಈ ದಶವಾರ್ಷಿಕ ಜನಗಣತಿಯನ್ನು ೧೮೮೧ರಲ್ಲಿ ಕೈಗೊಳ್ಳುವಾಗ ಒಂದು ಲಕ್ಷಕ್ಕಿಂತ ಮೇಲ್ಪಟ್ಟ ಜನಸಂಖ್ಯೆಯನ್ನು ಒಂದು ನಿರ್ದಿಷ್ಟ ವರ್ಣ ಗುಂಪಿನೊಳಗೆ ತರಲಾಗುತ್ತದೆ. ಆದರೂ ಮುಂದೆ ಅದು ಬಹಳಷ್ಟು ತೊಂದರೆಗಳಿಗೆ ಅನುವು ಮಾಡಿಕೊಡುತ್ತದೆ. ಹೀಗಿದ್ದರೂ ಸಹ ಮೈಸೂರಿನ ಜನಗಣತಿಯನ್ನು ೧೮೮೧ರಲ್ಲಿ ಕೈಗೊಳ್ಳುವಾಗ ಎಂ.ಎ. ಶೆರಿಂಗನು ತನ್ನ ಕೃತಿ ಹಿಂದೂ ಟ್ರೈಬ್ಸ್ ಅಂಡ್ ಕಾಸ್ಟ್ ಆಫ್ ಬನರಾಸ್‌ನಲ್ಲಿ ಅನುಸರಿಸಿದ ವಿಧಾನವನ್ನೇ ಇಲ್ಲೂ ಅನುಸರಿಸಲಾಗುತ್ತದೆ. ಈ ಕೃತಿಯ ಪೀಠಿಕೆಯಲ್ಲಿ, ಪ್ರಾಚೀನ ಕಾಲದಿಂದಲೂ ಬ್ರಾಹ್ಮಣ ಕುಟುಂಬಗಳು ತಮ್ಮ ಜನಾಂಗದ ಪರಿಶುದ್ಧತೆಯನ್ನು ಬಹು ಜಾಗ್ರತೆಯಿಂದ ಸಂರಕ್ಷಿಸಿದ್ದರೂ ಸಹ ಮನುವಿನ ಹೇಳಿಕೆಗಳ ಪ್ರಕಾರ ಸ್ಪಷ್ಟವಾಗುವ ಸಂಗತಿಯೆಂದರೆ ಇತರ ಜಾತಿಯ ಮಹಿಳೆಯರನ್ನು ಬ್ರಾಹ್ಮಣರು ಕೂಡುವ ಮೂಲಕ ಅನೇಕ ಹೊಸ ಬುಡಕಟ್ಟು ಪಂಗಡಗಳನ್ನು ನಿರಂತರವಾಗಿ ಸೃಷ್ಟಿಸಲಾಯಿತು."೩೦ ಅಂದರೆ ಬ್ರಾಹ್ಮಣರ ವರ್ಣಪದ್ಧತಿಯನ್ನು ಜನಾಂಗೀಯವಾಗಿ ಕಟ್ಟಲಾಗಿದ್ದನ್ನು ಚಾಚೂ ತಪ್ಪದೆ ಅನಂತರದಲ್ಲಿ ಅನುಸರಿಸಲಾಗುತ್ತದೆ.

ಮೈಸೂರಿನ ದಶವಾರ್ಷಿಕ ಜನಗಣತಿಯು ೧೮೮೧ರಲ್ಲಿ ಆರಂಭವಾದಾಗ ಆ ಜನಗಣತಿಯಲ್ಲಿ ೧೧೧ ಪ್ರಧಾನ ಸಮುದಾಯಗಳನ್ನು ಗುರುತಿಸಿ, ಅದರೊಳಗೆ ಸುಮಾರು ೩೭೭ ಉಪ-ಜಾತಿಗಳನ್ನು ವೃತ್ತಿಯನ್ನಾಧರಿಸಿ ವರ್ಗೀಕರಿಸಲಾಗುತ್ತದೆ. ಈ ವೃತ್ತಿಯಲ್ಲಿ ಮೊದಲಿಗೆ ಬೇಸಾಯಗಾರರು ಬಂದರೆ ಅನಂತರದಲ್ಲಿ ಪೂಜಾರಿ ವೃತ್ತಿಯವರು, ದಾಸರು, ಭಕ್ತರು, ದೇವಸ್ಥಾನ ಸೇವಕರು, ಬರಹಗಾರರು. ಸಂಗೀತಗಾರರು, ನೃತ್ಯಗಾರರು, ವ್ಯಾಪಾರಿಗಳು, ಆಚಾರಿಗಳು, ಅಜಾಮರು, ಬಡಗಿಗಳು, ದರ್ಜಿಗಳು, ನೇಯ್ಗೆಯವರು, ಗಾಣಿಗರು, ಅಗಸರು, ಗೊಲ್ಲರು, ಕುರುಬರು, ಕುಂಬಾರರು, ಉಪ್ಪಾರರು ಇತ್ಯಾದಿಯಾಗಿ ವರ್ಗೀಕರಣಕ್ಕೊಳಗಾಗುತ್ತಾರೆ. ಹೀಗೆ ವರ್ಗೀಕರಿಸುವಾಗ ೪೮ ಏಷ್ಯಾಟಿಕ್ ಜನಾಂಗಗಳು ಇಲ್ಲಿ ಬಂದು ನೆಲೆಸಿದ್ದರೆಂದು ಹೇಳುತ್ತಾರೆ. (ಜಾತಿಗಳು ಮತ್ತು ಉಪಜಾತಿಗಳು: ಅಗಸ-೧೫, ಬಣಜಿಗ-೪೬, ಬೇಡ್-೯೯, ಬ್ರಾಹ್ಮಣ-೮೮, ಬೆಸ್ತ-೧೬, ಗಾಣಿಗ-೧೨, ಗೊಲ್ಲ-೪೯, ಹೊಲೆಯ-೬೩, ಈಡಿಗ-

೧೨, ಇರುಳಿಗ-೪, ಕ್ಷತ್ರಿಯ-೩೯, ಕುಂಬಾರ-೧೧, ಕುರುಬ-೩೫, ಲಿಂಗಾಯತ ೩೮ ಮಾದಿಗ ೧೯, ನಟವ ೮, ನಾಯಿಂಡ ೧೦, ತಿಗಳ ೨೨, ವಡ್ಡ ೧೩, ಒಕ್ಕಲಿಗ ೧೧೪). ಹೀಗೆ ನಂತರದ ದಶವಾರ್ಷಿಕ ಜನಗಣತಿಯಲ್ಲಿ ೮೧೨ ಜಾತಿಗಳನ್ನು ೧೦೧ ಜಾತಿಗಳೊಳಗೆ ಅಮುಕಲಾಗುತ್ತದೆ. (Volume III 1891, Tribes and castes of Mysore) ೧೯೦೧ರ ಜನಗಣತಿಯಲ್ಲಿ ಒಟ್ಟು ಜಾತಿಗಳನ್ನು ವರ್ಗೀಕರಿಸಿದ್ದು ೬೫. ಜನಗಣತಿ ೧೯೦೧ರ ಕೃತಿಯಲ್ಲಿ "ಜನಗಣತಿಯ ಎಲ್ಲಾ ಬರಹಗಾರರಿಗೂ ಅಂಕಿಅಂಶಗಳನ್ನು ದಾಖಲಿಸುವುದಕ್ಕೆ ಜಾತಿಯು ಅಡಿಯಾಗಿದೆ. ಡಾ. ಕೊರ್ನಿಶ್‌ನ ಪ್ರಕಾರ ಇಡೀ ಜೀವಿತಾವಧಿಯನ್ನು ಕಳೆದರೂ ಸಹ ಅದು ಮರೆಯಾಗಿಯೇ ನಿಲ್ಲುತ್ತದೆ."[೩೧] ಮೇಲೆ ಗುರುತಿಸಿದಂತೆ ೭೦೧ ಜನಸಮುದಾಯಗಳನ್ನು ೬೫ ಜಾತಿಗಳೊಳಗೆ ಸೇರಿಸಲಾಗುತ್ತದೆ. ೫,೦೪೮,೪೪೯ ಹಿಂದೂಗಳಲ್ಲಿ ೧೯೯೮ ಜನ ತಮ್ಮ ಜಾತಿಯನ್ನು ನೊಂದಾಯಿಸಿಕೊಳ್ಳಲಿಲ್ಲವೆಂದು ಹೇಳುತ್ತಾರೆ. ಉಳಿದ ೫,೦೪೭,೩೫೧ ಜನರನ್ನು ೬೪ ಜಾತಿಗಳಲ್ಲಿ ವಿಂಗಡಿಸಲಾಗುತ್ತದೆ. ಹೀಗೆ ವಿಂಗಡಿಸುವಾಗ ಮುಸ್ಲಿಂರನ್ನು ಹಾಗೂ ಇತರೆ ಜನರನ್ನು ೬೪ ವರ್ಗೀಕರಿಸಲಾಗುವುದಿಲ್ಲ.[೩೨] ಹಾಗೆಯೇ ೧೯೧೧ರ ಜನಗಣತಿಯಲ್ಲಿ ಪ್ರಧಾನ ೭೪ ಜಾತಿಗಳನ್ನು ಗುರುತಿಸಲಾಗುತ್ತದೆ. ಇದು ೧೯೨೧ರ ವೇಳೆಗೆ ೩೪ ಜಾತಿಗಳಾಗುತ್ತವೆ. (Agasa, Banagiga. Beeda, Besta, Bhraman, Dharji, Devanga, Ganiga, Golla, Holiya, Heediga, Joogi, Komati, Koracha, Kshtriya, Kumbara, Kunchita, Kuruba, Lambina, Lingayath, Madiga, Maharatta, Meda, Mundali, Nayatha, Nayianda, Neiyge, Panchala, Satani, Tigala, Uppara, Vokkaliga, Vasya, Vodda). ಈ ಹೆಸರುಗಳನ್ನೆಲ್ಲಾ ಪುಲಿಂಗ ವಚನದಲ್ಲಿ ಸಂಘಟಿಸುವುದನ್ನು ಕಾಣುತ್ತೇವೆ. ಇಲ್ಲಿ ಸ್ತ್ರೀ ಎನ್ನುವುದು ಒಂದು ವ್ಯಕ್ತಿತ್ವವಾಗಿ ಕಾಣಿಸದೆ, ಅದು ಸಾಮಾನ್ಯೀಕೃತ ಸಮುದಾಯ ಭಾಗವಾಗಿ ಬರುವುದನ್ನು ಕಾಣುತ್ತೇವೆ. ೧೯೩೧ರಲ್ಲಿ ನಡೆದ ಜನಗಣತಿಯಲ್ಲಿ ಕೇವಲ ೩೯ ಜಾತಿಗಳು ದೊರಕಿ ಅವುಗಳಲ್ಲಿ ಹೊಸದಾಗಿ ಆದಿಕರ್ನಾಟಕ ಸೇರಿಕೊಳ್ಳುತ್ತದೆ.

ಈ ಎಲ್ಲಾ ಜನಗಣತಿ ವರದಿಗಳಲ್ಲಿ ಎದ್ದು ಕಾಣುವ ಒಂದು ಪ್ರಮುಖ ಸಂಗತಿಯೆಂದರೆ ಜನಗಣತಿಯ ರಾಜಕೀಯದ ಫಲಿತಾಂಶಗಳ್ನು ಅರಿತ ಸಮುದಾಯಗಳು ಕೂಡಲೇ ಶ್ರೇಣೀಕರಣದ ಉನ್ನತ ಸ್ಥಾನವನ್ನು ಪಡೆಯಲು ಪೈಪೋಟಿಯನ್ನು ನಡೆಸಲಾರಂಭಿಸುತ್ತವೆ. ಉದಾಹರಣೆಗೆ, ಕುಂಚಿಟಗರು ಒಕ್ಕಲಿಗ ಜಾತಿಯಾಗಿ ಹಾಗೂ ದೇವಾಂಗರು ನೇಯ್ಗೆ ಜಾತಿಯವರಾಗಿ, ಇವರು ಬೇರೆ ಬೇರೆ ಎಂದು ೧೯೧೧ರ ಜನಗಣತಿಯಲ್ಲಿ ತೋರಿಸಲಾಗುತ್ತದೆ. ಹಾಗೆಯೇ "ಅಲ್ಲದೆ ಆ ನಾಲ್ಕು ಜಾತಿಗಳಲ್ಲಿನ ಜನ ಭಿನ್ನವಾಗಿ ಬರೆಸಿಕೊಳ್ಳುತ್ತಾರಾದರೆ, ಹಾಗೆಯೇ ಮಾಡಲು ಆದೇಶವನ್ನು ನೀಡಲಾಯಿತು ಮತ್ತು ಕೆಲವರು ಒಂದು ವಿಧದ ಬ್ರಾಹ್ಮಣರೆಂದು ಬರೆಯಿಸಿಕೊಳ್ಳಲು ಅನುವು ಮಾಡಿಕೊಡಲಾಯಿತು."[೩೩] ಹೀಗೆ ಅನೇಕರು ಕಮಿಷನರ್‌ಗೆ ಅರ್ಜಿಗಳನ್ನು ನೀಡಿ ತಮ್ಮ ಜಾತಿಗಳನ್ನು ಉನ್ನತ ಸ್ಥಾನ (ಶ್ರೇಣೀಕೃತ)ದಲ್ಲಿ

ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಉದಾಹರಣೆಗೆ ಈ ಕೆಳಗಿನ ಸಂಗತಿಗಳನ್ನು ಗಮನಿಸ ಬಹುದು:

೧. ಒಂದು ಗುಂಪು ಈ ಹಿಂದೆ "**Satani**" ಗುರುತಿಸಿಕೊಂಡದ್ದು ಈಗ ವೆಂಕಟಪುರ ಬ್ರಾಹ್ಮಣರು ಅಥವಾ ವಿಷ್ಣು ಧ್ವಜ ಬ್ರಾಹ್ಮಣರೆಂದು ಗುರುತಿಸಿಕೊಳ್ಳಲು ಇಚ್ಛಿಸುತ್ತಾರೆ.

೨. ನಾಯಿಂಡ ಜಾತಿಯ ಕೆಲವರು ತಮ್ಮ ಸಮುದಾಯವು ನಯನಜ ಕ್ಷತ್ರಿಯರೆಂದು ದಾಖಲಾಗಬೇಕೆಂದು ಬಯಸುತ್ತಾರೆ.

೩. ಬೆಂಗಳೂರಿನ ಕೆಲವು ಕುಂಚಿಟಿರು ಹಾಗೂ ಮೈಸೂರಿನಲ್ಲಿದ್ದವರು ತಮ್ಮ ಸಮುದಾಯವು ಒಕ್ಕಲಿಗರಿಗಿಂತ ಬೇರೆಯೆಂದು ಬರೆಯಿಸಿಕೊಳ್ಳುತ್ತಾರೆ.

೪. ಹುಬ್ಬಳ್ಳಿಯ ದೇವಾಂಗ ಧರ್ಮ ಪ್ರಚಾರಕ ಸಮಾಜವು ತಮ್ಮ ಸಮುದಾಯವು ನೇಯ್ಗೆಯವರಿಗಿಂತ ಬೇರೆಯವರೆಂದು ಗುರುತಿಸಿಕೊಳ್ಳುತ್ತಾರೆ.

೫. ಪಾಂಟಾಳ ಮತ್ತು ವಿಶ್ವಕರ್ಮ ಸಮಾಜವೆಂದು ಮೈಸೂರಿನಲ್ಲಿ ಗುರುತಿಸಲಾದ ಸಮುದಾಯದ ಕೆಲವು ಪ್ರತಿನಿಧಿಗಳು ತಮ್ಮನ್ನು ವಿಶ್ವಕರ್ಮ ಬ್ರಾಹ್ಮಣರೆಂದು ಗುರುತಿಸಿ ಕೊಳ್ಳಲು ಇಚ್ಛಿಸಿದರು.

೬. ನಾಗಮಂಗಲ ತಾಲೂಕಿನ ತಿರುಕುಲದೇವರು ಎನ್ನುವ ಸಮುದಾಯ ಕಾರಣಿಕವೆಂದು ದಾಖಲಿಸುತ್ತಾರೆ.

೭. ಕೃಷ್ಣರಾಜಪೇಟೆ ತಾಲೂಕಿನ ಕೆಲವು ಲಿಂಗಾಯಿತರು ಲಿಂಗಾಯತ್ ಎನ್ನುವುದು ತಮ್ಮ ಧರ್ಮವಲ್ಲವೆಂದು ತಮ್ಮನ್ನು ವೀರಶೈವ ಧರ್ಮದಲ್ಲಿ ಗುರುತಿಸಿ, ವೀರಶೈವ ಬ್ರಾಹ್ಮಣ ರೆಂದು, ಲಿಂಗಧಾರಿ ಅಥವಾ ವೀರಶೈವ ಕ್ಷತ್ರಿಯರೆಂದು ಜಾತಿಯಲ್ಲಿ ಗುರುತಿಸಬೇಕೆಂದು ವಿನಂತಿಸುತ್ತಾರೆ.

೮. ಕುರುಬ ಸಮುದಾಯದ ಒಬ್ಬ ಪತ್ರಕರ್ತ, ಕುರುಬರನ್ನು ಆರ್ಯ ಕ್ಷತ್ರಿಯರೆಂದು ಗುರುತಿಸಲು ಸೂಚಿಸುತ್ತಾನೆ.

೯. ಹೊಲೆಯ ಜಾತಿಯಲ್ಲಿ ಗುರುತಿಸಿಕೊಂಡಿದ್ದ ಕೆಲವು ಜನ ಆದಿದ್ರಾವಿಡರೆಂದು ಗುರುತಿಸಿ ಕೊಳ್ಳಲು ಇಚ್ಛಿಸುತ್ತಾರೆ.[೩೪]

ಈ ಮೇಲಿನ ವಿವರಗಳು ವಸಾಹತುಶಾಹಿ ಸಂದರ್ಭದಲ್ಲಿ ದಾಖಲಾಗಿದ್ದು ಮೈಸೂರಿ ನಾದ್ಯಂತ ಜನಸಮುದಾಯಗಳು ಹೇಗೆ ತಮ್ಮನ್ನು ಸಂಘಟಿಸಿಕೊಂಡು, ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಂಡರು ಹಾಗೂ ಕಾಯ್ದುಕೊಂಡರು ಎಂಬುದನ್ನು ಗಮನಿಸಬೇಕಾಗುತ್ತದೆ. ಅಲ್ಲದೆ ಈ ಸಮುದಾಯಗಳು ಅದಕ್ಕೆ ಪೂರಕವಾಗಿ ಬೆಂಬಲ ವ್ಯಕ್ತಪಡಿಸಿದ್ದನ್ನು ಕಂಡರೆ, ವಸಾಹತು ಶಾಹಿ ಪ್ರಭುತ್ವದ "ಶಿಸ್ತು ಮತ್ತು ಸಂಘಟನೆ"ಯ ಕ್ರಮವು ಜನರನ್ನು ಶಿಸ್ತುಬದ್ಧವಾಗಿ ವಸಾಹತುಶಾಹಿ ಪ್ರಜೆಗಳನ್ನಾಗಿ ಮಾರ್ಪಡಿಸುತ್ತದೆ.

ಕೆಲವೊಮ್ಮೆ ಜನಗಣತಿಯ ಸಂದರ್ಭದಲ್ಲಿ ಗೊಂದಲವುಂಟಾದಾಗ ಈ ವರ್ಣ ವಿಧಾನವನ್ನು ಕೈಬಿಡುವಂತೆ ಚರ್ಚೆಗಳು ನಡೆಯುತ್ತವೆ. ಆದರೆ ೧೯೦೧ರ ನಂತರ ಬಂದಂತಹ ಸೆನ್ಸಸ್ ಕಮಿಷನರ್ ಎಚ್.ಎಚ್. ರೈಸ್ಲಿಯು ಈ ವರ್ಣ ಕ್ಯಾಟಗರಿಯನ್ನು ತೆಗೆದುಕೊಂಡು ಬ್ರಾಹ್ಮಣ ಪಂಡಿತರು, ವರ್ಣ ವ್ಯವಸ್ಥೆಯನ್ನು ಮನುಧರ್ಮಶಾಸ್ತ್ರದ ಪ್ರಕಾರ ಗುರುತಿಸ ಬೇಕೆಂದು ಬೇಡಿಕೆಯಿಟ್ಟಾಗ ಅದನ್ನು ತಿರಸ್ಕರಿಸಿ, ಜನಾಂಗೀಯ ದೃಷ್ಟಿಯಲ್ಲಿ ಅದನ್ನು ದಾಖಲಿಸುತ್ತಾನೆ.

ಏಕೆಂದರೆ ಆತ ಜಾತಿಯು ಜನಾಂಗೀಯ ಮೂಲದಿಂದ ಬಂದದ್ದೆಂದು ಗಾಢವಾಗಿ ನಂಬಿರು ತ್ತಾನೆ. ಆತ ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಬಂದಂತಹ ವೈಜ್ಞಾನಿಕ ಎಂಪಿರಿ ಸಿಸಮ್‌ನ್ನು ಆ ಶತಮಾನದ ಆದಿಯಲ್ಲಿ ಬಂದಂತಹ ಓರಿಯಂಟಲಿಸ್ಟ್ ಜ್ಞಾನದೊಂದಿಗೆ ಒಂದುಗೂಡಿಸುತ್ತಾನೆ. ಹೀಗೆ ಮಾಡುವಾಗಲೂ ಆ ಹೊತ್ತಿನ ವಸಾಹತುಶಾಹಿ ಆಡಳಿತದಲ್ಲಿ ಕೆಲಸ ಪಡೆದುಕೊಂಡಂತಹ ಬ್ರಾಹ್ಮಣ ಗುಮಾಸ್ತರ ಅಭಿಪ್ರಾಯವನ್ನೇ ಆತ ಪ್ರಧಾನವಾಗಿ ತೆಗೆದುಕೊಳ್ಳುತ್ತಾನೆ. ಆತನ ಪ್ರಕಾರ ಸಾಮಾಜಿಕ ನಿಯಮ ಮತ್ತು ನೇಟಿವ್ ಜನರ ಅಭಿಪ್ರಾಯದ ಮೇರೆಗೆ ಪರಿಗಣಿಸಬೇಕಾಗುತ್ತದೆ. ಇದೇ ಮುಂದೆ ಡೂಮೋ ಮುಂತಾದ ಸಮಾಜಶಾಸ್ತ್ರರನ್ನು ಸಹ ಪ್ರಚೋದಿಸುತ್ತದೆ.

ಈ ಜನಗಣತಿಯ ಮತ್ತೊಂದು ಮುಖ್ಯ ಸಂಗತಿಯೆಂದರೆ ವಸಾಹತುಶಾಹಿ ಪರಿಕಲ್ಪಿಸುವಿಕೆ ಯಲ್ಲಿ ಸಂಖ್ಯೆಯು ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ ಎಂದು ಅರ್ಜುನ್ ಅಪ್ಪದೊರೆ ಯವರು ಅಭಿಪ್ರಾಯಪಡುತ್ತಾರೆ. ತಮ್ಮ ಕೃತಿ Modernity at largeನಲ್ಲಿ ಇದನ್ನು ಗಂಭೀರ ವಾಗಿ ಚರ್ಚಿಸುತ್ತಾರೆ. ಈ ಜನಗಣತಿಯ ಸಾಹಿತ್ಯವನ್ನು ಈಗಾಗಲೇ ಬರ್ನಾಡ್‌ಕ್ಹೊನ್ (೧೯೮೭), ನಿಕೊಲಸ್ ಡರ್ಕ್ಸ್ (೧೯೮೭), ಡೇವಿಡ್ ಲೂಡ್ಡನ್ (೧೯೯೩), ಗ್ಯಾನ್ ಪ್ರಕಾಶ್ (೧೯೯೦) ಹಾಗೂ ಇತರರು ಗಮನಿಸಿ, ಅದರ ಸಮಸ್ಯೆಯನ್ನು ಚರ್ಚಿಸಿದ್ದರೂ ಸಹ ವಸಾಹತುಶಾಹಿಯಲ್ಲಿ "ಸಂಖ್ಯೆ ಮತ್ತು ಅಳತೆ-ಪ್ರಮಾಣಗಳು" ಸಾಕಷ್ಟು ಪ್ರಾಮುಖ್ಯತೆಯನ್ನು ಪಡೆದಿಲ್ಲ. ಅರ್ಜುನ್ ಅಪ್ಪ ದೊರೈ ಪ್ರಕಾರ ಈ ಅಂಕಿ ಸಂಖ್ಯೆಗಳು ಭೂಮಿ, ಹೊಲಗದ್ದೆಗಳು, ಬೆಳೆಗಳು, ಅರಣ್ಯಗಳು, ಜಾತಿ-ಪಂಗಡಗಳು ಹಾಗೂ ಇತ್ಯಾದಿಗಳನ್ನು ೧೯ನೇ ಶತಮಾನದ ಆದಿ ಭಾಗದಿಂದಲೇ ವಸಾಹತುಶಾಹಿ ಆಡಳಿತಗಾರರು ಸಂಗ್ರಹಿಸುತ್ತಾ ಬರುತ್ತಾರೆ. ಅದು ಕೇವಲ ಪ್ರಾಯೋಜನಿಕ ಉದ್ದೇಶಕ್ಕಾಗಿ ಮಾತ್ರವಲ್ಲದೆ, ಅದೊಂದು "ಮಾಹಿತಿ, ಸಮರ್ಥನೆ ಮತ್ತು ಕಲಿಕಾ ತಂತ್ರಗಳನ್ನೊಳಗೊಂಡ ಸಂಕೀರ್ಣತೆಯ ಭಾಗವಾಗಿತ್ತು."[೩೯] ಅಂದರೆ ವಸಾಹತುಶಾಹಿ ಆಡಳಿತವು ಉದೀಯಮಾನದಲ್ಲಿದ್ದ ತನ್ನ ಸರಕಾರಿ ಯಂತ್ರವನ್ನು ಗಟ್ಟಿಗೊಳಿಸಿಕೊಳ್ಳುತ್ತಾ ಜನರನ್ನು ಅದಕ್ಕೆ ಪೂರಕವಾಗಿ ರೂಪಿಸುತ್ತಾ, ಈ ಅಂಕಿ-ಸಂಖ್ಯೆಗಳ ಮೂಲಕ ಸೂಕ್ಷ್ಮ ಲೆಕ್ಕಾಚಾರದಲ್ಲಿ ಅವರನ್ನು ಅಧೀನಕ್ಕೆ ಒಳಪಡಿಸುತ್ತಾರೆ. ಹೀಗೆ ಮಾಡುವಾಗ ಜಾತಿ ಸಮುದಾಯಗಳನ್ನು ಸ್ಥಿರೀಕರಣಕ್ಕೊಳಪಡಿಸಿ, ಬ್ರಿಟಿಷ್ ರಾಜಕೀಯದ ಪೂರ್ವಕಲ್ಪಿತ

ಸ್ಥಿತಿಗೆ ಭಟ್ಟಿ ಇಳಿಸುತ್ತಾರೆ. ಇಲ್ಲಿ ಓರಿಯಂಟಲ್ ಪರಿಕಲ್ಪಿತ ಭಾರತವನ್ನು ಸಾಮಾಜಿಕ ಶಕ್ತಿಯನ್ನಾಗಿಸಿ, ಇಲ್ಲಿನ ನೇಟಿವ್ ಜನರಿಗೆ ವಾಸ್ತವವೆಂಬಂತೆ ಕಟ್ಟಿಕೊಡುತ್ತಾರೆ.

ಈ ಅಂಕಿ-ಸಂಖ್ಯೆಗಳಿಗೆ ಎರಡು ಮುಖಗಳಿವೆ. ಒಂದು, ಸಮರ್ಥಿಸುವಿಕೆ, ಮತ್ತೊಂದು ಶಿಸ್ತಿಗೊಳಪಡಿಸುವಿಕೆ. ಇವೆರಡರ ಮೂಲಕ ಸಂಗ್ರಹಿಸಿದ ಎಲ್ಲಾ ಮಾಹಿತಿಗಳನ್ನು ಚಾಚೂ ತಪ್ಪದೆ, ಸೂಕ್ಷ್ಮವಾಗಿ ಕಂಪನಿಯು ತನ್ನ ವಿಸ್ತಾರವನ್ನು ಹಾಗೂ ಅಧಿಕಾರವನ್ನು ಮತ್ತಷ್ಟು ಗಟ್ಟಿಗೊಳಿಸಿಕೊಳ್ಳಲು ಬಳಸಿಕೊಳ್ಳುತ್ತಿರುತ್ತದೆ. “ಸಂಖ್ಯೆಯು, ಸಂಖ್ಯಾಶಾಸ್ತ್ರೀಯ ಐಡಿಯಾಲಜಿಯನ್ನು ಒಳಗೊಂಡಂತೆ, ಅದು ಸರ್ವೇ ಪಠ್ಯಗಳನ್ನು ಸೂಚಿಸುತ್ತಿದ್ದು, ಶಿಸ್ತಿಗೊಳಪಡಿಸಲು ನಿರೂಪಣೆಗೊಂಡ ಈ ಪಠ್ಯಗಳು ಮತ್ತು ಅಂಥ ಅಂಕಿ-ಅಂಶಗಳ ದಾಖಲೆ ಹಾಗೂ ರೂಢಿಯ ನಡುವಿನ ಕೊಂಡಿಯಾಗಿತ್ತು.”[೩೬] ಆದ್ದರಿಂದ, ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇವುಗಳು ತಾಂತ್ರಿಕ ವರದಿಗಳಾಗಿರದೆ ಅವುಗಳೊಳಗೆ ಒಂದು ಐಡಿಯಾಲಾಜಿಕಲ್ ರೂಢಿಗತ ನಿರ್ದೇಶನ ಮತ್ತು ಪರಿವೀಕ್ಷಣೆ ಅಡಗಿರುತ್ತದೆ. ಅಂದರೆ ‘Land is to rule’ ಎಂಬುದನ್ನು, ವಸಾಹತುಶಾಹಿ ಆಳ್ವಿಕೆ, ಒಂದು ಕಲಿಕಾ ಮಾಧ್ಯಮವನ್ನಾಗಿಸಿ, ಶಿಸ್ತುಬದ್ಧ ಕ್ರಿಯೆಯಲ್ಲಿ ‘Land is to teach’ ಎಂದು ಪರಿವರ್ತಿಸಿಕೊಳ್ಳುತ್ತದೆ. ಆದ್ದರಿಂದ ಭೂ-ಸಮೀಕ್ಷೆಯೆನ್ನುವುದು ಒಂದು ಸಾಂಸ್ಕೃತಿಕ ತರಬೇತಿ ನೆಲೆಯಾಗಿ ಒಂದು ಅಧಿಕೃತ ಪ್ರವಚನವಾಗಿ ರೂಪುಗೊಳ್ಳುತ್ತದೆ. ಹೀಗೆ ಮಾಡುವಾಗ ಆ ಭೌಗೋಳಿಕ ಪ್ರದೇಶದಲ್ಲಿನ ಜನರನ್ನು ಒಂದು ಸಾಮಾಜಿಕ ಸಾವಯವ ರೂಪವನ್ನಾಗಿಸಿ, ಆ ಸಮುದಾಯದೊಳಗಿನ ಜನರ ದೇಹಗಳನ್ನು ಶಿಸ್ತುಬದ್ಧ ವರ್ಗೀಕರಣದ ಮೌಲ್ಯಗಳಿಗೆ ಭಟ್ಟಿ ಇಳಿಸಲಾಗುತ್ತದೆ. ಹೀಗೆ ಕೇಂದ್ರ ಮತ್ತು ಅಂಚಿನ ಮಧ್ಯೆ ಒಂದು ಭಾಷಾ-ಮಾಹಿತಿ ವಲಯವನ್ನು ಸೃಷ್ಟಿಸಲಾಗುತ್ತದೆ. ಹೀಗೆ ವಸಾಹತುಶಾಹಿ ಅನುಭವವನ್ನು ಭಾಷಾಂತರಿಸುವ ಉದ್ಯಮವಾಗಿಯೂ ಈ ಅಂಕಿ-ಸಂಖ್ಯೆಗಳು ಕೆಲಸ ಮಾಡುತ್ತವೆ. “ಈ ಸಹಜೀಕರಿಸುವ ಚೌಕಟ್ಟು ಫೂಕೋ ಚರ್ಚಿಸಿದ ಮೂರು ಹಂತದ ಅಂದರೆ ಜ್ಞಾನ ಮತ್ತು ಅಧಿಕಾರ, ಪಠ್ಯ ಮತ್ತು ರೂಢಿ, ಓದು ಮತ್ತು ಆಳ್ವಿಕೆಯೊಡನೆ ಸಂಬಂಧ ಹೊಂದಿದೆ.”[೩೭] ಇದನ್ನೇ ರಿರ್ಚಡ್ ಸ್ಮಿತ್‌ನು ದಾಖಲೆಯ ಮೂಲಕ ಆಳುವುದು ಮತ್ತು ಆಳ್ವಿಕೆಯ ಮೂಲಕ ದಾಖಲೆ ಮಾಡುವುದು ಎನ್ನುತ್ತಾನೆ.

ಇದರ ಒಂದು ಪ್ರಮುಖ ಪರಿಣಾಮವೆಂದರೆ ಇದು ಕೇವಲ ರೆವಿನ್ಯೂ ವ್ಯವಸ್ಥೆಯನ್ನು ದೃಢಗೊಳಿಸಿದ್ದಲ್ಲದೆ, ವಸಾಹತುಶಾಹಿ ಆಡಳಿತವನ್ನು ಗಟ್ಟಿಗೊಳಿಸುತ್ತಾ ಜಮೀನ್ದಾರಿ ವ್ಯವಸ್ಥೆಯನ್ನು ಹುಟ್ಟುಹಾಕುತ್ತಾ, ರೈತರನ್ನು ಗುತ್ತಿಗೆದಾರರನ್ನಾಗಿ ಪರಿವರ್ತಿಸಿ, ಭೂಮಿಯನ್ನು ವ್ಯಾಪಾರ ಪದಾರ್ಥವನ್ನಾಗಿ ಮಾಡಲಾಗುತ್ತದೆ. ಹೀಗೆ ಜನ ಭೂಮಿಯನ್ನು ಸ್ವತ್ತನ್ನಾಗಿ ಪರಿಭಾವಿಸುತ್ತಾ ಅದನ್ನು ಮಾರಿಕೊಳ್ಳಲು ಮುಕ್ತರಾಗುತ್ತಾರೆ.

೧೮೭೦ರಿಂದ ೧೯೩೧ರೊಳಗೆ ವಸಾಹತುಶಾಹಿಯ ಈ ರೂಪು-ರೇಷೆಗಳು ಸಂಪೂರ್ಣವಾಗಿ ಕ್ರಮಬದ್ಧತೆಗೆ ಒಳಪಡುತ್ತವೆ. ಹಾಗಾಗಿ ೧೯ನೇ ಶತಮಾನದ ಕೊನೆಯ ಹೊತ್ತಿಗೆ ಜನರನ್ನು ವಸ್ತುನಿಷ್ಠೀಕರಿಸುವುದರ ಮೂಲಕ ಅವರಲ್ಲಿ ಸಮುದಾಯ ಪ್ರಜ್ಞೆಯನ್ನು ಶಿಸ್ತುಬದ್ಧವಾಗಿ ಸ್ಥಿರೀಕರಿಸುತ್ತದೆ. ಇಲ್ಲಿನ ತಾತ್ತ್ವಿಕ ಸಂಗತಿಯೆಂದರೆ ೧೮-೧೯ನೇ ಶತಮಾನದಲ್ಲಿ ಬಂದಂತಹ

ಓರಿಯಂಟಲಿಸ್ಟ್ ವಿದ್ವತ್ತು ಒಂದು ರೀತಿಯಾದ ಪ್ರತಿನಿಧೀಕರಣವನ್ನು ಜೈವಿಕ-ಜನಾಂಗೀಯವಾಗಿ, ಒಳಗೆ ಮತ್ತು ಹೊರಗೆ ಸಮುದಾಯವನ್ನು ಬಿಂಬಿಸುತ್ತದೆ. ಹೀಗೆ ವಸಾಹತುಶಾಹಿಯ ರಾಜಕಾರಣವು ಆಧುನಿಕ ರಾಷ್ಟ್ರ, ಪ್ರಭುತ್ವದ ರೂಪುರೇಷೆಗಳಲ್ಲಿ ಅಂತಿಮವಾಗುತ್ತದೆ. ಜ್ಞಾನೋದಯ ಕಾಲದಲ್ಲಿ ಪರಿಕಲ್ಪಿತವಾದ ಪ್ರಜಾಪ್ರಭುತ್ವ ಪರಿಕಲ್ಪನೆಯು ಸಮುದಾಯದಿಂದ ವ್ಯಕ್ತಿಗಳನ್ನು ಬೇರ್ಪಡಿಸಿ, ಅಂತಿಮವಾಗಿ ಆ ವ್ಯಕ್ತಿಗಳಿಗೆ ಸಾರ್ವಭೌಮತ್ವವನ್ನು ನೀಡುವುದರ ಮೂಲಕ ವ್ಯಕ್ತಿಗಳೇ ಸಮುದಾಯದ ಪ್ರತಿನಿಧಿಗಳಾಗಿ ಮಾರ್ಪಾಡುತ್ತಾರೆ. ಆಧುನಿಕ ಪ್ರಜೆ ಸಾರ್ವಜನಿಕವಾಗಿ ಗಟ್ಟಿಗೊಂಡಂತೆಲ್ಲಾ, ಆತನ/ಆಕೆಯ ಜಾತಿ ಐಡೆಂಟಿಟಿಯೂ ಸಹ ಗಟ್ಟಿಗೊಳ್ಳುತ್ತದೆ.

ಮುಂದೆ ವಸಾಹತುಶಾಹಿ ಪರಸ್ಪರ ವಿರೋಧಿಗಳಾದ ಜನ ಸಂಘಟನೆಗಳಿಗೆ ಕುಮ್ಮಕ್ಕು ಕೊಡುವುದನ್ನೇ ಒಂದು ಕಾಯಕವನ್ನಾಗಿ ಮಾಡಿಕೊಳ್ಳುತ್ತದೆ. "ದಶವಾರ್ಷಿಕ ಜನಗಣತಿಯು ಕೋಮುವಾದಿ ರಾಜಕಾರಣ ಹಾಗೂ ಜಾತೀವಾದಿ-ಕೋಮುವಾದಿ ಸಿದ್ಧಾಂತದ ಹರಡುವಿಕೆಗೆ ಮೂಲ ಪ್ರೇರಣೆ ಒದಗಿಸಿತು. ವಾಸ್ತವವಾಗಿ ಜನಗಣತಿ ನಿರೂಪಣೆಯ ಆಧಾರದ ಮೇಲೆಯೇ ಅನೇಕ ಜಾತಿಯ ಸಂಘಟನೆಗಳು ಅಸ್ತಿತ್ವಕ್ಕೆ ಬಂದವು"[೩೮] ಎನ್ನುವ ಉಲ್ಲೇಖ ವಸಾಹತುಶಾಹಿಯೊಳಗೆ ಎಂಥ ಉದ್ದೇಶ ಕ್ರಿಯಾಶೀಲವಾಗಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಇದು ಮುಂದೆ ಸಮುದಾಯ ಐಡೆಂಟಿಟಿಯಾಗಿ ಆಧುನಿಕ ಭಾರತದ ರಾಜಕಾರಣವನ್ನು ಅಧಿಕವಾಗಿ ಪ್ರಭಾವಿಸುವುದನ್ನು ನಾವು ಕಾಣಬಹುದು ಮಾತ್ರವಲ್ಲ, ಹಾಗೆಯೇ ವಸಾಹತುಶಾಹಿ ಇಲ್ಲಿನ ಸಮಾಜದ ಎಲ್ಲ ಸ್ತರಗಳಲ್ಲೂ ಒಂದು ವಿಧದ ಚಲನೆಗೆ ಕಾರಣವಾಗುವುದನ್ನು ನಾವು ಗುರುತಿಸಿಕೊಳ್ಳಬಹುದು. ಈ ಚಲನೆಯಿಂದಲೇ ಕೆಳಜಾತಿ-ವರ್ಗಗಳು ತಮ್ಮ ಅಸ್ತಿತ್ವಕ್ಕಾಗಿ ಸಂಘಟಿತವಾಗುವುದನ್ನು ಮತ್ತು ಆಡಳಿತದಲ್ಲಿ ತಮ್ಮ ಪಾಲುಪಡೆಯುವ ಪ್ರಕ್ರಿಯೆಯನ್ನು ಲೇಖಕರು ಖಚಿತ ಪಡಿಸುತ್ತಾರೆ. ರಟ್ಟೈಮಲ್ಲೈ ಶ್ರೀನಿವಾಸನ್ ೧೮೮೧ರಲ್ಲಿ ಪರೆಯ ಮಹಾಜನ ಸಭಾವನ್ನು ಸ್ಥಾಪಿಸಿ, ದಕ್ಷಿಣ ಭಾರತದಲ್ಲಿ ನಿಮ್ನ ಜಾತಿಗಳ ಮೊದಲ ನೇತಾರರಾಗಿ ಕಾಣಿಸಿಕೊಂಡು, ಅಂಬೇಡ್ಕರ್‌ರೊಡನೆ ದುಂಡು ಮೇಜಿನ ಪರಿಷತ್‌ನಲ್ಲಿ ಭಾಗವಹಿಸಿದ್ದನ್ನು ಈ ಕೃತಿಯು ದಾಖಲಿಸುತ್ತದೆ.

ಹೀಗೆ ಸಂಘಟಿತಗೊಂಡ ವ್ಯಕ್ತಿ ಸಮುದಾಯಗಳು, ವಸಾಹತುಶಾಹಿ ಆಡಳಿತದಲ್ಲಿ ನೌಕರಿಯನ್ನು ಪಡೆದುಕೊಳ್ಳುತ್ತಾರೆ. ಅದರಲ್ಲೂ ಅಲ್ಲಿ ನೌಕರಿ ಗಿಟ್ಟಿಸಿದ ಶಿರಸ್ತೇದಾರರು, ಇತರ ಉದ್ಯೋಗಗಳನ್ನು ಭರ್ತಿ ಮಾಡುವಾಗ, ತಮ್ಮ ಶಿಫಾರಸಿನಂತೆ ತುಂಬುವಂತೆ ಮಾಡುತ್ತಿದ್ದರು. "ಜಾತಿವಾದಿ ಹಾಗೂ ಸ್ವಜನ ಪಕ್ಷಪಾತಿಗಳಾದ ಶಿರಸ್ತೇದಾರರು ಸಾಮಾನ್ಯವಾಗಿ ತಮ್ಮ ರಕ್ತ ಸಂಬಂಧಿಗಳಿಗೇ ಸರಕಾರಿ ಉದ್ಯೋಗಗಳನ್ನು ತಮ್ಮ ಸ್ವಂತ ಆಸ್ತಿಯಂತೆ ಹಂಚುತ್ತಿದ್ದರು....ಎರಡು ಜಿಲ್ಲೆಗಳಲ್ಲಿ ಸೇವೆಸಲ್ಲಿಸಿದಂತಹ ಡಿ. ಕೃಷ್ಣರಾವ್, ಕಡಪ ಮತ್ತು ಅನಂತಪುರ ಜಿಲ್ಲಾಧಿಕಾರಿಗಳ ಕಛೇರಿಗೆ ತನ್ನ ಸಂಬಂಧಿಕರ ಪೈಕಿ ಕ್ರಮವಾಗಿ ೧೧೭ ಮತ್ತು ೧೦೮ ಮಂದಿಯನ್ನು ನೇಮಿಸಿಕೊಂಡಿದ್ದರು."[೩೯] ಈ ಮಾತುಗಳು ಮೇಲ್ಜಾತಿಯವರು

ಬ್ರಿಟಿಷರ ಆಡಳಿತದಲ್ಲಿ ಅನುಭವಿಸಿದ ಅವಮಾನಕ್ಕಿಂತ ಪಡೆದದ್ದೇ ಹೆಚ್ಚು ಎಂಬುದನ್ನು ಗಮನಿಸಿದಾಗ, ಬ್ರಿಟಿಷರು ಇಲ್ಲಿನ ಅಧಿಕಾರ ಸಂಬಂಧಗಳನ್ನು ಉಳಿಸಿಕೊಂಡೇ ತಮ್ಮ ನಿಯಂತ್ರಣವನ್ನು ಕ್ರಮೇಣ ಗಟ್ಟಿಗೊಳಿಸುತ್ತಾ ಬರುತ್ತಾರೆಂಬುದು ಸ್ಪಷ್ಟವಾಗುತ್ತದೆ. ಹೀಗೆ ಬ್ರಿಟಿಷರ ಆಡಳಿತ, ಹೊಸದಾಗಿ ಶಿಕ್ಷಿತ ಮಧ್ಯಮವರ್ಗ ಉದಯವಾಗಲು ಕಾರಣವಾಗುತ್ತದೆ. ಅಲ್ಲದೆ, ಜನಸಾಮಾನ್ಯರು ಮತ್ತಷ್ಟು ಸಂಕಷ್ಟಕ್ಕೆ ಸಿಲುಕುತ್ತಾರಲ್ಲದೆ ಶಿಕ್ಷಣದಿಂದಲೂ ಹೊರಗುಳಿಯುತ್ತಾರೆ. "೧೮೯೦-೯೧ರ ಅವಧಿಯಲ್ಲಿ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಶೇಕಡ ೮೦ ವಿದ್ಯಾರ್ಥಿಗಳು ಬ್ರಾಹ್ಮಣ ಜನಾಂಗ ದವರು. ಉಳಿದವರೆಲ್ಲರ ಪ್ರಮಾಣ ಶೇ. ೧೯ ಅದರಲ್ಲೂ ಕ್ರಿಶ್ಚಿಯನ್ ವಿದ್ಯಾರ್ಥಿಗಳ ಸಂಖ್ಯೆ ಶೇ. ೯ ಎಂದ ಮೇಲೆ ಶೇ. ೯೩ ಭಾಗದ ಇತರೆ ಜನಾಂಗದಿಂದ ಶೇ. ೧೦ ವಿದ್ಯಾರ್ಥಿಗಳು ಕಾಲೇಜು ಕಲಿಯುತ್ತಿದ್ದರೆನ್ನುವುದು ಆಶ್ಚರ್ಯ ಎನಿಸಬಹುದಾದರೂ ಇದು ವಾಸ್ತವ ಸಂಗತಿಯಾಗಿದೆ. ವಸಾಹತುಶಾಹಿ ಭಾರತದಲ್ಲಿನ ಬೇರೆ ಬೇರೆ ಪ್ರಾಂತ್ಯಗಳ ಸಾಕ್ಷರತೆಯನ್ನು ಗಣನೆಗೆ ತೆಗೆದುಕೊಂಡು ಪರಿಶೀಲಿಸಿದರೆ ಬ್ರಾಹ್ಮಣ ಜನಾಂಗದವರು ದಕ್ಷಿಣದಲ್ಲಿ ಎಷ್ಟು ಮುಂದುವರೆದಿದ್ದಾರೆ ಎನ್ನುವುದು ಗೊತ್ತಾಗುತ್ತದೆ. ಭಾರತವನ್ನು ಇಡಿಯಾಗಿ ಗಮನಿಸುವಾಗ ಪ್ರತಿ ಒಂದು ಸಾವಿರ ಬ್ರಾಹ್ಮಣ ಪುರುಷರ ಪೈಕಿ ೮೯೫ ಮಂದಿ ನಿರಕ್ಷರಿಗಳಾಗಿದ್ದರೆ ದಕ್ಷಿಣದಲ್ಲಿ ಅದಕ್ಕೆ ಸಂವಾದಿಯಾದ ಸಂಖ್ಯೆ ಕೇವಲ ೨೭೮ ಆಗಿತ್ತು. ಹಾಗಾಗಿ ಪ್ರತಿ ೧೦೦೦ ಮಂದಿಗೆ ದಕ್ಷಿಣ ಭಾರತದಲ್ಲಿ ೭೨೨ ಮಂದಿ ಬ್ರಾಹ್ಮಣ ಪುರುಷರು ಸಾಕ್ಷರರಾಗಿದ್ದರು. ಒಟ್ಟು ಭಾರತದ ಸಂದರ್ಭದಲ್ಲಿ ಆ ಸಂಖ್ಯೆ ಕೇವಲ ೧೦೫ ಆಗಿದ್ದಿತ್ತು."[೪೦] ಲೇಖಕರು ನೀಡುವ ಈ ಅಂಕಿಅಂಶಗಳು ವಸಾಹತು ಸಂದರ್ಭದಲ್ಲಿ ಯಾರು ಶಿಕ್ಷಣ ಮತ್ತು ಅಧಿಕಾರಗಿಟ್ಟಿಸಿಕೊಂಡರೆಂಬುದು ಸ್ಪಷ್ಟಪಡಿಸುತ್ತವೆ. ಅಲ್ಲದೆ, ಈ ಶಿಕ್ಷಿತ ಮಧ್ಯಮ ವರ್ಗದವರೇ ೧೯ನೇ ಶತಮಾನದಲ್ಲಿ ಉದಯಿಸಿದ ರಾಷ್ಟ್ರೀಯ ಚಳವಳಿಯ ಮುಂದಾಳತ್ವ ವಹಿಸಿದ್ದನ್ನು ಲೇಖಕರು ಸ್ಪಷ್ಟಪಡಿಸುತ್ತಾರೆ. ಆದರೆ, ಇತರ ವರ್ಗಗಳು ಮತ್ತು ಜಾತಿಗಳು ಬ್ರಾಹ್ಮಣರ ಈ ಪ್ರಾಬಲ್ಯವನ್ನು ತೀವ್ರವಾಗಿ ಪ್ರತಿಭಟಿಸಿದ್ದನ್ನು ಲೇಖಕರು ದಾಖಲಿಸುವಾಗ, ಅಂದಿನ ಜಾತಿ ಪ್ರತಿನಿಧೀಕರಣಗಳು ಎಲ್ಲೆಲ್ಲಿ ಹೇಗಾದವು ಎಂಬುದಕ್ಕೆ ಬಹಳಷ್ಟು ಸಾಕ್ಷಿಗಳನ್ನು ತಮ್ಮ ಕೃತಿಯಲ್ಲಿ ನೀಡುತ್ತಾರೆ.

ಆದ್ದರಿಂದ ಕರ್ನಾಟಕದಲ್ಲಿ ಸಂಘಟಿತವಾಗಿರುವ ವರ್ತಮಾನದ ಲಿಂಗಸಂಬಂಧ ಮತ್ತು ಸಾಮುದಾಯಿಕ ಸಂಕಥನವನ್ನು ಮರುಪರಿಶೀಲಿಸುವ ಜರೂರು ಇದೆ ಎಂಬುದನ್ನು ಗಮನಿಸ ಬೇಕಾಗುತ್ತದೆ. ಅಲ್ಲದೆ ಜನಗಣತಿಯ ಸಂದರ್ಭದಲ್ಲಿ ಸಂಘಟಿತವಾದ ಪುರುಷರು ಸ್ವಯಂ ತಂತ್ರವಾದಿ ವರಸೆಯಲ್ಲಿ ಸುಧಾರಣಾ ಚಳುವಳಿಯನ್ನು ಆರಂಭಿಸುವುದನ್ನು ಕಾಣುತ್ತೇವೆ. ಅಲ್ಲಿ ಮಹಿಳೆಯರನ್ನು ಎಂದೂ ಸಮಾನವಾಗಿ ಕಾಣದೆ, ಅವರು ಒಂದು ಸಮುದಾಯದ ಭಾಗವಾಗಿ, ಆ ಸಮುದಾಯದಲ್ಲಿ ನೆಲೆಸಿರುವ ನಕಾರಾತ್ಮಕ ಅಂಶಗಳಾದ ಬಾಲ್ಯ ವಿವಾಹ,

ವಿಧವೆ ಸಮಸ್ಯೆ. ಸತಿ ಪದ್ಧತಿ ಮುಂತಾದುವುಗಳನ್ನು ಬಗೆಹರಿಸಿಕೊಳ್ಳುವ ಸ್ತ್ರೀ ಸಮಸ್ಯೆಯಾಗಿ ಸಂಕಥನಗೊಳ್ಳುತ್ತದೆ.

### ಟಿಪ್ಪಣಿಗಳು

೧. ಆರ್. ನಾಗರಾಜ್ ಹೇಳುವಂತೆ, "ವಸಾಹತುಶಾಹಿ ಘಟ್ಟದಲ್ಲಿ ಪ್ರಾರಂಭವಾದ ವಿಕೃತ ಆಧುನೀಕರಣ ನಾಡಿನ ಬಹುಸಂಖ್ಯಾತ ಜನರ ಬದುಕನ್ನು ವಿಕೃತವನ್ನಾಗಿ ಮಾಡಿದೆ. ಮೊದಲೇ ಇದ್ದ ಅಸಮಾನತೆಗಳನ್ನು ಮತ್ತಷ್ಟು ಭೀಕರವಾಗಿಸಿದೆ. ಸ್ವಾತಂತ್ರ್ಯ ಬಂದ ಮೇಲೂ ನಾವು ಅನುಸರಿಸುತ್ತಿರುವ ಅಭಿವೃದ್ಧಿ ಪಥ ಈ ವಿಕಾರ ಚಲನೆಯನ್ನು ಕೆಳಜಾತಿಗಳ ಮಟ್ಟಿಗೆ ಮತ್ತಷ್ಟು ಅಸಹನೀಯವನ್ನಾಗಿ ಮಾಡಿದೆ." ನೋಡಿ. ಡಿ.ಆರ್. ನಾಗರಾಜ್, ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೨, ಪು. ೮೧.

೨. Ronald Barthes, IMAGE-MUSIC-TEXT, Essays selected and Translated by Stephen Heath, Fontana Paperbacks, Great Britain, 1977, ಪು. ೧೪೬. "The text is a tissue of quotations drawn from the innumerable centrers of cultures".

೩. ಇದನ್ನು ಬುದ್ಧ ವಿವರಿಸುವುದು ಹೀಗೆ: ನಮ್ಮ ಎಲ್ಲಾ ಅನುಭವ, ಗ್ರಹೀತ, ಸಂವೇದನೆ, ಭಾವನೆ-ಇವೆಲ್ಲಾ ೫ ಸ್ಕಂದಗಳಿಂದಾಗುತ್ತದೆ: ರೂಪ, ಭಾವನೆ (ಸಂತೋಷ, ನೋವು ಇತ್ಯಾದಿ), ಗ್ರಹೀತಗಳು, ಸಂವೇದನೆ ಹಾಗೂ ಪ್ರಜ್ಞೆ. ಈ ಐದು ಸ್ಕಂದಗಳನ್ನು ಹೊರತುಪಡಿಸಿ ಯಾವುದೇ ಅಸ್ತಿತ್ವ ಇರಲು ಸಾಧ್ಯವಿಲ್ಲ. ಈ ಐದರ ಸಂಯೋಗ ಸ್ಥಿತಿಯನ್ನೆ ಬೌದ್ಧರು ಪಠ್ಯ ಎಂದು ಕರೆಯುವುದು. ಈ ಸ್ಕಂದಗಳೂ ಸಹ ಪರಸ್ಪರಾವಲಂಬನೆಯಿಂದಲೇ ಸಾಧ್ಯವಾಗುವುದು. ಹಾಗಾಗಿ ಬೌದ್ಧ ಮೀಮಾಂಸೆಯಲ್ಲಿ ಪಠ್ಯ ಎನ್ನೋದು ಈ ಸ್ಕಂದಗಳನ್ನವಲಂಬಿಸಿ ಸದಾ ಬದಲಾವಣೆಯಲ್ಲಿರುವಂಥದ್ದು

೪. ವಿವರಗಳಿಗೆ ನೋಡಿ, Ranjit Guha (Ed), Subaltern Studies IV, Oxford University Press, New Delhi, 1985, ಪು. 236-329.

೫. ಅದೇ ನೋಡಿ, ಪು. ೨೭೭ "Akhund, Banyan, Dalal, Gomastah, Munshi, Pandit, Shroff and Vakil".

೬. ಅದೇ ನೋಡಿ, ಪು. ೨೭೯.

೭. ವಿವರಳಿಗೆ ನೋಡಿ. Ranjit Guha (Ed), Subaltern Studies IV, Oxford University Press, New Delhi, 1985, ಪು. 279.

೮. ಅದೇ ನೋಡಿ, ಪು. ೨೭೯.

೯. ಉಧೃತ, ಡಾ. ಶ್ರೀನಿವಾಸ ಹಾವನೂರ, ಹೊಸಗನ್ನಡ ಅರುಣೋದಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೪, ಪು. ೮೬ "The father, after bowing in the manner of the sannaisi said in Latin-which he called the sacred toungue of the christians, the king's name (Leo Magnes) and then Speaking canarese, praised the king who was strong and courageous as the lion. Then he offered the sword and other small presents. The king presented the father with r silk cloth and invited him to speak further."

೧೦. ನೋಡಿ. Ranjit Guha (Ed), Subaltern Studies IV, Oxford University Press, New Delhi, 1985, ಪು. 282-283.

೧೧. ವಿವರಗಳಿಗೆ ನೋಡಿ : "Ideology is a 'representation' of the imaginary relationship of individuals to their real conditions of existence. It is not their real conditions, their existence, their real word, that 'men' represent to themselves in ideology, but above all it is thier relation to those conditions of existence which is represented to them there. It is this relation which is at the centre of every ideological i.e., imginary, representation of the real world. It is this relation that conditions the 'cause' which has to explain the imaginary distorition of the ideological representation of the real world... but above all the (imaginary) relationship of individuals to the relations of production and the relation that drive from them. Individuals are always already subjects. Hence they are 'abstract' with respect to which they always-already are. p. 162, Louis Althusser, Lenin and Philsolphy and other essays, tr. by Ben Brewster, monthly review press. Newyork, 1970.

೧೨. ನೋಡಿ : Peter van der Veer, Imperial encounters; Religion and Modernity in India and Britain, Permanent Black, 2001, p. 108, "The colonizing project turned itself inward in the German case to produce 'Internal orentalissim' in which a master race was distinguished from slave people.

೧೩. ಅದೇ ನೋಡಿ, ಪು. ೧೧೭ : "This racist ideology was given philological legitimation thorugh appropriation of the Brahminical opposition between the Aryan Master and the Shudra slave".

೧೪. ಅದೇ ನೋಡಿ, ಪು. ೧೧೭ : "Orientialist scholarship played a very different role in Germany, where is became central to inguistic and Ethnic Nationalism legitimzed by Wissenschaft, than in Britan, where nationalism came to be connected to racisd imperialsim legitimized by biological Science."

೧೫. ಉದ್ಧೃತ, ನೋಡಿ, : Peter van der Veer, Imperial encounters: Religion and Modernity in India and Britain, Permanent Black, 2001, P. 123.

೧೬. ಉದ್ಧೃತ, ನೋಡಿ, : Peter van der Veer, Imperial encounters: Religion and Modernity in India and Britain, Permanent Black, 2001, P. 123.

೧೭. ಉದ್ಧೃತ, ನೋಡಿ, : Peter van der Veer, Imperial encounters: Religion and Modernity in India and Britain, Permanent Black, 2001, P. 123. "To fix and establish sound and correct principles of religion and government has the best security which could be provided for the stability of British power in India."

೧೮. ಅದೇ ನೋಡಿ, ಪು. ೧೨೪.

೧೯. ವಿವರಗಳಿಗೆ ನೋಡಿ, Ranjit Guha (Ed) Subaltern Studies IV, Oxford unversity Press, new Delhi, 1985, hg. 308.

೨೦. ಅದೇ ನೋಡಿ, ಪು. ೩೧೫.

೨೧. ಡಾ. ಶ್ರೀನಿವಾಸ್ ಹಾವನೂರ, ಹೊಸಗನ್ನಡ ಅರುಣೋದಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೪, ಪು. ೨೪-೨೫.

ದುರ್ದೈವದಲ್ಲಿಯೇ ಇಂತಹ ದೋಷವಿದೆ. ಹಾಗಿರುವಾಗ ಅವನನ್ನು ಏಕೆ ದೂಷಿಸುವೆ?' ಎನ್ನುತ್ತಾಳೆ. ರಾಗಿಣಿಯು ಓದಿಕೊಂಡವಳು ಎಂಬ ಕಾರಣದಿಂದ ಕೆಟ್ಟ ನಡತೆಯವಳೆನಿಸಿದ್ದಾಳೆ. ಅವಳ ಪತಿಯು ಸತ್ತ ನಂತರ ಮಾವ ಅವಳನ್ನು ಬಹಳವಾಗಿಯೇ ಹಿಂಸಿಸಲಾರಂಭಿಸುತ್ತಾನೆ, ಆದರೆ ಅವಳು ಅದನ್ನೆಲ್ಲ ಮೂಕಳಾಗಿಯೇ ಸಹಿಸಿಕೊಳ್ಳುತ್ತಾಳೆ. ಇಲ್ಲಿನ ವೈರುಧ್ಯವೆಂದರೆ, 'ಸ್ತ್ರೀಗೆ ಅವಳ ಹಕ್ಕು ದಕ್ಕುವುದಿಲ್ಲ, ಹಾಗಾಗಿ ಅದನ್ನು ಅವಳು ಹೋರಾಡಿ ಪಡೆದುಕೊಳ್ಳಬೇಕು. ಪ್ರೇಮ ವಿವಾಹಗಳು ನಡೆಯಬೇಕು. ಪುರುಷರು ಸ್ತ್ರೀಯರನ್ನು ಕೇವಲ ದಯೆಯಿಂದಷ್ಟೆ ನೋಡದೆ, ಅವರೊಂದಿಗೆ ಮನಃಪೂರ್ವಕವಾಗಿ ನಡೆದುಕೊಳ್ಳಬೇಕಾದ್ದು ಅವಶ್ಯ.' ನಿರ್ಭಿಡೆಯಿಂದಲೂ ವಾದವಿವಾದದಿಂದಲೂ ಕುಶಲರಾಗಿರುವ 'ಉತ್ತರಾ' ಕಾದಂಬರಿಯಲ್ಲಿ ಈ ವಾದವನ್ನು ಮಂಡಿಸಲಾಗಿದೆ. ಕಾದಂಬರಿಯ ಕೊನೆಯಲ್ಲಿ ಬರುವ ಮದುವೆಯಾದ ನಂತರದ ಒಂದು ಸಂದರ್ಭವು ಹೀಗಿದೆ: 'ನಿಮ್ಮ ಮನುಷ್ಯರೊಂದಿಗೆ ಯಾರು ವಾದ ಮಾಡಲಾಗುತ್ತದೆ ಹುಚ್ಚೀ? ಇಲ್ಲಿ ನನಗಿರುವ ಒಂದು ಮುಖ್ಯವಾದ ಪ್ರಶ್ನೆಯೆಂದರೆ ಯಾವ ಬಗೆಯಲ್ಲೂ ವಾದ ಮಾಡದೆ ಕೇವಲ ಸೇವೆಯನ್ನಷ್ಟೇ ಮಾಡಿಕೊಂಡಿರಬೇಕು ಎಂಬುದಾಗಿ ನನಗೆ ಅನ್ನಿಸುತ್ತಿದೆ.' ಹೀಗೆ ಹೇಳುವ ಮೂಲಕ ಒಂದು ಬಗೆಯಲ್ಲಿ ಅವಳು ಪುರುಷ ವರ್ಗದೆದುರು ಶರಣಾಗುತ್ತಿರುವುದನ್ನು ಕಾಣಬಹುದು. 'ವಿವಾಹಂತಹ ಪ್ರಸಂಗವು ನಮ್ಮ ಧ್ಯೇಯಕ್ಕೆ ಅಡ್ಡಿ ಆಗುವುದಾದರೆ, ಸ್ತ್ರೀಯರು ವಿವಾಹವನ್ನೇ ಮಾಡಿಕೊಳ್ಳಬಾರದು' ಎಂಬುದಾಗಿ ನಳಿನಿಯು ಹೇಳುತ್ತಾಳೆ. ಈ ಮೂಲಕ ಸ್ಪಷ್ಟವಾಗುವುದೆಂದರೆ, ಪುರುಷರಂತೆಯೇ ಸ್ತ್ರೀಯರ ಮನಸ್ಸಿನಲ್ಲಿಯೂ ಶಿಕ್ಷಣದಿಂದ ಸಮಾಜದ ವಿಷಯವಾಗಿ ಕಾರ್ಯನಿರ್ವಹಿಸುವ ಇಚ್ಛೆಯೊಂದು ನಿರ್ಮಾಣವಾಯಿತು. ವಾ.ಮಾ. ಜೋಶಿಯವರು ಇದನ್ನು ಪ್ರಸ್ತುತಪಡಿಸುವ ಉದ್ದೇಶವನ್ನಿಟ್ಟುಕೊಂಡಿದ್ದಾರೆ ಈ ಕಾದಂಬರಿಯಲ್ಲಿ ಎಂದೆನಿಸುತ್ತದೆ.

ಅವರ 'ಸುಶೀಲೇಚಾ ದೇವ' (ಸುಶೀಲೆಯ ದೇವರು) ಎಂಬ ಕಾದಂಬರಿಯಲ್ಲಿನ ನಾಯಿಕೆಯು 'ಧ್ಯೇಯ ಹಾಚ್ ದೇವ' (ಇದೇ ಧ್ಯೇಯ ದೇವರೆ) ಎಂಬುದಾಗಿ ಮಾನ್ಯ ಮಾಡಿದವಳಾಗಿದ್ದು, ಪ್ರಚಲಿತ ವಿವಾಹ ಸಂಸ್ಥೆಯ ವಿಚಾರದಲ್ಲಿ ಅವಳ ಅಭಿಪ್ರಾಯ ಭಿನ್ನವಾಗಿರುವುದು ಕಂಡುಬರುತ್ತದೆ. 'ಪತಿಯು ಕುಡುಕನಾಗಿದ್ದು, ಮಕ್ಕಳುಮರಿಗಳ ಜೀವನವನ್ನು ಹಾಳು ಮಾಡುವವನಾಗಿದ್ದರೆ ಅಂತಹ ಪತಿಮಹಾಶಯನನ್ನು ಬಿಟ್ಟುಬಿಟ್ಟು ಮಕ್ಕಳುಮರಿಗಳನ್ನು ನೋಡಿಕೊಳ್ಳುವುದು ಯಾವುದೇ ಪಾಪದ ಕೆಲಸವಾಗುವುದಿಲ್ಲ, ಬದಲಾಗಿ ಅದು ಒಂದು ಪುಣ್ಯದ ಕಾರ್ಯವೆ ಆಗುತ್ತದೆ. ಪುರುಷರು ಪುನರ್‌ವಿವಾಹ ಮಾಡಿಕೊಂಡರೆ ನೀವು ಅದನ್ನು ವ್ಯಭಿಚಾರ ಎನ್ನುವುದಿಲ್ಲ ಅಲ್ಲವೇ? ಆದರೆ ಹೆಂಗಸರ ವಿಷಯದಲ್ಲಿ ಮಾತ್ರ ಈ ಬೇರೆಯಾದ ನ್ಯಾಯವೇಕೆ?' ಎಂಬುದಾಗಿ ನೇರವಾಗಿ ಕೇಳುವ ಸುಶೀಲಾಳ ಪಾತ್ರಚಿತ್ರಣವಿದೆ. ವಾ.ಮಾ. ಜೋಶಿಯವರದ್ದೇ ನಂತರದ ಇನ್ನೊಂದು ಕಾದಂಬರಿ 'ಇಂದು ಕಾಳೆ ವ ಸರಲಾ ಭೋಳೆ' (೧೯೩೪, ಇಂದು ಕಾಳೆ ಮತ್ತು ಸರಳಾ ಭೋಳೆ) ಎಂಬ ಪತ್ರಾತ್ಮಕ ಕಾದಂಬರಿಯು ಮುಖ್ಯವಾದುದು. 'ಧ್ಯೇಯವನ್ನು ಸಾಧಿಸು

ವುದಕ್ಕಾಗಿ ಸ್ತ್ರೀಯರು ಪುರುಷರಿಗೆ ಸಹಕಾರಿಗಳಾಗಿರಬೇಕೇ ವಿನಾ ಅವರಿಗೆ ಅಡ್ಡಿಯಾಗ ಬಾರದು. ಪುರುಷರ ಧ್ಯೇಯಗಳನ್ನು ಅವರು ತಮ್ಮದೇ ಧ್ಯೇಯಗಳಾಗಿ ಭಾವಿಸಬೇಕು'. ಹೀಗೆ ಹೇಳುವುದರೊಂದಿಗೆ ವಿನಾಯಕರಾವ್‌ನೊಂದಿಗೆ ನಡೆಯುತ್ತಾಳೆ. 'ಸರಲಾಳು ಸೂಜಿಯ ಹಿಂದೆ ಹೋಗಬೇಕು ದಾರ ಅಥವಾ ವ್ಯಕ್ತಿಯ ಹಿಂದೆ ನೆರಳು ಹೋಗಬೇಕು' ಎಂದು ಹೇಳುವ ಈಕೆಯೂ ಪತಿಯ ಹಿಂದೆಹಿಂದೆ ನಡೆಯುವ ಭಾರತೀಯ ಪತಿವ್ರತೆಯರ ಮಾಲಿಕೆಯಲ್ಲಿನ ಒಬ್ಬ ಸ್ತ್ರೀಯಂತೆ ಕಾಣಿಸುತ್ತಾಳೆ' ಎಂಬ ಮಂ.ಗ.ನಾತೂ ಅವರ ಅಭಿಪ್ರಾಯವು ಸರಿಯಾಗಿದೆ. ಸ್ತ್ರೀಯ ಮನಸ್ಸು ಮತ್ತು ಭಾವನೆಗಳ ಬಗೆಗೆ ವಿಚಾರ ಮಾಡದೆಯೇ ಜೋಶಿಯವರು ಒಂದು ನಿಟ್ಟಿನಿಂದ ಚಿತ್ರಣ ಮಾಡಿರುವಂತೆ ಕಾಣುತ್ತದೆ. ತಮ್ಮ ತತ್ತ್ವಜ್ಞಾನವನ್ನು ವಾಚಕರ ಗಂಟಲೊಳಗೆ ಇಳಿಸುವುದರ ದೆಶೆಯಲ್ಲಿಯೇ ಜೋಶಿಯವರು ಇಲ್ಲಿನ ಸ್ತ್ರೀಪಾತ್ರಗಳನ್ನು ದುಡಿಸಿಕೊಂಡಿರುವಂತಿದೆ. ಶಿಕ್ಷಣ ಪಡೆದರೂ ತಮ್ಮ ಮನೆಯನ್ನು ಸ್ತ್ರೀಯರೇ ರಕ್ಷಿಸಿಕೊಳ್ಳಬೇಕು ಎಂಬ ಪಾರಂಪರಿಕ ವಿಚಾರಗಳನ್ನೆ ವಾ.ಮಾ. ಜೋಶಿಯವರಲ್ಲಿ ಮರುಮಂಡನೆಯಾಗಿರುವಂತೆ ಕಾಣಿಸುತ್ತದೆ. 'ವಿಚಾರ-ಲಹರಿ' ಎಂಬ ಇನ್ನೊಂದು ಕೃತಿಯಲ್ಲಿಯೂ ಅವರು 'ಸ್ತ್ರೀಯರು ಮೊದಲು ಮನೆ ಮತ್ತು ಅನಂತರ ಸಮಾಜ ಎಂಬ ವಿಚಾರವನ್ನು ಸ್ವೀಕರಿಸಬೇಕು ಎಂಬುದು ನನ್ನ ಅಭಿಪ್ರಾಯ.... ಸ್ತ್ರೀಯರು ಅಪ್ರತ್ಯಕ್ಷ ಕಾರ್ಯ ಮಾಡುವುದೆ ಸೂಕ್ತ. ಪುರುಷ ಮಂಡಳಿಯು ಚೆನ್ನಾಗಿ ಊಟ ಮಾಡುವುದಕ್ಕೆ ತೊಡಗಿದರೆಂದರೆ ಅದು ಕೂಡಾ ಮಹತ್ವಪೂರ್ಣವಾದ ಸಮಾಜಕಾರ್ಯವೇ ಆಗುವುದು' ಎಂದಿದ್ದಾರೆ. ಪಾರಂಪರಿಕತೆ ಮತ್ತು ಆಧುನಿಕತೆಯ ವಿಚಾರಗಳಲ್ಲಿ ವಾ.ಮಾ. ಜೋಶಿಯವರು ಡೋಲಾಯಮಾನವಸ್ಥೆಯನ್ನು ಹೊಂದಿದ್ದಾರೆ ಎಂಬುದನ್ನು ಈ ಮೂಲಕ ಸ್ಪಷ್ಟವಾಗಿ ನೋಡಬಹುದಾಗಿದೆ. ಅಂದರೆ ಸ್ತ್ರೀಯರ ಪ್ರಶ್ನೆಗಳನ್ನು ಅವರಿಂದ ನ್ಯಾಯಪೂರ್ಣವಾದ ರೀತಿಯಿಂದ ಮಂಡಿಸುವುದಕ್ಕೆ ಸಾಧ್ಯವಾಗಿಲ್ಲ.

ಶ್ರೀಧರ ವೆಂಕಟೇಶ ಕೇತಕರ ಅವರ ಬಹುತೇಕ ಕಾದಂಬರಿಗಳ ಮುಖ್ಯ ವಿಷಯ ವಿವಾಹಪೂರ್ವ ಪ್ರೇಮ. ಸಮಾಜಶಾಸ್ತ್ರೀಯ ನೆಲೆಯ ಅಧ್ಯಯನದಿಂದ ಅವರು ತಮ್ಮ ಬರವಣಿಗೆಯನ್ನು ಮಾಡಿದ್ದಾರೆ. ಸ್ತ್ರೀ-ಪುರುಷರಲ್ಲಿನ ಪ್ರೇಮಸಂಬಂಧ, ವೈವಾಹಿಕ ಜೀವನದ ವಿಸಂವಾದ, ಬ್ರಾಹ್ಮಣೇತರ ವಾದ, ವೇಶ್ಯಾವೃತ್ತಿ ಮತ್ತು ವೇಶ್ಯಾಕನ್ಯೆಯರ ಉನ್ನತೀಕರಣದ ಪ್ರಶ್ನೆ - ಇಂತಹ ವಿಷಯಗಳನ್ನು ಅವರು ತಮ್ಮ ಕಾದಂಬರಿಗಳ ಮೂಲಕ ಕೈಗೆತ್ತಿಕೊಂಡಿದ್ದಾರೆ. 'ಗೊಂಡವನಾತೀಲ್ ಪ್ರಿಯಂವದಾ, ಪರಾಗಂದಾ, ಗಾವಸಾಸೂ ಮತ್ತು ಬ್ರಾಹ್ಮಣಕನ್ಯಾ' ಇತ್ಯಾದಿ ಕಾದಂಬರಿಗಳಲ್ಲಿ ಸ್ತ್ರೀ ಚಿತ್ರಣಗಳು ವಿಶೇಷವಾಗಿ ಬಂದಿರುವುದನ್ನು ನೋಡಬಹುದಾಗಿದೆ. ಆದರೂ 'ಪುರುಷನಿಲ್ಲದೆ ಜೀವಿಸುವುದು ಸಾಧ್ಯವಿಲ್ಲ ಎಂಬುದಾಗಿ ಕಾಲಿಂದಿಯು ಶಿವಶರಣಪ್ಪನಂತಹ ವ್ಯಾಪಾರಿಯ ಇಡುಹೆಣ್ಣಾಗಿ ಇರುವುದನ್ನು ಇಷ್ಟಪಡುತ್ತಾಳೆ'' ಎಂಬ ಉಲ್ಲೇಖವು ಬ್ರಾಹ್ಮಣಕನ್ಯಾ ಕಾದಂಬರಿಯಲ್ಲಿ ಬರುತ್ತದೆ. ಅಂದರೆ ಇಲ್ಲಿಯೂ ಪುರುಷನ ಆಧಾರವಿಲ್ಲದೆ ಸ್ತ್ರೀಗೆ ಬದುಕುವುದಕ್ಕೆ ಸಾಧ್ಯವಿಲ್ಲ ಎಂಬ ವಿಷಯವೇ ಪ್ರಭಾವಿಯಾಗಿರುವಂತೆ ಭಾಸವಾಗುತ್ತದೆ.

ಸ್ತ್ರೀಯರ ಪ್ರಶ್ನೆಗಳನ್ನು ಮುಖ್ಯವಾಗಿಟ್ಟುಕೊಂಡು ಬರೆದಂತಹ ಭಾ.ವಿ. ವರೇಕರ ಈ ಕಾಲದ ಮತ್ತೊಬ್ಬ ಪ್ರಮುಖ ಲೇಖಕರು. 'ತಂದೆಗೆ ವರದಕ್ಷಿಣೆ ಕೊಡಲು ಸಾಧ್ಯವಿಲ್ಲ ಎಂಬ ಕಾರಣದಿಂದ ಬಂಗಾಲದಲ್ಲಿದ್ದ ಸ್ನೇಹಲತಾ ಎಂಬ ಹೆಸರಿನ ಹುಡುಗಿಯು ಸ್ವತಃ ತಾನೇ ಬೆಂಕಿಹಚ್ಚಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ'. ಈ ಘಟನೆಯು ಅವರ ಮನಸ್ಸಿನ ಮೇಲೆ ಬಹಳವಾಗಿ ಪರಿಣಾಮ ಬೀರಿತು. ಅದನ್ನು ಆಧರಿಸಿ ಅವರು 'ಹಾಚ್ ಮುಲಾಚಾ ಬಾಪ್' (ಹುಡುಗನ ತಂದೆ ಇವನೇ) ಎಂಬ ನಾಟಕವನ್ನು ಬರೆದರು. ವರೇರಕರರ ಎಲ್ಲಾ ಸಾಹಿತ್ಯವೂ ಹೀಗೆ ಬೋಧನೀಯವಾಗಿದೆ. ಅವರ ಸಾಹಿತ್ಯದಲ್ಲಿ ಬರುವ ಸ್ತ್ರೀಪಾತ್ರಗಳೆಲ್ಲವೂ ದಿಟ್ಟತನದವುಳಾಗಿವೆ. 'ವಿಧವೆಯರಿಗೆ ಕುಂಕುಮವನ್ನು ಇಡುವ ಮತ್ತು ತವರಿನ ಹೆಸರನ್ನು ಇಟ್ಟುಕೊಳ್ಳುವ ಅಧಿಕಾರ ಸಿಗಬೇಕು' ಎಂಬುದಾಗಿ ಆಗ್ರಹ ಮಾಡುವ ಸ್ತ್ರೀಯರ ಚಿತ್ರಣವು 'ವಿಧವಾಕುಮಾರಿ' ಎಂಬ ಕಾದಂಬರಿಯಲ್ಲಿ ಬರುತ್ತದೆ. 'ಪುರುಷರಿಗಿಂತ ನಾವು ಯಾವುದರಲ್ಲೂ ಕಡಿಮೆ ಇಲ್ಲ, ಇದನ್ನು ತೋರಿಸುವುದಕ್ಕಾಗಿ 'ಗೋದು ಗೋಖಲೆ' ಎಂಬ ಕಾದಂಬರಿಯಲ್ಲಿ ಬರುವ ನಾಯಕಿಯೊಬ್ಬಳು ವಕೀಲಿ ವೃತ್ತಿಯನ್ನು ಹಿಡಿಯುತ್ತಾಳೆ. ಅಲ್ಲದೆ ತನ್ನ ಕರಾರುವಕ್ಕಾದ ಸ್ವಭಾವದಿಂದ ಬಾಳಾಸಾಹೇಬನನ್ನು ಹತಬಲಗೊಳಿಸುವ ಸ್ತ್ರೀಯಾಗಿರುವ 'ವೇಣು ವೇಲಣಕರ' ಅವಳ ಪಾತ್ರವು ವಿಶೇಷವಾಗಿ ಗಮನಿಸುವಂತಹದ್ದು. ಕಲಿತ ಮೇಲುವರ್ಗದವನನ್ನು ಮದುವೆಯಾಗುವುದಕ್ಕಿಂತಲೂ ಖಾನಾವಳಿಯಲ್ಲಿ ಕೆಲಸ ಮಾಡಿಕೊಂಡೊ ಅಥವಾ ಹೋಟೆಲನ್ನು ತೆರೆದು ಸ್ವತಂತ್ರ ಜೀವನವನ್ನು ನಡೆಸುವ ಹಾಗೂ ಕೈ ಹಿಡಿದ ಪುರುಷರನ್ನು ಬಿಟ್ಟುಬಿಟ್ಟು ಬದುಕುವುದನ್ನು ಇಚ್ಛಿಸುವ ಸ್ತ್ರೀಯರ ಪಾತ್ರಗಳು ವರೇರಕರ ಅವರಲ್ಲಿ ಬಹಳವಾಗಿ ಬರುತ್ತವೆ. 'ಪುರುಷನಿಗೆ ಸರಿಸಮನಾಗಿ ಮೋಟಾರಿನಲ್ಲಿ ಕುಳಿತು ಡ್ರೈವರನನ್ನು ಒಳಗೊಂಡಂತೆ ಎಲ್ಲರನ್ನೂ ಚೇಷ್ಟೆ ಮಾಡುವವಳನ್ನು 'ಬಿಜಲಿ' ಎಂದೇ ಅವರು ವರ್ಣಮಯವಾಗಿ ಚಿತ್ರಿಸಿದ್ದಾರೆ. ವಾಸ್ತವದಲ್ಲಿ ಇರುವಂತೆಯೇ ಸ್ತ್ರೀಯರನ್ನು ಚಿತ್ರಿಸುವುದೇ ವೇರೆಕರರ ಇಚ್ಛೆ, ಆದರೆ ಅವರು ತಮ್ಮ ಆದರ್ಶವಾದಿ ಕಲ್ಪನೆಯಲ್ಲಿಯೇ ಹೆಚ್ಚಾಗಿ ಸಿಲುಕಿಕೊಂಡಿರುವುದರಿಂದ ಯಾವುದೊ ರೀತಿಯಲ್ಲಿ ಉದಾತ್ತವಾಗಿರುವ ಸ್ತ್ರೀಯರೇ ಹೆಚ್ಚಾಗಿ ಅವರಲ್ಲಿ ಕಾಣಿಸಿಕೊಂಡಿದ್ದಾರೆ. ಹೀಗಿರುವುದರಿಂದಾಗಿ ಅವರ ಸ್ತ್ರೀ ವ್ಯಕ್ತಿರೇಖೆಗಳು ಒಂದೇ ಬಗೆಯಲ್ಲಿರುವಂತೆ ಭಾಸವಾಗುತ್ತದೆ.

ನಾ.ಸಿ. ಫಡಕೆ ಅವರು ಪ್ರೀತಿಭಾವನೆಯಿಂದಲೇ ತಮ್ಮ ಸಾಹಿತ್ಯದ ವಿವಿಧಾಂಗಗಳನ್ನು ಚಿತ್ರಿಸಿರುವುದನ್ನು ಕಾಣಬಹುದಾಗಿದೆ. ಅವರ ಸಾಹಿತ್ಯದಲ್ಲಿನ ಸ್ತ್ರೀ ಪಾತ್ರಗಳೆಲ್ಲ ಕೇವಲ ತಾರುಣ್ಯ ಸಹಜವಾದ ಅಥವಾ ಪ್ರೀತಿಪ್ರೇಮ ಮಾಡುವುದಕ್ಕಾಗಿಯೇ ಅವತರಿಸಿದಂತೆ ಇವೆ. ಎಂತಲೇ ಅವರು ಸುಂದರಿಯರು, ಗುಣವಂತರು, ಕರ್ತೃತ್ವಶಾಲಿಗಳು ಮತ್ತು ಶೀಲವಂತರೂ ಆದಂತಹ ನಾಯಕಿಯರನ್ನೆ ತಮ್ಮ ಸಾಹಿತ್ಯದಲ್ಲಿ ಚಿತ್ರಣಕ್ಕೆ ಆರಿಸಿಕೊಂಡಿದ್ದಾರೆ. ಪ್ರೇಮಭಂಗವಾಯಿತು ಎಂದೊಡನೆ ಈ ಸ್ತ್ರೀಯರಿಗೆ ಬಹಳ ದುಃಖವೇನು ಆಗುವುದಿಲ್ಲ. ಆದರೆ ಮತ್ತೊಂದೆಡೆಯಲ್ಲಿ ಪ್ರೇಮಭಂಗವಾಯಿತು ಎಂದೊಡನೆ ಈ ಸ್ತ್ರೀಯರಿಗೆ ಬಹಳ ದುಃಖವೋ ಆಗುವುದಿಲ್ಲ. ಆದರೆ ಮತ್ತೊಂದೆಡೆಯಲ್ಲಿ ಪ್ರೇಮವೀರನನ್ನು ಆಕೆ ಶೋಧಿಸ

ಬಲ್ಲಳು. ಪುರುಷನಿಂದಾಗಿ ತಮ್ಮ ವ್ಯಕ್ತಿತ್ವ ಕುಂಠಿತವಾಗುವುದು ಎಂಬುದು ಚಿಂತೆ ಇಲ್ಲಿನ ಸ್ತ್ರೀಯರಿಗೆ ಇಲ್ಲ. ಮಾತ್ರವಲ್ಲ, ಪುರುಷನಿಂದ ಬಲಾತ್ಕಾರಕ್ಕೆ ಒಳಗಾಗಿ ಗರ್ಭವತಿಯಾದರೂ ಇಲ್ಲಿನ ಸ್ತ್ರೀ ಶಕ್ತಿಗುಂದುವುದಿಲ್ಲ. ಅವೆಲ್ಲವನ್ನೂ ದಾಟಿ ಅವರು ಮುಂದಿನ ಜೀವನ ಪ್ರವಾಸಕ್ಕೆ ಮುಕ್ತವಾಗಿ ಅಣಿಯಾಗುವುದು ಇಲ್ಲಿ ಗಮನಿಸುವಂತಹ ಮುಖ್ಯವಾದ ಅಂಶ. ಪ್ರೇಮದ ವಿಷಯದಲ್ಲಿ ಅವರಿಗೆ ಕುಟುಂಬ ಅಥವಾ ಸಮಾಜದೆಡೆಯಿಂದ ಯಾವುದೇ ವಿಡಂಬನೆಯುಂಟಾಗುವುದಿಲ್ಲ. ಸುಶಿಕ್ಷಿತರಾಗಿರುವ ಅವರು ಸಾಮಾಜಿಕ ಕಾರ್ಯದಲ್ಲಿಯೂ ಸಹಭಾಗಿಗಳಾಗುತ್ತಾರೆ. ಜೀವನದಲ್ಲಿನ ಇತರೆ ದುಃಖಗಳನ್ನು ಕುರಿತು ವಿಚಾರ ಮಾಡುವು ದಕ್ಕಿಂತ ಆ ಪ್ರೀತಿಯಲ್ಲಿ ನಿಮಗ್ನರಾಗಿ ಇರುವುದನ್ನೇ ಅವರು ಇಷ್ಟಪಡುತ್ತಾರೆ. ಅಂದರೆ 'ಆರ್ಥಿಕ ಸ್ವಾತಂತ್ರ್ಯದಿಂದಷ್ಟೇ ಸ್ತ್ರೀಯರ ಸಮಸ್ಯೆಗಳು ಇಲ್ಲವಾಗುತ್ತವೆ ಎಂಬುದಲ್ಲ. ಅವು ಅಧಿಕ ವ್ಯಾಪಕ ಸ್ವರೂಪದವುಗಳಾಗಿರುವುವು. ಆ ಕಾರಣ ಅದಕ್ಕನುಗುಣವಾಗಿ ಸಮಾಜ ನೈತಿಕ ಕಲ್ಪನೆಗಳೂ ಬದಲಾಗುವುದು ಅತ್ಯಗತ್ಯ' ಎಂಬ 'ಉದ್ಗಾರವು' ಕಾದಂಬರಿಯಲ್ಲಿ ಮೌಲಿಕವಾದ ವಿಚಾರಗಳನ್ನು ಸ್ತ್ರೀ ಪಾತ್ರಗಳ ಚಿತ್ರಣಗಳಲ್ಲಿ ಆನುಷಂಗಿಕವಾಗಿ ಫಡಕೆಯವರು ಹೇಳಿರುವುದನ್ನು ಅವಶ್ಯವಾಗಿ ಗಮನಿಸಬೇಕು. ಫಡಕೆಯವರಂತೆಯೇ ವಿ.ಸ. ಖಾಂಡೇಕರ ಅವರನ್ನು (ಕೆಲವು ಸಂದರ್ಭಗಳನ್ನು ಬಿಟ್ಟಂತೆ ಸಾನೆ ಗುರೂಜಿಯವರು) ಬೋಧವಾದಿ ಮತ್ತು ರಂಜಕವಾದಿ ಲೇಖಕರು ಎನ್ನಬಹುದಾಗಿದೆ. ಪ್ರೇಮವು ತ್ರಿಕೋನವಾಗಿಲ್ಲ. ಆದರೆ, ರಮ್ಯತೆ ಈ ಇಬ್ಬರ ಸಾಹಿತ್ಯದಲ್ಲಿಯೂ ವಿಶೇಷವಾಗಿ  ಬಂದಿರುವುದನ್ನು ಅವಶ್ಯವಾಗಿ ಗಮನಿಸಬಹುದು. ಸಾನೆ ಗುರೂಜಿಯವರ ಸರ್ವವಾಙ್ಮಯವೂ ಸಂಸ್ಕಾರದ ನೆಲೆಯಲ್ಲಿ ರಚನೆಯಾದುವುಗಳಾಗಿವೆ. 'ಶ್ಯಾಮಚೀ ಆಈ' (ಶ್ಯಾವನ ತಾಯಿ)ಯಲ್ಲಿ ಸ್ತ್ರೀಯ ಪ್ರೇಮದ ಸ್ವರೂಪವು ಹೇಗಿದೆ ಎಂದರೆ ಅದರಾಚೆಗೆ ಮತ್ತೇನು ನಮಗೆ ನೋಡಲು ಸಾಧ್ಯವಾಗುವುದಿಲ್ಲ. ೧೯೪೪ರಲ್ಲಿ ಪ್ರಕಟವಾದ ಅವರದೆ ಆದ 'ರಾಮಾಚಾ ಶೇಲಾ' (ರಾಮನ ಶಾಲು) ಎಂಬ ಕಾದಂಬರಿಯಲ್ಲಿ ಸರಲಾ ಜನಿಸಿದೊಡನೆ ಅವಳ ತಾಯಿಯು ಮರಣ ಹೊಂದುತ್ತಾಳೆ. ಮುಂದೆ ಅವಳ ಮದುವೆಯಾಗುತ್ತದೆ. ಆದರೆ ಹದಿನೈದು ದಿನಗಳಲ್ಲಿಯೇ ಅವಳ ಗಂಡನೂ ಸತ್ತು ಹೋಗುತ್ತಾನೆ. ಹಾಗಾಗಿ ಅವಳ ತಂದೆ ಅವಳನ್ನು 'ಪಾಂಢರ್ಯಾ ಪಾಯಾಚೀ' (ದರಿದ್ರ, ಅಶುಭ) ಎಂದು ಹಿಂಸಿಸುತ್ತಾನೆ. ಹೀಗೆ ರೂಢಿ, ಸಂಪ್ರದಾಯಕ್ಕೆ ಬಲಿಯಾದ ಸ್ತ್ರೀಯೊಬ್ಬಳ ಚಿತ್ರಣವನ್ನು ನೀಡುವುದರ ಮೂಲಕ  ಸಾನೆ ಗುರೂಜಿಯವರು ಆ ಕಾಲಕ್ಕೆ ವಾಸ್ತವತೆಯನ್ನು ಅನಾವರಣಗೊಳಿಸಿದ್ದಾರೆ.

ತಮ್ಮ ಮನಸ್ಸಿನಲ್ಲಿನ ಧ್ಯೇಯಗಳ ವ್ಯಕ್ತಿರೇಖೆಗಳ ಮಾಧ್ಯಮದಿಂದ ಪೂರ್ಣಗೊಂಡ ಪಾತ್ರಗಳನ್ನು ನೋಡುವುದಕ್ಕಾಗಿಯೋ ಏನೋ? ಎಂಬಂತೆ  ಖಾಂಡೇಕರರು ವ್ಯಕ್ತಿರೇಖೆಗಳನ್ನೇ ಚಿತ್ರಿಸಿದ್ದಾರೆ. ಎಂತಲೇ ಅವರ ವಾಙ್ಮಯದಲ್ಲಿನ ಸ್ತ್ರೀಯರೆಲ್ಲ ಯಾವುದೋ ಒಂದು ಧ್ಯೇಯದಿಂದ ಕಾರ್ಯಪ್ರವೃತ್ತನಾಗಿರುವ ತರುಣನೊಂದಿಗಿನ ಪ್ರೇಮದಲ್ಲಿ ಬಿದ್ದಿರುತ್ತಾರೆ. ಇಂತಹ ಕಾರ್ಯದಲ್ಲಿ ಪುರುಷನನ್ನು ಉದಾಸೀನತೆಯು ಆವರಿಸಬಹುದು. ಆದರೆ ಅವನಲ್ಲಿ

ಉದಾಸೀನತೆಯನ್ನು ಉಂಟುಮಾಡುವುಕ್ಕೋ ಏನೋ ಎಂಬ ರೀತಿಯಲ್ಲಿದೆ. ''ಕಾಂಚನಮೃಗ' ದಲ್ಲಿನ ಬಾಲವಿಧವೆಯಾಗಿರುವ ಸುಧಾಳ ಪಾತ್ರ. ಹಾಗೆಯೇ ಉನ್ಮಾದಕ ಸೌಂದರ್ಯವನ್ನು ಹೊಂದಿರುವ ಕರುಣಾ ಕೂಡ ಇಲ್ಲಿ ಕಾಣಿಸಿಕೊಂಡಿದ್ದಾಳೆ. 'ದೋನ ಮನೇ' (ಎರಡು ಮನಸ್ಸು) ಕೃತಿಯಲ್ಲಿನ ಫಿಲ್ಮ್ ಅಭಿನೇತ್ರಿ ಬಾಳಾಸಾಹೇಬ್ ('ಶ್ರೀ'ಯ ತಂದೆ) ಮತ್ತು ಶ್ರೀ ಹೇಗೆ ಇಬ್ಬರು ಪುರುಷರನ್ನು (ತಂದೆ ಮಗ) ಪ್ರೀತಿಸುವುದುಂಟು. ಸತ್ಯಾಗ್ರಹದ ಧ್ಯೇಯದಿಂದ ಕೂಡಿದ 'ಶ್ರೀ'ಯ ಹಿಂದೆ ಅವಳು ಶೂಟಿಂಗ್ ಕಾರಣವಾಗಿ ಹಳ್ಳಿಯಲ್ಲಿಯೂ ಹೋಗಿ ವಾಸ್ತವ್ಯ ಮಾಡುತ್ತಾಳೆ. ತಾಯಿಗೆ ವಿಧವಾವಸ್ಥೆಯಲ್ಲಿ 'ಶ್ರೀ'ಯು ಜನಿಸುವನು. ಆದರೆ ಬಾಳಾಸಾಹೇಬ ಅವಳನ್ನು ಆ ಅವಸ್ಥೆಯಲ್ಲಿ ನಿರ್ದಯನಾಗಿ ಬಿಟ್ಟು ಹೋಗುತ್ತಾನೆ. ಆದರೆ ಅವಳಿಗೆ ಇದರಿಂದ ನೋವಾಗುವುದಿಲ್ಲ. 'ದಾರಿದ್ರ್ಯವಿದ್ದರೂ ಸಾಮಾಜಿಕ ಮೌಲ್ಯ ಗಳೊಂದಿಗೆ ಜಾಗರೂಕ ಧ್ಯೇಯೋನ್ಮುಖನಾಗಿರುವ ಪ್ರಿಯಕರ ಇವುಗಳ ನಡುವೆಯೇ ಖಾಂಡೇಕರರ ನಾಯಿಕೆಯರು ಓಲಾಡುತ್ತಾರೆ' ಎಂಬ ಚಂದ್ರಕಾಂತ ಬಾಂದಿವಾಡೇಕರ ಅವರ ಅಭಿಪ್ರಾಯವು ಅವರ ಎಲ್ಲಾ ಸ್ತ್ರೀ ವ್ಯಕ್ತಿ ಚಿತ್ರಣಗಳಿಗೂ ಅನ್ವಯಿಸುವಂತಹುದಾಗಿದೆ. ಈ ದೃಷ್ಟಿಯಿಂದ 'ದೋನ ಧ್ರುವ' (ಎರಡು ಧ್ರುವಗಳು) ದಲ್ಲಿನ ವತ್ಸಲಾಳ ಚಿತ್ರಣವು ಲಕ್ಷಿಸುವಂತಹದ್ದು. ಅವಳು ರಮಾಕಾಂತನೊಂದಿಗೆ ವಿವಾಹವಾಗುತ್ತಾಳೆ. ಆದರೆ ಅವನು ಅವಳನ್ನು ಕೈಬಿಡುತ್ತಾನೆ. ಸ್ತ್ರೀಯರ ಪುರುಷ ವರ್ಚಸ್ಸು ಮತ್ತು ಪರಂಪರೆಯನ್ನು ವಿರೋಧಿಸದಿ ರುವುದು ಅಥವಾ ತನ್ನ ದುರವಸ್ಥೆಯ ಬಗೆಗೆ ಅವಳಿಗೆ ದುಃಖವೆನಿಸುವುದಿಲ್ಲ. ಪುರುಷರು ಮೋಸಗೊಳಿಸಿದ ಖಾಂಡೇಕರರ ಬರಹಗಳಲ್ಲಿನ ಸ್ತ್ರೀಯರು ಸಂತೋಷದಿಂದಲೇ ಸಮಾಜ ಸೇವೆಯ ವ್ರತವನ್ನು ಕೈಗೊಂಡು ಜೀವನವನ್ನು ನಡೆಸುತ್ತಾರೆ. ಎಂತಲೇ ಖಾಂಡೇಕರರು ಚಿತ್ರಿಸಿರುವ ಸ್ತ್ರೀ ಜೀವನದ ಚಿತ್ರಣವು ಅವರ ಆದರ್ಶವಾದದಲ್ಲಿ ಮುಚ್ಚಿಹೋಗಿರುವಂತೆ ಭಾಸವಾಗುತ್ತದೆ. ಕೇವಲ ಪ್ರಣಯಿನಿಯರ ಮತ್ತು ತ್ಯಾಗಮಯ ಸ್ತ್ರೀಯರ ರೂಪವನ್ನೇ ಅವರು ಚಿತ್ರಿಸುತ್ತಾರೆ.

ಗ.ತ್ರ್ಯಂ. ಮಾಡಖೋಲಕರ ಅವರು ಪರಂಪರಾಗತ ಪುರುಷಪ್ರಧಾನ ವಿಚಾರಗಳೊಂದಿಗೆ ಅನುಸರಿಸಿ ನಡೆಯುವ ಸ್ತ್ರೀಯರನ್ನೇ ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಅವರ ಬರಹ ದಲ್ಲಿ ಮೂಡಿರುವ ಸ್ತ್ರೀಯರು ಸಹನಶೀಲ, ಸಮರ್ಪಣಶೀಲ ಮತ್ತು ತ್ಯಾಗಶೀಲ ಗುಣವುಳ್ಳ ವರಾಗಿದ್ದಾರೆ. 'ಭಂಗಲೇಲೆ ದೇಊಳ' (ಭಗ್ನವಾದ ದೇವಾಲಯ) ಎಂಬ ಕಾದಂಬರಿಯಲ್ಲಿ ಬರುವ ಅನು ಎಂಬುವವಳು ಗಂಡನಿಂದ ದೂರವಾಗುತ್ತಾಳೆ. ಆದರೂ ಅವಳಿಗೆ ವಿವಾಹ ಸಂಸ್ಥೆಯ ಅವಶ್ಯಕತೆ ಬೇಕಾಗುತ್ತದೆ. 'ಶಾಪ' ಕಾದಂಬರಿಯಲ್ಲಿನ ಕಾಂತಾ 'ಸ್ತ್ರೀಯು ಬಿಗುವುಳ್ಳ ಉಸಿರುಗಟ್ಟಿಸುವಂತಹ ಪರಿಸ್ಥಿತಿಯನ್ನು ಸಹಿಸಿಕೊಂಡು ಬದುಕಬೇಕಾಗುತ್ತದೆ' ಎಂಬುದಾಗಿ ಹೇಳುತ್ತಾಳೆ. ಆದರೆ ಅವರದೆ ಆದ 'ಚಂದನವಾಡೀ' ಎಂಬ ಕಾದಂಬರಿಯಲ್ಲಿ ಬರುವ ರಖಿಮಾ ಎಂಬುವವಳು ತನ್ನ ಗಂಡನ ಅನಂತರ ಮನಸ್ಸನ್ನು ಹಿಡಿದುಕೊಂಡು ವಿಧವೆಯ ಜೀವನದ ಆಚೆಗೆ ಮತ್ತೇನನ್ನು ಯೋಚಿಸಲು ಸಾಧ್ಯವಾಗುವುದಿಲ್ಲ. ಪುರುಷ ಲೇಖಕರಂತೆಯೇ

ಈ ಕಾಲಖಂಡದಲ್ಲಿ ಕೃಷ್ಣಾಬಾಯಿ (ಮುಕ್ತಾಬಾಯಿ ದೀಕ್ಷಿತ್), ಲಕ್ಷ್ಮಿಬಾಯಿ ಟಿಳಕ್, ಕಮಲಾಬಾಯಿ ಟಿಳಕ್, ಆನಂದಾಬಾಯಿ ಕಿರ್ಲೋಸ್ಕರ್, ಕುಸುಮಾವತಿ ದೇಶಪಾಂಡೆ ಇತ್ಯಾದಿ ಪ್ರಮುಖ ಲೇಖಕಿಯರೂ ಬರವಣಿಗೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಕೃಷ್ಣಾಬಾಯಿಯವರ 'ಆಮಚೇ ದಾಸ' ಎಂಬ ಕಥೆಯಲ್ಲಿ ಮೆಟ್ರಿಕ್ ಪಾಸುಮಾಡಿರುವ ಹುಡುಗಿಯೊಬ್ಬಳು ಮದುವೆ ಮಾಡಿಕೊಳ್ಳಬಾರದೆಂಬ ನಿರ್ಣಯವನ್ನು ತೆಗೆದುಕೊಳ್ಳುತ್ತಾಳೆ. ಆದರೆ ಮುಂದೆ ಅವಳ ಮದುವೆಯು ಒಬ್ಬ ಪ್ರಾಧ್ಯಾಪಕನೊಂದಿಗೆ ಆಗುತ್ತದೆ. ಅಲ್ಲಿ ಪತಿಯ ಹುಕುಂಶಾಹಿಯ ಪ್ರತ್ಯಯವು ಕಂಡುಬರುತ್ತದೆ. ಆ ಕಾರಣವಾಗಿ ಅನಂತರ ಅವಳು ಬಿ.ಎ. ಮುಗಿಸಿ ಸಮಾಜಸೇವೆಯ ಕಾರ್ಯದಲ್ಲಿ ತೊಡಗುತ್ತಾಳೆ. ಆದರೆ ಅಲ್ಲಿಯೂ ಅವಳಿಗೆ ಮೋಸ, ಖೊಟ್ಟಿತನವೇ ಕಾಣುತ್ತದೆ. ಅದರಿಂದ ಬೇಸರಗೊಂಡ ಆಕೆ ಪುನಃ ತನ್ನ ಪತಿಯ ಮನೆಗೆ ಬರುತ್ತಾಳೆ. ಹೀಗೆ ಇಲ್ಲಿ 'ಸ್ತ್ರೀಸ್ವಾತಂತ್ರ್ಯದ ಸೋಲನ್ನು ತೋರಿಸಲಾಗಿದೆ. ಈ ಕಥೆಯಲ್ಲಿ ಪಾರಂಪರಿಕವಾದ ದೃಷ್ಟಿಕೋನದಿಂದಲೇ ಸ್ತ್ರೀಯರನ್ನು ಚಿತ್ರಣ ಮಾಡಲಾಗಿದೆ'. ಅವರದೇ ಇನ್ನೊಂದು ಕಥೆ 'ವರ್ಷಾವ್' (ಮಳೆ) ಎಂಬಲ್ಲಿ ಪ್ರಾಧ್ಯಾಪಕಿಯೊಬ್ಬಳು ಮದುವೆಯ ಬಗೆಗೆ ಉದಾಸೀನತೆಯುಳ್ಳವಳಾಗಿದ್ದಾಳೆ. ಒಮ್ಮೆ ಅವಳು ಅಧ್ಯಯನದಲ್ಲಿ ಮಗ್ನಳಾಗಿದ್ದಾಗ ಪ್ರಾಧ್ಯಾಪಕನೊಬ್ಬನು ಅವಳನ್ನು ತನ್ನ ಬಾಹುಪಾಶಕ್ಕೆ ಎಳೆಯುತ್ತಾನೆ. ಆದರೆ ಅವಳು ಅದಕ್ಕೆ ಪ್ರತಿಕಾರವನ್ನೇನು ಮಾಡುವುದಿಲ್ಲ. 'ಅಂದರೆ ಒಬ್ಬಂಟಿಯಾಗಿ ಇರುವ ವಿಷಯದಲ್ಲಿ ಸ್ತ್ರೀ ಇನ್ನು ಅಸಮರ್ಥಳಾಗಿದ್ದಾಳೆ' ಎಂಬ ವಿಚಾರವನ್ನೇ ಕೃಷ್ಣಾಬಾಯಿಯವರು ಈ ಕಥೆಯ ಮೂಲಕ ಮಂಡಿಸುತ್ತಿದ್ದಾರೆ ಎಂದೆನಿಸುತ್ತದೆ.

೧೯೩೩ರಲ್ಲಿ ಪ್ರಕಟವಾದ ವಿಭಾವರಿ ಶಿರೂರಕರ (ಮಾಲತಿ ಬೇಡೇಕರ) ಅವರ 'ಕಳ್ಯಾಂಚೇ ನಿಃಶ್ವಾಸ' (ಮೊಗ್ಗುಗಳ ನಿಃಶ್ವಾಸ) ಎಂಬ ಕಥಾ ಸಂಗ್ರಹದಲ್ಲಿ ಸ್ತ್ರೀಯರ ದುಃಖವನ್ನು ವಾಸ್ತವ ರೀತಿಯಲ್ಲಿ ವ್ಯಕ್ತವಾಗಿದೆ. ಸ್ತ್ರೀಯರು ಮನಸ್ಸನ್ನು ಕೊಂದುಕೊಂಡು ಏತಕ್ಕೆ ಬದುಕಬೇಕು? ಎಂಬಂಥ ಹಲವು ಪ್ರಶ್ನೆಗಳನ್ನು ನಿರ್ಮಿಸುವುವಾಗಿವೆ ಇವರ ಕಥೆಗಳು. ಸ್ತ್ರೀತ್ವದ ನೈಸರ್ಗಿಕ ಇಚ್ಛೆಯನ್ನು ಅಡಗಿಸಿ ತಾಯಿ-ತಂದೆ ಮತ್ತು ಸಹೋದರ-ಸಹೋದರಿಯರನ್ನು ನೋಡಿಕೊಳ್ಳುತ್ತಿದ್ದ ಪ್ರೌಢ ಕುಮಾರಿಯೊಬ್ಬಳು ಕೇಳುತ್ತಾಳೆ. 'ಬಾಬಾಂಚಾ ಸಂಸಾರ, ಮಾಝಾ ಕಸಾ ಹೋಣಾರ್?' (ತಂದೆಯ ಸಂಸಾರ ನನ್ನದು ಹೇಗಾಗುತ್ತದೆ?). ಅವರದೆ ಇನ್ನೊಂದು ಕಥೆ 'ಅವಿನಾಶ್' ಎಂಬುದರಲ್ಲಿ ಒಬ್ಬ ತಂದೆಯು ತನ್ನ ಮಗಳ ಮನಸ್ಸಿಗೆ ವಿರುದ್ಧವಾಗಿ ಅವಳನ್ನು ಒಬ್ಬ ಒಬ್ಬ ಶ್ರೀಮಂತನಿಗೆ ಮದುವೆ ಮಾಡಿಕೊಟ್ಟು ಅವಳ ಜೀವನವನ್ನು ಸರ್ವನಾಶ ಮಾಡುವ ಚಿತ್ರಣವು ಬಂದಿದೆ. ಹುಡುಗಿ ವಿದ್ಯಾವಂತಳಾಗಿದ್ದರೂ ಸಹ ಯಾವುದೇ ಬಗೆಯ ವಿಚಾರಗಳನ್ನು ಕುರಿತು ಸ್ವಂತವಾಗಿ ಇಂದಿಗೂ ನಿರ್ಣಯವನ್ನು ತೆಗೆದುಕೊಳ್ಳುವುದಕ್ಕೆ ಸಾಧ್ಯವಾಗುತ್ತಿಲ್ಲ ಎಂಬ ವಿಚಾರವನ್ನೆ ಈ ಕಥೆಯ ಮೂಲಕ ಶಿರೂರಕರ ಅವರು ಹೇಳಿರುವುದು.

ಈ ಕಾಲಖಂಡದಲ್ಲಿನ ಬಹುತೇಕ ಲೇಖಕರು ಈ ರೀತಿಯಾಗಿ ತಮ್ಮ ಭಾವನೆಗಳು ಹೇಗಿವೆಯೋ ಹಾಗೆ ಅಥವಾ ಸ್ತ್ರೀ ತಮಗೆ ಹೇಗೆ ಕಾಣಿಸುತ್ತಿದ್ದಳೋ ಹಾಗೆ ಚಿತ್ರಿಸುವ

ಪ್ರಯತ್ನವನ್ನು ಮಾಡುತ್ತಿದ್ದರೆಂಬುದು ಗಮನಾರ್ಹ. ಸ್ತ್ರೀಯರಿಗೆ ಶಿಕ್ಷಣ ನೀಡುವುದರ ಮೂಲಕ ಅವರನ್ನು ಜಾಗೃತಿಗೊಳಿಸಬಹುದು ಮತ್ತು ಆ ಮೂಲಕ ಅವಳಲ್ಲಿ ಹಕ್ಕುಗಳ ಅರಿವನ್ನು ಉಂಟುಮಾಡಬಹುದು ಎಂಬ ಉದ್ದೇಶದಿಂದ ಈ ಕಾಲಖಂಡದಲ್ಲಿನ ಲೇಖಕರು ಸ್ತ್ರೀ-ಚಿತ್ರಣ ಮಾಡುತ್ತಿದ್ದರು. ಎಂತಲೇ ಸ್ತ್ರೀಯರ ಬಗೆಗೆ ಸಹಾನುಭೂತಿಯನ್ನು ಈ ಲೇಖಕರು ಪ್ರಬೋಧಿಸುವ ಉದ್ದೇಶದ ಕಾರಣವಾಗಿಯೇ ವ್ಯಕ್ತಪಡಿಸಿದ್ದಾರೆ. ಆದರೆ ಮರಾಠಿ ಲೇಖಕರ ಅನುಭವ ವಿಶ್ವವು ಸೀಮಿತ ಮರ್ಯಾದೆಯನ್ನು ಉಳ್ಳುದಾಗಿದೆ. ಅಂದರೆ ಕುಟುಂಬದ ಮರ್ಯಾದೆಯನ್ನು ಗಮನದಲ್ಲಿ ಇಟ್ಟುಕೊಂಡೇ ಅವರು ಸ್ತ್ರೀಯರ ಬಗೆಗೆ ಚಿತ್ರಿಸಿದ್ದಾರೆ. ಆ ಕಾರಣಕ್ಕಾಗಿ ಸ್ತ್ರೀಯ ಮಾನಸಿಕತೆಯ ಪ್ರಭಾವೀ ಚಿತ್ರಣಗಳಾಗಿ ಇವನ್ನು ಪರಿಗಣಿಸಲು ಸಾಧ್ಯವಾಗುವುದಿಲ್ಲ. ಸ್ತ್ರೀ-ಚಿತ್ರಣದಲ್ಲಿ ಹೇಳಿಕೊಳ್ಳುವಷ್ಟು ಸೂಕ್ಷ್ಮವಾದುದೇನು ಕಂಡುಬರುವುದಿಲ್ಲ. ಕೇವಲ ರಂಜಕತೆಯ ಪ್ರೇಮದಲ್ಲಿ ನಿಮಗ್ನವಾಗಿರುವ ಸ್ತ್ರೀಯರನ್ನು ಅವರು ರಂಗುರಂಗವಾಗಿ ಚಿತ್ರಿಸಿದ್ದಾರೆ. ಸ್ತ್ರೀಯ ಜೀವನದಲ್ಲಿನ ದುಃಖ ಏಕೆ ಮತ್ತು ಹೇಗೆ ನಿರ್ಮಾಣವಾಗುತ್ತದೆ ಎಂಬುದರ ಬಗೆಗೆ ಈ ಲೇಖಕರು ಚಿತ್ರಣ ಮಾಡುವುದರತ್ತ ಗಮನಹರಿಸಿಲ್ಲ. ಬಾಲಚಂದ್ರ ಫಡಕೆ ಅವರು ಹೇಳಿರುವಂತೆ 'ಮರಾಠಿಯಲ್ಲಿ ಜೀವಿಸುತ್ತಿರುವವರೇ ಬೇರೆ ಮತ್ತು ಬರೆಯುತ್ತಿರುವವರೇ ಬೇರೆ'. ಹಾಗಾಗಿಯೆ ಯಾಂತ್ರಿಕ ಪದ್ಧತಿಯ ರೀತಿಯಲ್ಲಿ ಸ್ತ್ರೀ ಚಿತ್ರಣವಾಗಿರುವುದು ಕಾಣುವುದಕ್ಕೆ ಸಿಕ್ಕುತ್ತದೆ.

### ಸ್ವಾತಂತ್ರ್ಯೋತ್ತರ ಕಾಲಖಂಡದಲ್ಲಿನ ಸ್ತ್ರೀ ಚಿತ್ರಣದ ಸ್ವರೂಪ

ಸ್ವಾತಂತ್ರ್ಯೋತ್ತರ ಮರಾಠಿ ಸಾಹಿತ್ಯದಲ್ಲಿ ಬೇರೆ ಬೇರೆ ಸಮಾಜ ವರ್ಗದಿಂದ ವಿವಿಧ ವಿಷಯಗಳ ಮೇಲೆ ಬರೆಯುವುದಕ್ಕೆ ಆರಂಭಿಸಿದ ಲೇಖಕ ವರ್ಗವು ಮುಂದೆ ಬಂದಿತು. ಸ್ವಾತಂತ್ರ್ಯದಿಂದಾಗಿ ಭಾರತೀಯರಲ್ಲಿ ನೆಲೆಗೊಂಡಿದ್ದ ಔದಾಸೀನ್ಯತೆಯ ದೂರವಾಯಿತೆಂದು ಹೇಳಬಹುದು. ಜೊತೆಗೆ ವ್ಯಕ್ತಿ ಸ್ವಾತಂತ್ರ್ಯಕ್ಕೆ ಗೌರವವೂ ಪ್ರಾಪ್ತವಾಗಲಾರಂಭಿಸಿತು. ಈ ಮೊದಲು ಅಲ್ಪಸ್ವಲ್ಪ ಶಿಕ್ಷಣ ಪಡೆದು ಕಚೇರಿಯಲ್ಲಿ ಮತ್ತು ಇತರೆಡೆ ಕೆಲಸ ಮಾಡುತ್ತಿದ್ದಂಥ ಸ್ತ್ರೀಯರು ಈಗ ಪುರುಷರಿಗಿಂತಲೂ ಅಧಿಕ ಶಿಕ್ಷಣವನ್ನು ಪಡೆದು ಗೌರವಯುತವಾದ ಸ್ಥಾನಗಳಲ್ಲಿ ಕಾರ್ಯನಿರ್ವಹಿಸಲು ಆರಂಭಿಸಿದ್ದಳು. ವೈಜ್ಞಾನಿಕ ಪ್ರಗತಿಯಿಂದಾಗಿ ಮತ್ತು ಔದ್ಯೋಗೀಕರಣದಿಂದಾಗಿ ಒಮ್ಮೆಗೆ ಮಾನವ ಬದುಕಿನಲ್ಲಿ ಬದಲಾವಣೆಗಳು ಘಟಿಸಲಾರಂಭಿಸಿದವು. ಸಂತತಿ ನಿಯಂತ್ರಣ, ಅರ್ಥಾರ್ಜನೆ ಮತ್ತು ಸಮಾನ ಅವಕಾಶ ಇವುಗಳಿಂದಾಗಿ ಸ್ತ್ರೀಯರ ಜೀವನದಲ್ಲಿಯೂ ಗಮನಾರ್ಹ ಬದಲಾವಣೆಗಳು ಸಂಭವಿಸಿದವು. ತನ್ನ ಬದುಕಿನಲ್ಲಾದ ಬದಲಾವಣೆಯ ಸ್ವರೂಪವೂ ತೀವ್ರತರದಲ್ಲಿ ವ್ಯಕ್ತವಾಗತೊಡಗಿತ್ತು. ಹೀಗೆ ಬದಲಾವಣೆಯ ಕಾಲಖಂಡದಲ್ಲಿ ಉಂಟಾದ ವಿಚಾರಗಳ ಹಿನ್ನೆಲೆಯಲ್ಲಿ ಮರಾಠಿ ಸಾಹಿತ್ಯದಲ್ಲಿ ಸ್ತ್ರೀಯರ ಚಿತ್ರಣಗಳು ಹೇಗೆ ಬಂದವು ಎಂಬುದನ್ನು ಕುರಿತು ಇಲ್ಲಿ ವಿಚಾರ ಮಾಡಬಹುದು. ಈ ಕಾಲಖಂಡದಲ್ಲಿ ಗಂಗಾಧರ ಗಾಡ್ಗೀಳ, ಅರವಿಂದ ಗೋಖಲೆ, ಪ್ರ.ಭಾ. ಭಾವೆ, ವೆಂಕಟೇಶ ಮಾಡಗೂಳಕರ, ಶ್ರೀ.ನಾ. ಪೆಂಡಸೆ, ಗೋ.ನೀ. ದಾಂಡೇಕರ, ಚಿಂ.ತ್ರ್ಯಂ.

ಖಾನೋಲಕರ, ಉದ್ಧವ ಶೇಳಕೆ, ಜಯವಂತ ದಳವಿ, ಬಾಲಚಂದ್ರ ನೇಮಾಡೆ, ರಣಜಿತ್ ದೇಸಾಯಿ ಇತ್ಯಾದಿ ಪ್ರಮುಖ ಲೇಖಕರನ್ನು ಅವಶ್ಯ ಗಮನಿಸಲೇಬೇಕೆಂಬ ರೀತಿಯಲ್ಲಿ ಸಾಹಿತ್ಯವು ರಚನೆಯಾಗಿದೆ.

ಚಿಂ.ತ್ರ್ಯಂ. ಖಾನೋಲಕರ, ಶ್ರೀ.ನಾ. ಪೆಂಡಸೆ, ಜಿ.ಎ. ಕುಲಕರ್ಣಿ ಮತ್ತು ಗೋ.ನೀ. ದಾಂಡೇಕರ ಅವರುಗಳ ಸಾಹಿತ್ಯದಲ್ಲಿನ ಸ್ತ್ರೀಯರು ತಮ್ಮ ಪಾಲಿಗೆ ಬಂದ ಜೀವನದ ಬಗೆಗೆ ಯಾವುದೇ ಬಗೆಯ ತಕರಾರುಗಳನ್ನು ಎತ್ತುವುದಿಲ್ಲ. ಚಿಂ.ತ್ರ್ಯಂ. ಖಾನೋಲಕರ ಮತ್ತು ಜಿ.ಎ. ಕುಲಕರ್ಣಿಯವರ ಕಥೆ-ಕಾದಂಬರಿಗಳಲ್ಲಿನ ಸ್ತ್ರೀಯರು ನಿಯತಿಯ (ವಿಧಿ) ಫಲವಾಗಿಯೇ ಇದು ನಮ್ಮ ಜೀವನದಲ್ಲಿ ಘಟಿಸುತ್ತಿದೆ ಎಂಬುದಾಗಿ ಸುಮ್ಮನಿರುತ್ತಾರೆ. ಪುರುಷ ತನ್ನ ಗುಲಾಮಳಂತೆ ಉಪಯೋಗಿಸಿಕೊಳ್ಳುತ್ತಾನೆ ಎಂಬುದರ ಅರಿವು ಸಹ ಪೆಂಡಸೆಯವರ ಸಾಹಿತ್ಯದಲ್ಲಿನ ಸ್ತ್ರೀಯರಿಗೆ ಆಗುವುದಿಲ್ಲ. 'ನಮ್ಮ ಮಾಲಕರ ಹೇಳಿಕೆಯ ಅನುಸಾರ ಹುಚ್ಚಾಗಿ ಕುಣಿಯುವ ರಾವ್‌ಜಿಯೊಂದಿಗೆ ಮದುವೆ ಮಾಡಿಕೊಡುವ ಮತ್ತು ಅವನು ಹೇಳಿದ ರೀತಿಯಲ್ಲಿಯೇ ಅವನೊಂದಿಗೆ ಹೋಗುವ ರಾಧಾ ಎಂಬ ಸ್ತ್ರೀಯನ್ನು ಪೆಂಡಸೆಯವರು 'ಗರೀಬಾಂಚಾ ಬಾವು' (ಬಡವರ ತಂದೆ) ಎಂಬ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. 'ರಥಚಕ್ರ' ಎಂಬ ಕಾದಂಬರಿಯಲ್ಲಿ ಬರುವ ಒಬ್ಬ ಸ್ತ್ರೀಯೊಬ್ಬಳು ಒಬ್ಬ ಸಂನ್ಯಾಸ ವೃತ್ತಿಯವನೊಂದಿಗೆ ಮದುವೆಯಾಗುತ್ತಾಳೆ. ಆತ ನಾಲ್ಕು ಮಕ್ಕಳಾದ ಮೇಲೆ ಅವಳನ್ನು ಬಿಟ್ಟು ಹೋಗುತ್ತಾನೆ. ಆದರೂ ಆಕೆ ಅವನನ್ನು ಕುರಿತು ಏನನ್ನೂ ಕೇಳುವುದಿಲ್ಲ. ಬದಲಾಗಿ ಮನೆಯ ಇತರರ ಕಾರಣವಾಗಿ ಹಿಂಸೆಯಾಗುತ್ತದೆ. ಮೇಲೆ ಉಲ್ಲೇಖಿಸಿದ ಲೇಖಕರೆಲ್ಲರ ಬರಹಗಳಲ್ಲಿನ ಸ್ತ್ರೀಯರು ದೈಹಿಕವಾಗಿ ಸಮರ್ಥರಾಗಿರುತ್ತಾರೆ. ಭೋಗವಸ್ತು ಎಂದೇ ಅವರಿಗೆ ಕಾದಂಬರಿಕಾರರು ತಮ್ಮಲ್ಲಿ ಪ್ರವೇಶ ನೀಡಿರುವಂತೆ ಕಾಣುತ್ತದೆ. ಸ್ತ್ರೀಯರನ್ನು ವಿಧವಿಧವಾಗಿ ಕಾಣುವಂತೆ ಮಾಡುವ ದೃಷ್ಟಿಯಿಂದಲೇ ಅವರು ರಂಜಕತೆಯ ಚಿತ್ರಣದ ಉದ್ದೇಶವನನ್ನು ಇಟ್ಟುಕೊಂಡು ಬರೆದಿದ್ದಾರೆ. ಅವರ ದೈಹಿಕ ವರ್ಣನೆ, ಪುರುಷರೊಂದಿಗಿನ ಸಮಾಗಮದ ಚಿತ್ರಣವನ್ನು ಅತ್ಯಂತ ಸಮರಸತೆಯಿಂದ ಮಾಡಿರುವುದನ್ನು ಕಾಣಬಹುದು. ಈ ವಿಷಯದಲ್ಲಿ ಚಿಂ.ತ್ರ್ಯಂ. ಖಾನೋಲಕರ ಅವರ 'ಪಾಷಾಣ ಪಲ್ಲವಿ' ಎಂಬ ಕಾದಂಬರಿಯಲ್ಲಿನ ಸ್ತ್ರೀಯ ಚಿತ್ರಣವನ್ನು ಅವಶ್ಯವಾಗಿ ಗಮನಿಸುವಂತಿದೆ. 'ಪ್ರಿಯಕರರು ನಮ್ಮೊಂದಿಗೆ ಹೇಗೆ ಪ್ರಣಯ ಮಾಡಿದರು ಎಂಬುದಾಗಿ ಒಬ್ಬಾಕೆ ಟಿ.ಬಿ. ಖಾಯಿಲೆಯಿಂದ ನರಳುತ್ತಿದ್ದ ತನ್ನ ಗಂಡನೊಂದಿಗೆ ಹೇಳುತ್ತಾಳೆ'. 'ವಸಂತರಾವ್‌ನು ನನ್ನ ಮೈಮೇಲಿನ ವಸ್ತ್ರಗಳನ್ನು ತೆಗೆದನು, ನನ್ನ ಶರೀರವು ಹೇಗೆ ತಾಪಗೊಂಡಿತೆಂದರೆ ನನ್ನ ಎದೆಯು ಹೇಗೆ ಹಿಂಡಿತೆಂದರೆ....' ಅವರದೇ ಆದ 'ಅಗೋಚರ' ಎಂಬ ಕಾದಂಬರಿಯಲ್ಲಿನ ಚಿತ್ರಣ. 'ಭಕ್ತಗಣ ನಂದಿನಿಯ ದೇಹದ ಮೇಲೆ ನಗ್ನವಾಗಿ ಕುಣಿಯುತ್ತಿದ್ದರು. ಯಾರೋ ಅವಳ ಮುಂಗುರುಳನ್ನು ಎಳೆಯುತ್ತಿದ್ದರೆ, ಮತ್ತಾರೋ ಅವಳ ಕುಪ್ಪುಸವನ್ನು ಹರಿದು ಅವಳ ಘನ ಕುಚಗಳನ್ನು ಒತ್ತುತ್ತಿದ್ದರು'. ಈ ಬಗೆಯಲ್ಲಿ ಪುರುಷರ ಪೀಡನೆಗೆ ಬಲಿಯಾಗುತ್ತಿದ್ದರು ಎಂಬುದನ್ನು

ತೋರಿಸಿಕೊಡುವಲ್ಲಿನ ಖಾನೋಲಕರರ ಪ್ರಯತ್ನ. ಅಂದರೆ ರತಿಕ್ರೀಡೆಯ ವಿನಾ ಯಾವುದೇ ಕೆಲಸವಿಲ್ಲ ಸ್ತ್ರೀಯರಿಗೆ, ಹಾಗೆಯೇ ಅದೊಂದೇ ಕಾರಣದಿಂದಾಗಿ ಅವಳ ನಾಶವಾಗುತ್ತದೆ ಎಂಬ ಧೋರಣೆಯ ಚಿತ್ರಣಗಳು ಬಂದಿವೆ.

ದಾಂಡೇಕರರ 'ಶೀತೂ' ಎಂಬ ಕಾದಂಬರಿಯಲ್ಲಿನ ಶೀತೂ ಎಂಬಾಕೆಯು ಅವಳ ಇಬ್ಬರು ಗಂಡಂದಿರು ಮರಣ ಹೊಂದಿದ ಕಾರಣವಾಗಿ ದುರಾದೃಷ್ಟದವಳು ಎನಿಸಿ ಕೊಳ್ಳುತ್ತಾಳೆ. ಆದರೆ ಅವರದೇ ಇನ್ನೊಂದು ಕಾದಂಬರಿಯಾದ 'ಜೈತ ರೇ ಜೈತ' (ಜಯ ಸಾಧಿಸು ಜಯ) ಎಂಬುದರಲ್ಲಿನ ಚಿಂಧೀ ಎಂಬಾಕೆ ತನ್ನ ಗಂಡನು ತಿಳಿಗೇಡಿ (ಹುಚ್ಚ)ಯಾಗಿದ್ದ ಕಾರಣವಾಗಿ ಇನ್ನೊಂದು ಮದುವೆ ಮಾಡಿಕೊಳ್ಳುತ್ತಾಳೆ. ಯಾರೋ ಸಾಧುವಿನ ಜೀವನದಲ್ಲಿ ಪ್ರೇಮವನ್ನು ಅರಳಿಸುವುದಕ್ಕೋಸ್ಕರವಾಗಿಯೇ ಯಶೋದಾ ಎಂಬುವವಳ ಪಾತ್ರ ಚಿತ್ರಣವೊಂದು 'ಕುಣ್ ಏಕಾಚೇ ಭ್ರಮಣಗಾಥಾ' (ಯಾರೋ ಒಬ್ಬರ ಭ್ರಮಣಗಾಥೆ) ಎಂಬ ಕಾದಂಬರಿಯಲ್ಲಿ ಬರುತ್ತದೆ. ದಾಂಡೇಕರರ ಬರಹದಲ್ಲಿ ಮೂಡಿ ಬಂದಿರುವ ಈ ಸ್ತ್ರೀಯರೆಲ್ಲ ಪರಂಪರೆಯ ಅನುಸಾರವೇ ಜೀವನ ನಡೆಸುವವರಾಗಿದ್ದಾರೆ.

'ಋಷಿಯ ಹುಚ್ಚು ಬಿಟ್ಟು ಹೋಗಬೇಕು ಎಂಬುದಕ್ಕಾಗಿ ತನ್ನ ಮನಸ್ಸನ್ನು ಕೊಂದು ಕೊಂಡು ಅವನ ಸೇವೆಯಲ್ಲಿ ತೊಡಗಿಕೊಳ್ಳುವ ಶೇವಂತಿ ಎಂಬಾಕೆಯ ಪಾತ್ರವು ಬಾ.ಭ. ಬೋರಕರರ 'ಭಾವೀಣ' (ದೇವದಾಸಿ) ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಆದರೆ ಇಲ್ಲಿಯೇ ಬರುವ ಫುಲಿಯಾ ಎಂಬಾಕೆಯು ಮಾಟಗಾತಿಯಾಗಿದ್ದಾಳೆ ಎಂಬ ವದಂತಿಯನ್ನು ಹುಟ್ಟಿಸಿದ ಅವಳನ್ನು ಅದೇ ಭಾವನೆಯಿಂದ ನೋಡುತ್ತಾರೆ ಆದಿವಾಸಿಗಳು. ಅದನ್ನು ಸಹಿಸಿಕೊಳ್ಳಲಾಗದ ಫುಲಿಯಾಳು ನದಿಯ ಆಳಕ್ಕೆ ಬಿದ್ದು ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾರೆ. ಈ ಹಿನ್ನೆಲೆಯಲ್ಲಿ ದುರ್ಗಾ ಭಾಗವತರು 'ಮಹಾನದೀಜಾ' (ಮಹಾನದಿಯ ತೀರದಲ್ಲಿ) ಎಂಬ ಕಾದಂಬರಿಯಲ್ಲಿ ಸ್ತ್ರೀಯರ ಮೇಲಾಗುವ ಅತ್ಯಾಚಾರವನ್ನು ಕೆಲವೊಂದು ರೀತಿಯಲ್ಲಿ ವರ್ಣಿಸಿದ್ದಾರೆ.

ವೆಂಕಟೇಶ ಮಾಡಗೂಳಕರ ಅವರ ಸಾಹಿತ್ಯದಲ್ಲಿನ ಸ್ತ್ರೀ ವ್ಯಕ್ತಿರೇಖೆಯು ವಿಶ್ವಸನೀಯ ನೆಲೆಯದ್ದಾಗಿದೆ. ಅಂದರೆ ವಾಸ್ತವವಾಗಿ ಸ್ತ್ರೀಯರು ಬದುಕುತ್ತಿರುವ ಅನುಭವಿಸುತ್ತಿರುವ ಸ್ವರೂಪ ಮತ್ತು ಅವರು ಚಿತ್ರಿಸಿರುವ ಸ್ತ್ರೀ ವ್ಯಕ್ತಿರೇಖೆಯಲ್ಲಿ ಅಂತಹ ವ್ಯತ್ಯಾಸವೇನೂ ಕಾಣಿಸುವುದಿಲ್ಲ. 'ಶೇಕು ಎಂಬಾತನಿಗೆ ಹೊಲಕ್ಕೆ ಒಂದು ಎತ್ತು ಇರಲಿಲ್ಲ. ಉತ್ತುಬಿತ್ತುವುದಕ್ಕೆ ಅದು ಬೇಕೇ ಬೇಕಲ್ಲವೇ? ಆಗ ನೊಗದ ಒಂದು ಪಕ್ಕಕ್ಕೆ ಇದ್ದ ಒಂದು ಎತ್ತು ಮತ್ತು ಇನ್ನೊಂದು ಪಕ್ಕಕ್ಕೆ ಶೇಕುವಿನ ಹೆಂಡತಿ ತಾನೇ ಸ್ವತಃ ತನ್ನನ್ನು ನೊಗಕ್ಕೆ ಹೂಡಿಸಿಕೊಂಡು ಮೇಲೆ ಉಳುಮೆ ಮಾಡಲಾಗುತ್ತದೆ. ರಾತ್ರಿಗೆ ಶೇಕುವು ತನ್ನ ಹೆಂಡತಿಯ ಗಾಯಗೊಂಡ ಬೆನ್ನನ್ನು ತುಳಿಯುತ್ತಿರುತ್ತಾನೆ'. ಮಾಡಗೂಳಕರರು ಗ್ರಾಮೀಣ ಭಾಗದ ಸ್ತ್ರೀಯರ ಜೀವನ ವನ್ನು ಇಟ್ಟುಕೊಂಡು ನಿರ್ಭಿಡ ರೀತಿಯಿಂದ ಬಹಳವಾಗಿಯೇ ಚಿತ್ರಿಸಿದ್ದಾರೆ. 'ಸೋನಾರನ ಮಕ್ಕಳು ತಮ್ಮ ಬೆನ್ನು ಹತ್ತಿದ ವ್ಯಭಿಚಾರಿ ವಿಚಾರಗಳ ಬಗೆಗೆ ಸವಿಯಾಗಿ ಮಾತನಾಡಿ ಕತ್ತಿ ಯಿಂದ ಮೂಗು ಕೊಯ್ಯುತ್ತಾರೆ ಮತ್ತು ಹೇಳುವುದೇನೆಂದರೆ, 'ನಿರ್ಲಜ್ಜ ಮುಟ್ಠಾಳ,

ಹದಿಹರೆಯದ ಹೆಣ್ಣುಮಕ್ಕಳ ಬದುಕನ್ನು ಹಾಳುಮಾಡುತ್ತೀಯಲ್ಲವೇ? ಊರಿನ ಪಟೇಲನ ಹುಡುಗ ಎಂಬ ಕಾರಣದಿಂದ ಕುದುರೆಯಂತೆ ಊರಿನಲ್ಲಿ ಸುತ್ತುವ ಅವಕಾಶವಾಯಿತಲ್ಲವೇ ನಿನಗೆ'? ಎಂಬ ಚಿತ್ರಣವು ಮಾಡಗೂಳಕರರ 'ಅಸಲ್ ಲೀ ಬಘಿತಲ್ಯಾತ್' (ಅಸಲು ಬಹಳಷ್ಟನ್ನು ನೋಡಿದರು) ಎಂಬ ಕಥೆಯಲ್ಲಿ ಬರುತ್ತದೆ.

## ೧೯೬೦ರ ನಂತರದ ಕಾಲಖಂಡದಲ್ಲಿನ ಸ್ತ್ರೀ ಚಿತ್ರಣದ ಸ್ವರೂಪ

೧೯೬೦ರ ನಂತರದಲ್ಲಿನ ಮರಾಠೀ ವಾಙ್ಮಯದಲ್ಲಿ ಸಂಭವಿಸಿದ ಮಹತ್ವದ ವಿಚಾರ ವೆಂದರೆ ದಲಿತ ಸಾಹಿತ್ಯದ ನಿರ್ಮಾಣ. ಈವರೆವಿಗೂ ಪ್ರಮುಖವಾಗಿ ಮೇಲುವರ್ಗದ ಜನರ ಜೀವನದ ಚಿತ್ರಣವನ್ನು ಮೇಲುವರ್ಗದ ಲೇಖಕರೇ ಬರೆಯುತ್ತಾ ಬಂದಿರುವುದು ಕಂಡು ಬರುತ್ತದೆ. ಆದರೆ ಇಲ್ಲಿಂದ ಮುಂದಿನ ಕಾಲದಲ್ಲಿ ಡಾ. ಬಾಬಾ ಸಾಹೇಬ್ ಅಂಬೇಡ್ಕರರ ಪ್ರೇರಣೆಯಿಂದಾಗಿ ಶಿಕ್ಷಣ ಪಡೆದ ತಳವರ್ಗದಲ್ಲಿನ ಜನರೆಲ್ಲ ಬರೆಯುವುದಕ್ಕೆ ಆರಂಭಿಸಿದ. ಅಲ್ಲದೆ ಈ ಹೊತ್ತಿನಲ್ಲಿಯೇ ತಾವು ಬದುಕುತ್ತಿರುವ ರೀತಿಯನ್ನು ಅತ್ಯಂತ ವಾಸ್ತವವಾಗಿ ಚಿತ್ರಿಸುವ ಪರಂಪರೆಯು ಆರಂಭವಾಯಿತು. ಜಯವಂತ ದಳವಿ, ಮಧು ಮಂಗೇಶ ಕಾರ್ಣಿಕ, ಅರುಣ ಸಾಧು, ಆನಂದ ಯಾದವ, ಬಾಬುರಾವ್ ಬಾಗುಲ ಇವರಂತಹ ಸಿದ್ಧಹಸ್ತ ಲೇಖಕರು ದೀನ-ದಲಿತರ ಹಾಗೆಯೇ ಸ್ತ್ರೀಯರ ವ್ಯಥೆ-ವೇದನೆಗಳನ್ನು ಚಿತ್ರಿಸಲಾ ರಂಭಿಸಿದರು. ಜೊತೆಗೆ ಜನ್ಮಾರಭ್ಯ ದಲಿತರು ಎನಿಸಿಕೊಂಡ ಲೇಖಕರೂ ಸಹ ತಮ್ಮ ಮೇಲೆ ಆಗುತ್ತಿದ್ದಂತಹ ಅನ್ಯಾಯ-ಅತ್ಯಾಚಾರಗಳನ್ನು ಚಿತ್ರಿಸಲಾರಂಭಿಸಿದುದು ಗಮನೀಯ.

ಜಯವಂತ ದಳವಿಯವರ 'ಕನ್ಯಾದಾನ', 'ಪುರುಷ' ಹಾಗೆಯೇ ವಿಜಯ ತೆಂಡುಲಕರ ಅವರ 'ಗಿಧಾಡೆ' (ರಣಹದ್ದು), 'ಸಖಾರಾಮ ಬೈಂಡರ್' ಮತ್ತು 'ಕಮಲಾ' ಇವುಗಳಂತಹ ನಾಟಕಗಳಲ್ಲಿ ಸ್ತ್ರೀ ವರ್ಗದ ಮೇಲೆ ಆಗುತ್ತಿದ್ದ ಅತ್ಯಾಚಾರಗಳನ್ನು ಗಂಭೀರವಾಗಿ ಚಿತ್ರಿಸಿ ತೋರಿಸಲಾಯಿತು. ದಳವಿಯವರ 'ಚಕ್ರ' ಎಂಬ ಕಾದಂಬರಿಯಲ್ಲಿ ದಲಿತ ಸ್ತ್ರೀಯೊಬ್ಬಳ ದಿಶಾಹೀನವಾದ ಬದುಕನ್ನು ಚಿತ್ರಿಸುವ ಪ್ರಯತ್ನ ಮಾಡಲಾಗಿದೆ. ಆದರೆ ದಳವಿಯವರಲ್ಲಿನ ರಂಜಕ ಲೇಖಕನು ತಲೆಹಾಕಿ, 'ಅವ್ಯವಸ್ಥಿತವಾಗಿ ಕುಳಿತ ಅಮ್ಮಾ ಶರೀರದ ಭಾರವನ್ನೆಲ್ಲ ಕೈಯೊಳಗಿನ ಒರಳು ಕಲ್ಲಿನ ಮೇಲೆ ಹಾಕಿ ಝಪಟನೆ ಕೊಬ್ಬರಿ-ಮೆಣಸಿನಕಾಯಿಯನ್ನು ರುಬ್ಬುತ್ತಿದ್ದಳು. ಹಾಗಾಗಿ ಅವಳ ಅಗಲವಾದ ನಿತಂಬವು (ಸೊಂಟದ ಹಿಂದಿನ ಭಾಗ) ಕಾಣಿಸುತ್ತಿತ್ತು. ಕುಳಿತಿದ್ದ ಮಣೆಯ ಮೇಲಿಂದ ಒರಳು ಕಲ್ಲನ್ನು ಸುತ್ತಲು ಉರುಳಿಸುವುದಕ್ಕಾಗಿ ಆಕೆ ಪ್ರತಿಬಾರಿ ಅದನ್ನು ಎಳೆದುಕೊಂಡಂತೆ ಅವಳ ತೋರ ಸ್ತನಗಳು ಟಕೂ ಟಕೂ ಎಂದು ಆಡುತ್ತಿದ್ದವು' (ಚಕ್ರ, ಪುಟ-೪೩). ಹೀಗೆ ವರ್ಣಿಸುವುದರ ಮೂಲಕ ವಾಚಕರ ಲೈಂಗಿಕ ಭಾವನೆಗಳನ್ನು ಕೆರಳಿಸುತ್ತಿರುವುದನ್ನು ನೋಡಬಹುದು. ಈ ಆಧಾರದ ಮೂಲಕವಾಗಿ 'ಸ್ತ್ರೀ'ತ್ವದ ಸಮಸ್ಯೆಗಳನ್ನು ವಿವರಿಸಿದ್ದಾರೆ. ಈ ದೃಷ್ಟಿಯಿಂದ ಹೇಳುವುದಾದರೆ ಮಧುಮಂಗೇಶ ಕಾರ್ಣಿಕ ಅವರ 'ಭಾಕರೀ ಆಣಿ ಫೂಲ್' (ರೊಟ್ಟಿ ಮತ್ತು ಹೂವು) ಎಂಬ ಕಾದಂಬರಿಯಲ್ಲಿನ ನಳಿನಿಯ ವ್ಯಕ್ತಿಚಿತ್ರವು ಬಹಳ ವಾಸ್ತವವಾಗಿ ಕಾಣಿಸುತ್ತದೆ. ನಳಿನಿಯು ಸುಶಿಕ್ಷಿತಳಾಗಿದ್ದರೂ

ಮಾವ, ಮೈದುನ ಮತ್ತು ಗಂಡ ಇವರುಗಳಿಗೆ ಕೊಡುವಷ್ಟು ಗೌರವವನ್ನು ಕೊಟ್ಟು ನಡೆದು ಕೊಳ್ಳುತ್ತಿರುತ್ತಾಳೆ. ಆದರೆ ಸಮಯ ಸಂದರ್ಭಗಳಲ್ಲಿ ಅವರಿಂದ ವಿಪರೀತವಾದುದೇನಾದರೂ ಘಟಿಸಿದರೆ ಅವರನ್ನು ಬೈದು ಜರಿಯುವಂತಹ ಸ್ವಾಭಿಮಾನಿ ಸ್ತ್ರೀಯೊಬ್ಬಳನ್ನು ಚಿತ್ರಿಸುವಲ್ಲಿ ಕಾರ್ಣಿಕರು ಯಶಸ್ವಿಯಾಗಿದ್ದಾರೆ.

ಅರುಣ ಸಾಧೂ ಅವರ 'ಬಹಿಷ್ಕೃತ' ಎಂಬ ಕಾದಂಬರಿಯಲ್ಲಿನ ಹೆಡ್‌ಮಾಸ್ತರನ ಮಗಳು ಸುಮಿತ್ರಾ ಎಂ.ಎ. ಪದವಿಧರಳಾಗಿದ್ದರೂ ಕುಟುಂಬದ ಬಂಧನದಲ್ಲಿ ಸಿಲುಕಿ ನಲುಗುತ್ತಾಳೆ. ಅವರದೇ ಇನ್ನೊಂದು ಕಾದಂಬರಿ 'ತ್ರಿಶಂಕು'ವಿನಲ್ಲಿನ ವೈಶಾಲಿ ಪಂಡಿತಳು ಆಧುನಿಕಳಾಗಿದ್ದಾಳೆ. ಅವಳು ಸ್ವತಂತ್ರವಾಗಿ ಉದ್ಯೋಗ ಮಾಡುತ್ತಿರುತ್ತಾಳೆ. ಈಕೆ ವಿಚ್ಛೇದಿತ ಸ್ತ್ರೀಯಾಗಿದ್ದು ಮೇಲ್ನೋಟಕ್ಕೆ ಆನಂದದಿಂದಿರುವವಳಂತೆ ಕಾಣಿಸುತ್ತಾಳೆ. ಆದರೆ ಮುಂದೆ ಅವಳು ತನ್ನ ಕೃತ್ರಿಮವಾದ ತನ್ನ ಅಹಂಭಾವವನ್ನು ಬಿಟ್ಟು ಪುರುಷನತ್ತ ಸೆಳೆಯಲ್ಪಡುತ್ತಿರುವಂತೆ ಚಿತ್ರಿತವಾಗಿದೆ. ಆನಂದ ಯಾದವರ ಅವರ 'ನಟರಂಗ' ಎಂಬ ಕಾದಂಬರಿಯಲ್ಲಿ ಗಂಡ ತಮಾಶಾದೊಂದಿಗೆ ಹೋದಾಬಂದಳೋ ಆ ಪತಿಯ ಮನೆಯಲ್ಲಿಯೇ ಅವಳಿಗೆ ಪರಾವಲಂಬಿತನದ ಜೀವನವನ್ನು ನಡೆಸಬೇಕಾಗಿ ಬಂದಿತು. ಹೀಗೆ ಸ್ವಾತಂತ್ರ್ಯ ಮತ್ತು ಪಾರತಂತ್ರ್ಯ ಇವುಗಳ ನಡುವಿನ ಅವಸ್ಥೆಯಲ್ಲಿ ತೂಗಾಡುತ್ತಾ ಸ್ತ್ರೀಯನ್ನು ಇಲ್ಲಿ ಪ್ರಾತಿನಿಧಿಕವಾಗಿ ರೇಖಿಸಿರುವುದನ್ನು ಕಾಣಬಹುದಾಗಿದೆ. ಈ ಕಾಲಖಂಡದಲ್ಲಿನ ಸ್ತ್ರೀಯರು ಜೀವನ ಚಿತ್ರಣದೆಡೆ ಸಾಮಗ್ರಿ ಸಮೇತವಾಗಿ ಕಣ್ಣು ಹಾಯಿಸಿದರು. ಆದರೆ ಸ್ವಾತಂತ್ರ್ಯಾ ನಂತರದ ಕಾಲಖಂಡದಲ್ಲಿ ಸ್ತ್ರೀಯರಲ್ಲಿ ಬಂದ 'ಸ್ವಾತ್ವ'ದ ಅರಿವು ಈಗ ಇನ್ನೂ ವಿಸ್ತರಿಸಿದೆ' ಎಂದು ಹೇಳಬಹುದು. ಆಶ್ರಯವನ್ನು ಪಡೆಯಲೇಬೇಕಾಗುತ್ತದೆ. ಬಾಬುರಾವ್ ಬಾಗೂಲ ಅವರು ತಮ್ಮ ಕಥೆ-ಕಾದಂಬರಿಗಳಲ್ಲಿನ ವಿವಿಧಾಂಗಗಳಲ್ಲಿ ಸ್ತ್ರೀಯರ ಜೀವನವನ್ನು ಚಿತ್ರಿಸಿರುವುದನ್ನು ಕಾಣಬಹುದಾಗಿದೆ. ಅತ್ತೆ, ಗಂಡ, ಮಗ ಮತ್ತು ಸಮಾಜದೆಡೆಯಿಂದ ಅವಳಿಗೆ ಆಗುವ ಹಿಂಸೆ ಮತ್ತು ಅಡ್ಡಿಗಳಂತಹ ವಿರೋಧಿ ಸಂಗತಿಗಳನ್ನು ಗಂಭೀರವಾಗಿಯೇ ಚಿತ್ರಿಸಿರುವುದು ಗಮನಾರ್ಹ. ಅವರ 'ಸೂಡಾ' (ಸೇಡು) ಎಂಬ ನೀಳ್ಗತೆಯಲ್ಲಿ ನಾಯಿಕೆ ಜಾನಕಿಯು ಮರುಳಿಯ ಮಗಳಾಗಿದ್ದು, ಅವಳ ಅಸಹಾಯಕತೆಯ ಲಾಭವನ್ನು ಪಡೆದ ರಸೂಲ್ ಅವಳನ್ನು ಕುರಿಗಳನ್ನು ಮಾರುವಂತೆ ಮಾರಾಟ ಮಾಡುತ್ತಾನೆ. ಅವಳನ್ನು ವೇಶ್ಯಾ ವೃತ್ತಿಗೆ ತೊಡಗಿಸುವುದರಿಂದ ಅವಳು ವಿವಿಧ ಬಗೆಯ ಮತ್ತು ವಿವಿಧ ವಯಸ್ಸಿನ ಗಂಡಸರಿಂದ ಹಿಂಸೆಗೆ ಒಳಗಾಗಬೇಕಾಗುತ್ತದೆ. ಪುರುಷ ಅತ್ಯಾಚಾರದಿಂದಾಗಿ ಅವಳಿಗೆ ತನ್ನ ಸ್ತ್ರೀದೇಹದ ಬಗ್ಗೆಯೇ ಜುಗುಪ್ಸೆ ಉಂಟಾಗುತ್ತದೆ. ಆ ಕಾರಣವಾಗಿ ಅವಳು 'ಜ್ವಾಲಾಪ್ರಸಾದ್'ಳಾಗಿ ಓಡಾಡಲಾರಂಭಿಸುತ್ತಾಳೆ. ಆದರೆ ಕೊನೆಗೆ ಒಬ್ಬ ಸಾಧುವಿನ ಜೊತೆಗೂಡಿದ ಮೇಲೆ ಅವಳಲ್ಲಿ ಮತ್ತೆ ಸ್ತ್ರೀತ್ವವು ಜಾಗೃತವಾಗಿ ಆ ಪುರುಷನೆಡೆಗೆ ಸೆಳೆಯಲ್ಪಡುತ್ತಾಳೆ. 'ರುನಾಳ ತಾಯಿ ತಮಾಶಾದ ದಂಧೆಯನ್ನು ಬಿಟ್ಟು ಸಂಸಾರ ಮಾಡಲಾರಂಭಿಸುತ್ತಾಳೆ. ಅನಂತರ ರುನಾಳು ಜನಿಸುತ್ತಾಳೆ. ಆ ಕಾರಣವಾಗಿ ಅಕ್ಕರಮಾಶಿ (ಅಕ್ರಮ ಸಂತಾನ) ಎಂಬುದಾಗಿ ಸಮಾಜ

ಅವಳನ್ನು ಹೀಯಾಳಿಸಲಾರಂಭಿಸುತ್ತದೆ. ಆದರೂ ಅವಳು ಅದನ್ನೆಲ್ಲ ನಿರ್ಲಕ್ಷಿಸಿ ರುನಾಳನ್ನು ವಿದ್ಯಾವಂತಳನ್ನಾಗಿ ಮಾಡುತ್ತಾಳೆ ಎಂಬ ಚಿತ್ರಣವು ಬಾಬುರಾವ್ ಗಾಯಕವಾಡ ಅವರ 'ಝಳ' ಎಂಬ ಕಾದಂಬರಿಯಲ್ಲಿ ಬಂದಿದೆ. 'ವೇಶ್ಯೆಗೆ ಸಂತತಿ ಆದ ಮೇಲೆ ಮುಂದೆ ಸಮಾಜದಲ್ಲಿ ಅವಳ ಮತ್ತು ಅವಳ ಸಂತತಿಯು ಎಂತಹ ಅವಹೇಳನಕ್ಕೆ ಒಳಗಾಗ ಬೇಕಾಗುತ್ತದೆ. ಅದರಿಂದ ವೇಶ್ಯೆಯಾದವಳು ಎಂತೆಂತಹ ವೇದನೆಗಳನ್ನು ಸಹಿಸಬೇಕಾಗುತ್ತದೆ, ಇತ್ಯಾದಿಗಳ ಒಟ್ಟು ಚಿತ್ರಣವು ಅಮಿತಾಭರ 'ಸತ್ಯ ವದ-ಜಾಬಾಲಿ' ಎಂಬ ಕಥೆಯಲ್ಲಿ ಬರುತ್ತದೆ. ದಲಿತ ಸ್ತ್ರೀಯ ಬದುಕು ಸುವರ್ಣ ಸ್ತ್ರೀಯ ಬದುಕಿಗಿಂತಲೂ ಹೆಚ್ಚು ದುರ್ಬಲ. ಹಾಗಾಗಿ ಅವಳ ದುಃಖ ಮತ್ತು ವ್ಯಥೆಗಳಿಗೆ ಮಿತಿಮೇರೆ ಎಂಬುದು ಇಲ್ಲ. ಈ ಸ್ತ್ರೀಯರು ಪ್ರತಿ ಹೆಜ್ಜೆಗೂ ಸಂಕಟಗಳನ್ನು ಎದುರಿಸಬೇಕಾಗುತ್ತದೆ. ಅನ್ಯಾಯ-ಅತ್ಯಾಚಾರಗಳಿಗೆ ಮತ್ತೆಮತ್ತೆ ಬಲಿಯಾಗುತ್ತಲೇ ಇದ್ದಾರೆ. ಒಂದೆಡೆ ಪುರುಷನ ಅಹಂಕಾರ, ಮತ್ತೊಂದೆಡೆಗೆ ಅವಳ ಪಾಲಿಗೆ ಬಂದ ಹೀನಜಾತಿ ಹೀಗೆ ಎರಡೂ ಮುಖಗಳಿಂದ ಅವಳು ಹಿಂಸೆಗೆ ಒಳಗಾಗ ಬೇಕಾಗುತ್ತದೆ. ಹೊಟ್ಟೆ ತುಂಬುವುದಕ್ಕಾಗಿ ಮಾನ-ಮಾರ್ಯಾದೆ ಎಂಬ ವಿಚಾರಗಳನ್ನು ಅವಳು ಒಂದೆಡೆಗೆ ಸುತ್ತಿ ಇಡಬೇಕಾಗುತ್ತದೆ. ಹೀಗೆ ಅಪಮಾನಿತ ಜೀವನವನ್ನು ನಡೆಸುತ್ತಿರುವ ಅನೇಕ ಸ್ತ್ರೀಯರ ವಿವರಗಳು ದಲಿತ ಆತ್ಮಕಥನಗಳಲ್ಲಿ ಬಂದಿರುವುದನ್ನು ಕಾಣಬಹುದಾಗಿದೆ. 'ಒಬ್ಬ ಸ್ತ್ರೀಯು ಹೊಟ್ಟೆಪಾಡಿಗಾಗಿ ವೇಶ್ಯೆಯರ ಬಟ್ಟೆಗಳನ್ನು ತೊಳೆಯುವುದಕ್ಕಾಗಿ ವೇಶ್ಯಾ ಗೃಹಕ್ಕೆ ಹೋಗುತ್ತಿರುತ್ತಾಳೆ. ಒಮ್ಮೆ ಒಬ್ಬ ಗಿರಾಕಿಯು ಅವಳನ್ನೇ ಬಯಸಿ ಕಳುಹಿಸುವಂತೆ ಹೇಳುವ ಚಿತ್ರಣವು ದಯಾ ಪವಾರರ 'ಬಲುತ' (ಆಯಗಾರ) ಎಂಬ ಆತ್ಮಕಥನದಲ್ಲಿ ಬಂದಿದೆ. ಅಲೆಮಾರಿ ಪಂಗಡಗಳಲ್ಲಿ ಸ್ತ್ರೀಯರನ್ನು ಗುಲಾಮರಂತೆ ಅಡವಿಕ್ಕುವ ಒಂದು ರೂಢಿಯೊಂದುಂಟು. ಹಾಗಾಗಿ ಅಲೆಮಾರಿ ಜನಾಂಗದ ಸ್ತ್ರೀಯರ ಮಾನಮರ್ಯಾದೆ ಹೇಗಿರಬಹುದು ಎಂಬುದರ ಚಿತ್ರಣವು ಲಕ್ಷ್ಮಣ ಮಾನೆಯವರು ತಮ್ಮ 'ಉಪರಾ' (ಪರಕೀಯ) ಎಂಬ ಆತ್ಮಕಥನದಲ್ಲಿ ಚಿತ್ರಿಸಿದ್ದಾರೆ. ಮೊದಲ ಗಂಡನು ಹೊಡೆಯುವುದಕ್ಕಾಗಿ ಮೈಮೇಲೆ ಏರಿಬಂದೊಡನೆ ಅವನ ಕೈಹಿಡಿದು ದಿಟ್ಟತನದಿಂದ ಅವನಿಗೆ ಹೇಳುತ್ತಾಳೆ. ನಡೆದುಕೊಳ್ಳುವುದಾದರೆ ಸರಿಯಾಗಿ ನಡೆದುಕೊಳ್ಳಿರಿ, ಇಲ್ಲದಿದ್ದರೆ ನನಗೆ ಇಲ್ಲಿ ನಿಮ್ಮ ಮನೆಯಲ್ಲಿ ಬದುಕುವುದಕ್ಕೆ ಆಗುವುದಿಲ್ಲ. ಎರಡನೆಯ ಹೆಣ್ಣು ಕೂಡಾ ಮೊದಲನೆಯವಳಿ ಗಿಂತಲೂ ಹೆಚ್ಚು ಕಠಿಣಳಾಗಿ ಹೊರಟುಹೋದಳು. ಅವಳು ಭಾವನೊಂದಿಗೆ ತನ್ನ ತವರು ಮನೆಗೆ ಬಂದ ಮೇಲೆ ಮತ್ತೆ ಮದುವೆ ಮಾಡಿಕೊಳ್ಳದೆ ಹಾಗೆಯೇ ಜೀವನ ನಡೆಸುತ್ತಾಳೆ - ಈ ಚಿತ್ರಣವು ಸುಖಾರಾಮ ಹಿರವಾಳೆ ಅವರ 'ತೀನ್ ನವರೀ' (ಮೂವರು ಹೆಂಡತಿಯರು) ಎಂಬ ಕಥೆಯಲ್ಲಿ ಬರುತ್ತದೆ. ಆದರೆ ಇಲ್ಲಿ ಒಂದು ಅಂಶವನ್ನು ಅವಶ್ಯವಾಗಿ ಗಮನಿಸಬೇಕು. ಅದೆಂದರೆ ದಲಿತ ಸಾಹಿತ್ಯದೊಳಗೆ ಮಾತ್ರವೇ ಈ ಬಗೆಯ ಬಂಡುಖೋರ ಸ್ತ್ರೀಯರು ನಮಗೆ ನೋಡಲು ಸಿಕ್ಕುತ್ತಾರೆ. 'ಪತಿತ ಸ್ತ್ರೀಯರ ಪುನರ್‌ವ್ಯವಸ್ಥೆಯ ಪ್ರಯತ್ನವನ್ನು ಸವಿವರವಾಗಿ ಹೇಳುವ 'ಬೇಘರ್'(ಮನೆ ರಹಿತ)ನ ನಾಯಿಕೆ ಒಂದಷ್ಟು ಕಾಲ ತನ್ನ

ಸಂಸಾರದಿಂದ ವಂಚಿತಳಾಗುತ್ತಾಳೆ. ಅವಳ ಅಗತಿಕತೆಯನ್ನು ಕುಟುಂಬದಿಂದಲೇ ಸಂಬಂಧವನ್ನು ಕಡಿದುಕೊಂಡುದನ್ನು ಬಹಳ ಧೈರ್ಯದಿಂದ ಶಾಂತ ನಿರುಮ್ಮಳ ಭಾವನೆಯಿಂದ ತೋರಿಸಿಕೊಡುತ್ತಾರೆ. ಇಂದು ಸ್ತ್ರೀಮುಕ್ತಿ ಚಳವಳಿಯು ಇನ್ನೂ ಹೆಚ್ಚು ಪ್ರಭಾವಿತವಾಗಬೇಕಾಗಿದೆ. ಆ ಹಿನ್ನೆಲೆಯಲ್ಲಿ 'ಮುಲಗೀ ಝಾಲಹೀ ಹೋ' (ಮಗಳು ಹುಟ್ಟಿದಳಲ್ಲಾ ಇವರೆ)ಯಂತಹ ನಾಟಕಗಳನ್ನು ಬರೆದು ರಂಗಭೂಮಿಯ ಮೇಲೆ ತರುತ್ತಿದ್ದಾರೆ. ಆದಾಗ್ಯೂ ಇಲ್ಲಿ ಮುಖ್ಯವಾಗುವ ಪ್ರಶ್ನೆಯೆಂದರೆ ನಿಜವಾಗಿಯೂ ಸ್ತ್ರೀ ಮುಕ್ತಳಾದಳೇ? ೧೯೬೦ರ ನಂತರ ಮರಾಠಿ ಸಾಹಿತ್ಯದಲ್ಲಿ ಬಹುದೊಡ್ಡ ಸಂಖ್ಯೆಯಲ್ಲಿ ಆತ್ಮಚರಿತ್ರೆ ಮತ್ತು ಆತ್ಮಕಥನಗಳು ಬರೆಯಲ್ಪಟ್ಟವು. ಅದರಲ್ಲಿ ಸ್ತ್ರೀಯರ ಆತ್ಮಚರಿತ್ರೆಯ ಪ್ರಮಾಣವು ಹೆಚ್ಚಾಗಿದೆ. ಲಕ್ಷ್ಮಿಬಾಯಿ ಟಿಳಕರ 'ಸ್ಮೃತಿಚಿತ್ರಾ' ಎಂಬುದರಿಂದ ಹಿಡಿದು ಮತ್ತು ಅದಕ್ಕೂ ಮೊದಲಿನಿಂದಲೇ ಅನೇಕ ಸ್ತ್ರೀಯರು ಆತ್ಮಚರಿತ್ರೆ ಬರೆಯುವುದಕ್ಕೆ ಕೈಗೆತ್ತಿಕೊಂಡಿದ್ದಾರೆ. ಆ ಎಲ್ಲದರಲ್ಲಿಯೂ ಸ್ತ್ರೀಯರ ಪಾರಂಪರಿಕ ಜೀವನವೇ ವ್ಯಕ್ತವಾಗಿದೆ. 'ಟಿಳಕರ ಲಹರೀ ಮತ್ತು ವಿಕ್ಷಿಪ್ತ ಸ್ವಭಾವದಿಂದಾಗಿ ಎಷ್ಟೊಂದು ದುಃಖ, ತೊಂದರೆಯನ್ನು ಅನುಭವಿಸಬೇಕಾಯಿತು. ಒಂದೊಮ್ಮೆ ಆತ್ಮಹತ್ಯೆ ಮಾಡಿಕೊಳ್ಳಬೇಕೆನಿಸಿದರೂ ಹಾಗೆ ಮಾಡಿಕೊಳ್ಳಲಿಲ್ಲ'-ಎಂಬುದಾಗಿ ಲಕ್ಷ್ಮಿಬಾಯಿಯವರು ಹೇಳಿಕೊಂಡಿದ್ದಾರೆ. ಆತ್ಮಚರಿತ್ರೆ ಬರೆದ ಸ್ತ್ರೀ ಲೇಖಕರಲ್ಲಿ ಸ್ನೇಹಪ್ರಭಾ ಪ್ರಧಾನ್ ಅವರ 'ಸ್ನೇಹಾಂಕಿತ' ಮತ್ತು ಹಂಸಾ ವಾಡಕರ ಅವರ 'ಸಾಂಗತ್ಯೇ ಐಕಾ' (ಹೇಳುತ್ತೇನೆ ಕೇಳಿರಿ) ಎಂಬ ಆತ್ಮಚರಿತ್ರೆಗಳು ಕೆಲವಾರು ಅಂಶಗಳಿಂದ ಭಿನ್ನವಾಗಿವೆ. ಮುಖ್ಯವಾಗಿ ಈ ಆತ್ಮಚರಿತ್ರೆಗಳಲ್ಲಿ ಸ್ತ್ರೀಯರು ಬಹಳಷ್ಟು ವಿಷಯಗಳಲ್ಲಿ ಪುರುಷರಿಗೆ ವಿರೋಧ ವ್ಯಕ್ತಪಡಿಸಿರುವುದು ಕಂಡುಬರುತ್ತದೆ. ಚಲನಚಿತ್ರದಲ್ಲಿ ಗಾಳಿಸುದ್ದಿಯನ್ನು ಕೇಳಿದ ಹಂಸಾಬಾಯಿಯ ಪತಿ ಬಂದರಕರ ಅವಳನ್ನು ಬೆಲ್ಟ್‌ನಿಂದ ಹೊಡೆಯುತ್ತಾನೆ. ಅದರಿಂದ ಕೋಪಗೊಂಡು ಅವರ ಮೇಲೆ ಪ್ರತಿಕಾರ ಮಾಡುವುದಕ್ಕಾಗಿ ಸಾರಾಯಿ ಸೇವನೆಗೆ ತೊಡಗುತ್ತಾಳೆ. ಮಾತ್ರವಲ್ಲ ಮರಾಠಾವಾಡಾದಲ್ಲಿನ ಜೋಶಿಯವರೊಂದಿಗೆ ಅವರ ಮನೆಗೆ ಹೋಗಿ ಅಲ್ಲಿಯೇ ಇರಲಾರಂಭಿಸುತ್ತಾಳೆ. ಆದರೆ ಅವನೂ ಆ ಮನೆಯ ದುರವಸ್ಥೆಗೆ ಬಂದ ಕಾರಣದಿಂದಾಗಿ ಉರಿಯುವ ಸೌದೆಯಿಂದಲೇ ಅವಳನ್ನು ಹೊಡೆಯುತ್ತಾನೆ' - ಹೀಗೆ ಬಹಳ ಫಜೀತಿಮಯವಾದ ತಮ್ಮ ಜೀವನವನ್ನು ಕುರಿತಂತಹ ಕತೆಯನ್ನು ವಾಡಕರ ಅವರು ಇಲ್ಲಿ ಬರೆದುಕೊಂಡಿದ್ದಾರೆ. ಗಳಿಸುವ ಸ್ತ್ರೀಯ ಅವಸ್ಥೆಯೂ ಕೂಡ ಪುರುಷ ನಿಯಂತ್ರಣದಲ್ಲಿಯೇ ಇರುತ್ತದೆ. ಇದೇ ಅವರ ಜೀವನವೆಂಬಂತೆ ಆಗಿದೆ ಎಂಬುದನ್ನು ಹೇಳಬೇಕೆನಿಸುವಂತಿದೆ. ಮಲ್ಲಿಕಾ ಅಮರಶೇಖ್ ಅವರು 'ಮಲಾ ಉಧ್ವಸ್ತ ವ್ಹಾಯಚಂಯ್' (ನನಗೆ ನಾಶವಾಗಬೇಕಾಗಿದೆ) ಎಂಬ ಆತ್ಮಕಥನದಲ್ಲಿ ತನ್ನ ಸ್ವತಂತ್ರ ಪ್ರವೃತ್ತಿಯಿಂದಾಗಿ ತನ್ನ ಸಂತಾನಕ್ಕೂ ಗಂಡನಿಂದ ಎಂತೆಂತಹ ತೊಂದರೆಗಳು ತನಗೆ ಉಂಟಾದವು ಎಂಬುದನ್ನು ಕುರಿತು ಗಂಭೀರ ಕಥನವಾಗಿಸಿರುವುದನ್ನು ನೋಡಬಹುದಾಗಿದೆ. ಸದ್ಯ ಬಹಳ ಪ್ರಸಿದ್ಧವಾಗಿರುವ 'ಅಹೇ ಮನೋಹರ ತರೀ' (ಮನೋಹರವಾಗಿದ್ದಾರೆ

ಆದರೆ) ಎಂಬ ಸುನೀತಾ ದೇಶಪಾಂಡೆ ಅವರ ಆತ್ಮಚರಿತ್ರೆಯೂ ಸ್ತ್ರೀಯರನ್ನು ಅಂತರ್ಮುಖ ಗೊಳ್ಳುವುದಕ್ಕೆ ತೊಡಗಿಸುವುದಾಗಿದೆ. ಮಾಧವೀ ದೇಸಾಯಿ ಅವರ 'ನಾಚ ಗ ಘುಮಾ' ಎಂಬ ಆತ್ಮಚರಿತ್ರೆಯಲ್ಲಿನ 'ಸ್ತ್ರೀಚೇ ಜಗಣೇ' (ಸ್ತ್ರೀಯ ಬದುಕು) ಮನಸ್ಸಿಗೆ ಬಹಳ ಭಯವನ್ನು ಉಂಟುಮಾಡುವಂತಹದ್ದಾಗಿದೆ. ಮಾಧವಿಯ ಬಾಲ್ಯವೇನೂ ಸುಖಕರ ವಾಗಿರಲಿಲ್ಲ. ಇನ್ನು ತಾರುಣ್ಯದಲ್ಲಿ ದ್ರವ್ಯಾರ್ಜನೆಯಲ್ಲಿಯೂ ಮತ್ತು ಪ್ರೌಢತೆಯ ಕಾಲಖಂಡವೂ ಪರಾಧೀನತೆಯಲ್ಲಿಯೇ. ಯಾರ ಮೇಲೆ ವಿಶ್ವಾಸವಿಟ್ಟು ಆಕೆ ಬಂದಿದ್ದಳೋ ಆ ಪತಿಯ ಮನೆಯಲ್ಲಿಯೇ ಆಕೆಗೆ ಪರಾವಲಂಬಿತನದ ಜೀವನವನ್ನು ನಡೆಸಬೇಕಾಗಿ ಬಂದಿತು. ಹೀಗೆ ಸ್ವಾತಂತ್ರ್ಯ ಮತ್ತು ಪಾರತಂತ್ರ್ಯ ಇವುಗಳ ನಡುವಣ ಅವಸ್ಥೆಯಲ್ಲಿ ತೂಗಾಡುವ ಸ್ತ್ರೀಯನ್ನು ಆಕೆ ಪ್ರಾತಿನಿಧಿಕವಾಗಿ ರೇಖಿಸಿರುವುದನ್ನು ಕಾಣಬಹುದಾಗಿದೆ. ಈ ಕಾಲಖಂಡದಲ್ಲಿನ ಸ್ತ್ರೀಯರು ತಂತಮ್ಮ ಅನುಭವ ಸಾಮಗ್ರಿಗಳ ಜೊತೆಗೆ ಜೀವನ ಚಿತ್ರಣದಲ್ಲಿ ತೊಡಗಿದರು. ಆದರೆ ಸ್ವಾತಂತ್ರ್ಯಾನಂತರದಲ್ಲಿನ ಸ್ತ್ರೀಯರು 'ಸ್ವಾತ್ವದ' ಅರಿವನ್ನು ಹೆಚ್ಚಿಸಿಕೊಂಡಿದ್ದಾರೆ ಎಂದು ಹೇಳಬಹುದಾಗಿದೆ. ಆದರೆ ಈ ಅರಿವಿನ ಸಾಮಾನ್ಯ ವಿಚಾರವನ್ನು ಉಲ್ಲೇಖಿಸಿ ಅಥವಾ ಕೈಬಿಟ್ಟು ಸ್ತ್ರೀ-ಪುರುಷ ಸಂಬಂಧಗಳ ಮತ್ತು ಸ್ತ್ರೀಯ ಲೈಂಗಿಕ ಜೀವನವನ್ನು ರಮ್ಯವಾಗಿ ರಂಜಿಸುವಲ್ಲಿಯೇ ಲೇಖಕರು ಬಹಳ ರುಚಿಯುಳ್ಳ ವರಾಗಿದ್ದಾರೆ ಎಂದು ಹೇಳಬಹುದಾಗಿದೆ.

ಒಟ್ಟಾರೆಯಾಗಿ ಮರಾಠಿ ವಾಙ್ಮಯದಲ್ಲಿನ ಸ್ತ್ರೀಯರ ಚಿತ್ರಣದ ಬಗೆಗೆ ವಿಚಾರಮಾಡಿ ಹೇಳುವುದಾದರೆ ಸ್ವಾತಂತ್ರ್ಯಪೂರ್ವದಲ್ಲಿನ ಸ್ತ್ರೀಯರು ಶಿಕ್ಷಣವನ್ನು ಪಡೆದು ಅಡುಗೆಯ ಕೋಣೆಯಿಂದ ಹೊರಗೆ ಬಂದಳು. ಆದರೆ ಅವಳ ಮನಸ್ಸಿನಲ್ಲಿ ಬೇರೂರಿದ್ದ ಗುಲಾಮಗಿರಿಯ ಸಂಸ್ಕಾರವು ಹೋಗಿರುವುದಿಲ್ಲ. ಪುರುಷನ ಅಧಿಪತ್ಯದ ಅಡಿಯಲ್ಲಿ ಇದ್ದುಕೊಂಡೇ ತನ್ನ ಸ್ವಾತಂತ್ರ್ಯವನ್ನು ಆಕೆ ಶೋಧಿಸುವ ಪ್ರಯತ್ನ ಮಾಡುತ್ತಿರುವಂತೆ ಕಾಣುತ್ತದೆ. ಸ್ವಾತಂತ್ರ್ಯಾ ನಂತರದ ಕಾಲಖಂಡದಲ್ಲಿನ ಸ್ತ್ರೀಯರಲ್ಲಿ ಸಮಾನತೆಯ ಹಕ್ಕನ್ನು ಕೇಳುವಷ್ಟು ದಿಟ್ಟತೆಯು ಬಂದಿರುವುದನ್ನು ಕಾಣಬಹುದಾಗಿದೆ. ಸಭೆ-ಸಮ್ಮೇಳನಗಳಲ್ಲಿ ಭಾಗವಹಿಸಿ ತಮ್ಮ ಮೇಲೆ ಆಗುತ್ತಿರುವ ಅನ್ಯಾಯ-ಅತ್ಯಾಚಾರಗಳ ವಿರುದ್ಧ ಆಕೆಯು ತಕರಾರುಗಳನ್ನು ಮಾಡಿ ನ್ಯಾಯ ಕೇಳಲು ಆರಂಭಿಸಿದಳು. ಆದರೆ ಅವಳನ್ನು ನೋಡುತ್ತಿದ್ದ ಪುರುಷನ ಪಾರಂಪರಿಕ ದೃಷ್ಟಿ ಇದರಿಂದ ಹೆಚ್ಚೇನು ಬದಲಾಗಲಿಲ್ಲ. ಅಂದರೆ ಪುರುಷನು ತನ್ನ ಅಗತ್ಯಕ್ಕೆ ಅನುಗುಣ ವಾಗುವಷ್ಟು ಮಾತ್ರವೇ ಅವಳಿಗೆ ಸ್ವಾತಂತ್ರ್ಯ ಮಾನ್ಯ ಮಾಡಿದನಾದರೂ 'ಭೋಗವಸ್ತು'ವಿನ ಹೊರತಾಗಿ ಅವಳಿಗೆ ಯಾವ ಕಿಮ್ಮತ್ತೂ ನೀಡಲಿಲ್ಲವೆಂಬುದು ಗಮನಾರ್ಹ. ೧೯೬೦ರ ನಂತರದಲ್ಲಿ ಸ್ತ್ರೀವಾದಿ ಚಳವಳಿಗೆ ಹೆಚ್ಚಿನ ತೀವ್ರತೆಯು ಬಂದಿತು. ಆದರೂ ವರದಕ್ಷಿಣೆಯ ಪ್ರಶ್ನೆಯು ಆರಂಭಕ್ಕೆ ಯಾವ ರೀತಿಯಲ್ಲಿ ಇದ್ದಿತೋ ಅದು ಈಗ ಇನ್ನೂ ಬಿಗಡಾಯಿಸಿತು. ಮಗಳು ಹುಟ್ಟಿದರೆ ವರದಕ್ಷಿಣೆ ಕೊಡಬೇಕಾಗುತ್ತದೆ. ಹಾಗಾಗಿ ಹೆಣ್ಣು ಮಗುವಿಗಿಂತಲೂ

ಗಂಡು ಮಗುವಾಗುವುದು ಹೆಚ್ಚು ಲಾಭಕರವೆಂಬ ವಿಚಾರವೂ ಬಲವಾಯಿತು. ಅಲ್ಲದೆ ಅದರೊಂದಿಗೆ 'ಹೆಣ್ಣುಮಗು ಇರುವ ಗರ್ಭ'ವನ್ನು ತೆಗೆಸುವ, ಒಂದು ರೀತಿಯಲ್ಲಿ ಸ್ತ್ರೀ ಜಾತಿಯ ಮೇಲೆ ಪಾಶವೀ ರೀತಿಯಲ್ಲಿ ಅತ್ಯಾಚಾರ ಮಾಡುವಂತಹ ಕ್ರೌರ್ಯವೊಂದು ಗಂಭೀರವಾಗಿ ಆರಂಭವಾಯಿತೆಂದು ಹೇಳಬಹುದು. ಮದುವೆಯಾಗಿ ವರದಕ್ಷಿಣೆ ಕೊಡ ಲಾಗದೆ ವರದಕ್ಷಿಣೆ ಬಲಿಯಂತಹ ಕ್ರೌರ್ಯವನ್ನು ಸ್ತ್ರೀಯರು ಅನುಭವಿಸಬೇಕಾಗಿ ಬಂದಿದೆ. ಇಂದಿನ ಸ್ತ್ರೀಯು ಸುಶಿಕ್ಷಿತಳೂ ಅತ್ಯಂತ ಬುದ್ಧಿವಂತಳೂ ಕರ್ತೃತ್ವಶಾಲಿಯೂ ಆಗಿದ್ದರೂ ತನ್ನ ಸ್ತ್ರೀತತ್ವ-ಪಾವಿತ್ರ್ಯವನ್ನು ಸಂರಕ್ಷಿಸಿಕೊಳ್ಳುವ ಜವಾಬ್ದಾರಿಯನ್ನೂ ಅವಳ ಮೇಲೆಯೇ ಪುರುಷ ಸಂಸ್ಕೃತಿಯು ಹೇರಿರುವುದು ಗಮನಾರ್ಹ. ಎಂತಲೇ ಅವಳಿಗೆ ಮನೆಯಿಂದ ಹೊರಗೆ ಹೋದರೆ ಸಮಾಜದ ಭಯವು ವಿಪರೀತವಾಗಿಯೇ ಇರುತ್ತದೆ. ಸ್ತ್ರೀಯು ಪತಿಯ ನಿಷ್ಠೆ ಮತ್ತು ಶ್ರೇಯದಲ್ಲಿಯೇ ಸಿಲುಕಿಕೊಂಡಳೆಂದರೆ ಅವಳಿಗೆ ಮನೆಯಿಂದ ಹೊರಗೆ ಹೋದರೆ ಸಮಾಜದ ಭಯವು ವಿಪರೀತವಾಗಿಯೇ ಇರುತ್ತದೆ. ಸ್ತ್ರೀಯು ಪತಿಯ ನಿಷ್ಠೆ ಮತ್ತು ಶ್ರೇಯದಲ್ಲಿಯೇ ಸಿಲುಕಿಕೊಂಡಳೆಂದರೆ ಅವಳಿಗೆ ಸ್ವತಂತ್ರ ಅಸ್ತಿತ್ವವೆಂಬುದೇ ಇರುವುದಿಲ್ಲ. ಸ್ವತಂತ್ರ ಪ್ರವೃತ್ತಿಯಿಂದ ಅವಳು ಬದುಕುವ ಪ್ರಯತ್ನ ಮಾಡಿದರೆ, ಅವಳ ಸುರಕ್ಷಿತತೆಗೆ ಧಕ್ಕೆ ಉಂಟಾಗುವ ಭಯವೂ ಅವಳಲ್ಲಿ ಸದಾ ಇರುವಂತಹದ್ದಾಗಿದೆ. ಹೀಗೆ ಈ ವೃತ್ತದಲ್ಲಿ ಪೂರ್ವಕಾಲದಂತೆಯೇ ಇಂದಿನ ಸ್ತ್ರೀಯೂ ಸಿಲುಕಿಕೊಂಡೇ ಇದ್ದಾಳೆ. 'ಎಂತಲೇ ನಿಜವಾದ ಅರ್ಥದಲ್ಲಿ ಸಮಾಜ ಘಟಕ ಎಂಬುದಾಗಿ ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ಇಂದಿಗೂ ಸ್ತ್ರೀ ಜೀವನಕ್ಕೆ ಗೌಣ ಸ್ಥಾನವೇ ಇದೆ.'[೫] ಬಾಲಚಂದ್ರ ಫಡಕೆಯವರ ಈ ಅಭಿಪ್ರಾಯವು ಇಂದಿನ ಸ್ತ್ರೀಜೀವನದ ಮೇಲೆ ಮತ್ತು ಮರಾಠಿ ಸಾಹಿತ್ಯದಲ್ಲಿನ ಬದಲಾಗುತ್ತಿರುವ ಸ್ತ್ರೀ ಚಿತ್ರಣದ ಮೇಲೆಯೂ ಪ್ರಕಾಶನ ಬೀರುವಂತಹದ್ದಾಗಿದೆ. ಮನುಷ್ಯನಲ್ಲಿಯ ಅಹಂಭಾವವು ಇಲ್ಲವಾಗಿ ದ್ವೇಷತನದ ಭಾವನೆಯೂ ಇಲ್ಲವಾಗಬೇಕು. ಹಾಗಾದಾಗ ಮಾತ್ರವೇ ಸ್ತ್ರೀ-ಪುರುಷ ಸಮಾನತೆಯ ಮತ್ತು ಹೊಸ ಸ್ತ್ರೀಯ ಚಿತ್ರಣ ಇನ್ನು ಮುಂದಿನ ಮರಾಠಿ ವಾಙ್ಮಯ ದಲ್ಲಿ ನಿರ್ಮಾಣವಾಗಿ ನೋಡಲು ಸಿಗಬಹುದೆಂದು ನನಗೆ ಅನಿಸುತ್ತದೆ. ಸ್ತ್ರೀ ಇರಲಿ ಇಲ್ಲವೆ ಪುರುಷನಿರಲಿ ಎಲ್ಲಿಯವರೆಗೆ ಅವರ ಮನಸ್ಸಿನಲ್ಲಿ ಪರಸ್ಪರರ ವಿಷಯದಲ್ಲಿ ದ್ವೈತ ಮನೋಭಾವವು ಇರುವುದೋ ಅಲ್ಲಿಯವರೆಗೆ ಸ್ತ್ರೀಯಡೆಗೆ ಸಮಾಜವು ನೋಡುವ ದೃಷ್ಟಿ ಕೋನವು ಪಾರಂಪರಿಕವಾಗಿಯೇ ಇರುತ್ತದೆ. ಅಲ್ಲದೆ ಸಾಹಿತ್ಯದಲ್ಲಿ ಅವಳ ಚಿತ್ರಣವು ಆ ಭೂಮಿಕೆಯಿಂದಲೇ ಆಗುತ್ತಿರುತ್ತದೆ ಎಂಬ ಸಂಗತಿಯನ್ನು ಇಲ್ಲಿ ಅವಶ್ಯ ಗುರುತಿಸಬೇಕು.

**ಸಂದರ್ಭ ಗ್ರಂಥಗಳು**

೧. ಮನುಸ್ಮೃತಿ, ಅಧ್ಯಾಯ ೩, ೩/೫೬.

೨. ಏಕನಾಥೀ ಭಾಗವತ ೭/೫೮ ಮತ್ತು ೮/೧೨೫.

೩. ವಿವೇಕಾಚೀ ಗೋಠಿ ಪುಟ ೯೬.

೪. ವಿವೇಕ ಲಹರಿ ಪುಟ ೪೪, ೪೭.

೫. ಮರಾಠಿ ಕಾದಂಬರಿ:ಚಿಂತನ ಅಣಿ ಸಮೀಕ್ಷ್ಯಾ ಪುಟ ೫೯.

೬. ಮರಾಠಿ ಲೇಖಿಕಾ: ಚಿಂತಾ ಆಣಿ ಚಿಂತನ, ಪ್ರಸ್ತಾವಿಕ ಪುಟ ೫೯.

೭. ಕಿತ್ತಾ ಪುಟ ೨೪.

---

(ಮೂಲ ಕೃತಿ : ಸಾಹಿತ್ಯವೇಧ ಸಮನ್ವಯ ಪ್ರಕಾಶನ, ಧಾರವಾಡ-೧)

# ಪುರುಷ ಅಹಂಕಾರಕ್ಕೆ ಸವಾಲ್

## ಭಾಗ-೨

ಮರಾಠಿ ಮೂಲ : ತಾರಾಬಾಯಿ ಶಿಂದೆ

ತೆಲುಗಿನಿಂದ ಕನ್ನಡಕ್ಕೆ : ಬಿ. ಸುಜ್ಞಾನಮೂರ್ತಿ

ಮಹಿಳೆಯರು ಮೂರ್ಖರು, ಕೊಟ್ಟಿಗೆಯಲ್ಲಿ ಕಟ್ಟಿದ ಎಮ್ಮೆಗಳಂತೆ! ಅವರಿಗೆ ಓದಲು, ಬರೆಯಲು ಬರುವುದಿಲ್ಲ. ನಿಜವೇ ಆದರೂ ಅವರಿಗೆ ದೇವರು ತಿಳಿವಳಿಕೆಯನ್ನು ಒಟ್ಟಾರೆ ನೀಡಲಿಲ್ಲವೆಂದು ಅರ್ಥವೇ! ಅವರು ಆಲೋಚನಾಪರರಲ್ಲದಿದ್ದರೂ ನಿಮಗಿಂತಲೂ ಒಳ್ಳೆಯವರು. ನಿಮ್ಮ ಗಂಡಸರೆಲ್ಲ ಅಸಾಧ್ಯರೆಂಬುದು ನಿಜವೇ! ಒಂದು ಸಾರಿ ಜೈಲಿಗೆ ಹೋಗಿ ನೋಡಿ. ನಿಮ್ಮ ನಾಡಿನ ಗಂಡಸರಿಂದ ಒಂದೊಂದು ಜೈಲು ಎಷ್ಟು ತುಂಬಿದೆಯೆಂದರೆ ನಿಮಗೆ ಕಾಲಿಡಲು ಜಾಗವಿರುವುದಿಲ್ಲ. ಹೌದು, ಅವರೆಲ್ಲ ಬಹಳ ತಿಳಿವಳಿಕೆಯುಳ್ಳವರೇ. ಒಬ್ಬನೇನೋ ಕಳ್ಳನೋಟು ತಯಾರು ಮಾಡಿದ್ದಕ್ಕೆ, ಇನ್ನೊಬ್ಬನೇನೋ ಲಂಚ ತೆಗೆದುಕೊಂಡಿದ್ದಕ್ಕೆ, ಮತ್ತೊಬ್ಬ ಬೇರೊಬ್ಬನ ಹೆಂಡತಿಯನ್ನು ಎತ್ತಿಕೊಂಡು ಹೋಗಿದ್ದಕ್ಕೆ, ಮಗದೊಬ್ಬ ಹೋರಾಟದಲ್ಲಿ ಪಾಲ್ಗೊಂಡಿದ್ದಕ್ಕೆ, ಮತ್ತೊಬ್ಬ ಕಳ್ಳ ಸಾಕ್ಷ್ಯ ಹೇಳಿದ್ದಕ್ಕೆ, ಮತ್ತೊಬ್ಬ ರಾಜನ ವೇಷ ಹಾಕಿಕೊಂಡು ಜನರನ್ನು ನಾಶ ಮಾಡಿದ್ದಕ್ಕೆ, ಇನ್ನೊಬ್ಬ ಮತ್ತೊಬ್ಬನನ್ನು ಕೊಂದಿದ್ದಕ್ಕೆ ಅಲ್ಲಿ ಸೇರಿದ್ದಾರೆ. ಮತ್ತೆ ಇಂತಹ ದೊಡ್ಡ ತಿಳುವಳಿಕೆಯುಳ್ಳ ಕೆಲಸಗಳನ್ನು ಮಾಡಿದ್ದಕ್ಕೆ ಅಲ್ಲವೇ ಸರ್ಕಾರ ರಾಜಭವನದಂತಹ ಜೈಲುಗಳಲ್ಲಿ ಗೌರವದಿಂದ ನಿಮಗೆ ಕೋಣೆಯನ್ನು ಕೊಟ್ಟಿರುವುದು. ಎಂತಹ ಮಹಿಳೆಯಾದರೂ ಇಂತಹ ಕೆಲಸಗಳನ್ನು ಮಾಡುತ್ತಿದ್ದಾಳಾ? ಎಷ್ಟು ಕಾರಾಗೃಹಗಳು ಮಹಿಳೆಯರಿಂದ ತುಂಬಿವೆ? ಸಾವಿರ ಎರಡು ಸಾವಿರ ಅಂಕಿಗಳಲ್ಲಿರುವ ಗಂಡಸರಿಗೆ ಪ್ರತಿಯಾಗಿ ಒಂದು ನೂರು ಮಂದಿ ಮಹಿಳೆಯರು ಕೂಡ ಇರುವುದಿಲ್ಲ. ಮಹಿಳೆಯರು ಮಾಡುವ ದೊಡ್ಡ ಬುದ್ಧಿಗೇಡಿ ಕೆಲಸವೇನೆಂದು ನಮ್ಮನ್ನು ನಾವು ಕೇಳಿಕೊಂಡರೆ, ಅದು ವ್ಯಭಿಚಾರವೆಂದು ನಿರ್ಧಾರವಾಗುತ್ತದೆ - ಮೇರು ಪರ್ವತಶಿಖರದಂತಹ ತಪ್ಪು ಅದೇ. ಅದಕ್ಕೆ ಕಾರಣವಾದವರನ್ನು ತಪ್ಪದೆ ಕಂಡು ಹಿಡಿಯಬೇಕಾದದ್ದೇ. ಒಬ್ಬ ಮಹಿಳೆ ವಿವಾಹೇತರ ಸಂಬಂಧ ಇಟ್ಟುಕೊಂಡಳೆಂದರೆ ಅದಕ್ಕೆ ಮುನ್ನ ಮೊಟ್ಟಮೊದಲು ಆಕೆಯ ಮನಸ್ಸಿನಲ್ಲಿ ಆ ಕೆಡುಬೀಜಗಳನ್ನು ಹಾಕಿದವರಾರು? ನೀವಾ,

ಆಕೆಯಾ? ಒಬ್ಬ ಮಹಿಳೆ ಎಷ್ಟು ಲಜ್ಜೆಗೇಡಿಯಾದರೂ ಆಕೆ ಬಲವಂತದಿಂದ ಯಾವ ಗಂಡಸಿನ ಸುತ್ತಲೂ ಕೈಹಾಕುವುದಿಲ್ಲವೆಂಬುದು ಎದುರಿಲ್ಲದ ಸತ್ಯ. ಮಹಿಳೆಗೆ ಲೋಕದಲ್ಲಿ ಎಲ್ಲಕ್ಕಿಂತ ಸಂತೋಷದಾಯಕವಾದುದೇನು? ಮೊಟ್ಟಮೊದಲ ಸ್ಥಾನ ಆಕೆಯನ್ನು ಅರ್ಥ ಮಾಡಿಕೊಂಡು ಪ್ರೀತಿಸುವ ಗಂಡನಿಗೆ ಸಲ್ಲುತ್ತದೆ. ಆಕೆಯದು ಅವನದು ಒಂದೇ ಮನಸ್ಸಾದರೆ, ಆಕೆ ಎಷ್ಟು ಬಡವಳಾದರೂ, ಹುಲ್ಲು ಗುಡಿಸಲಲ್ಲಿ ಊಟ ಬಟ್ಟೆ ಇಲ್ಲದೆ ಇದ್ದರೂ, ಬಹಳ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸುತ್ತಿದ್ದರೂ, ದೂರ ಹೋಗಿ ಕಾಡಿನಲ್ಲಿ ವಾಸಿಸುತ್ತಿದ್ದರೂ ಆಕೆಗೆ ಅವನ ಮೇಲೆಯೇ ಮನಸ್ಸಿರುತ್ತದೆ. ಅವಳ ಮನಸ್ಸು ಆ ಕಷ್ಟಗಳನ್ನೆಲ್ಲ ಆನಂದದಿಂದ ಸ್ವೀಕರಿಸುತ್ತದೆ. ಆಕೆಯ ದಾರಿಯಲ್ಲಿ ಆಕೆಯನ್ನು ಬಿಟ್ಟು ಬಿಟ್ಟರೆ ಯಾವ ಮಹಿಳೆಯೂ ವಿವಾಹೇತರ ಸಂಬಂಧಗಳ ಸಹವಾಸಕ್ಕೆ ಹೋಗಲಾರಳು.

ಆದರೆ ಒಂದು. ಹಿಂದಿನ ಕಾಲದ ಮಹಿಳೆಯರು ಇಂತಹ ಕೆಲಸಗಳನ್ನೆಂದಿಗೂ ಮಾಡಲಿಲ್ಲ ವೆಂಬುದು ನಿಜವಲ್ಲ. ನೀವು ಬಹಳ ದೊಡ್ಡದಾಗಿ ಹೇಳುತ್ತಿರುತ್ತಿರಲ್ಲ! ಆ ಶಾಸ್ತ್ರಗಳನ್ನೇ ನೋಡಿರಿ. ಈಗ ನಮಗಷ್ಟು ಗೋಜಲು ಪರಿಸ್ಥಿತಿ ಇಲ್ಲವೆಂದುಕೊಳ್ಳಿ. ಪುರಾಣದ ದಿನಗಳಲ್ಲಿ ಒಬ್ಬ ಮಹಾರಾಜ ವಂಶಕ್ಕೆ ವಾರಸುದಾರ ಇಲ್ಲದೆ ಸತ್ತರೆ, ಅವನ ಹೆಂಡತಿ ಆಕೆಗೆ ಇಷ್ಟವಾದ ಮುನಿಯೊಂದಿಗೆ ಕೂಡಿ ವಾರಸುದಾರನ್ನು ಪಡೆಯಬಹುದು. ಆ ರಾಣಿ ಒಬ್ಬಸಲ್ಲದೆ ಹತ್ತು ಮಂದಿ ಗಂಡು ಮಕ್ಕಳು ಹುಟ್ಟುವವರೆಗೆ ಅವನನ್ನು ಆ ಕೆಲಸದ ಮೇಲೆ ಇಟ್ಟುಕೊಳ್ಳಬಹುದು. ಮತ್ತೆ ಅಲ್ಲಿ ನಡೆದದ್ದೇನು? ವಿವಾಹೇತರ ಸಂಬಂಧ ಅಲ್ಲವೇ! ಅದು ವ್ಯಭಿಚಾರವಲ್ಲವೇ? ಅದು ಶಾಸ್ತ್ರಗಳು ಒಪ್ಪಿಕೊಳ್ಳುವ ಕೆಲಸವೇನಾ? ನಿಜಕ್ಕೂ ಆ ಮಹಿಳೆಗೆ ಮತ್ತೆ ಮದುವೆ ಮಾಡಿಕೊಳ್ಳುವ ಸರಿಯಾದ ಅವಕಾಶವೆಂಬುದು ಇದ್ದರೆ ಆ ರಾಜ್ಯ ಮತ್ತಷ್ಟು ಬಲವಾಗಿ ರುತ್ತದೆ. ನಮ್ಮ ದೇಶ ಈ ದಿನಗಳಲ್ಲಿ ಬಡತನದಿಂದ ಕರಗಿ ಹೋಗುತ್ತಿರುವ ನೂರಾರು ಚಿಕ್ಕ ಚಿಕ್ಕ ರಾಜ್ಯಗಳೊಂದಿಗೆ, ಜಾಗೀರುಗಳೊಂದಿಗೆ, ಇನಾಮುಗಳೊಂದಿಗೆ, ದೇಶಮುಖ ರೊಂದಿಗೆ ಇರುತ್ತಿರಲಿಲ್ಲ. ಈ ಚಿಕ್ಕ ಚಿಕ್ಕ ದೇಶಗಳಿಗೆ ಬಹುಮಟ್ಟಿಗೆ ಸರಿಯಾದ ವಾರಸು ದಾರರು ಇಲ್ಲದಿರುವುದರಿಂದ ಅವರ ಎಸ್ಟೇಟ್‌ಗಳೆಲ್ಲ ಸರ್ಕಾರದ ಖಜಾನೆಗೆ ಸೇರಿ ಹೋಗಿವೆ. ಕೆಲವು ಪ್ರದೇಶಗಳಲ್ಲಿ ಉಳಿದ ಮಹಿಳೆಯ ತಲೆಗಳನ್ನೆಲ್ಲ ಬೋಳು ಮಾಡಿದ್ದಾರೆ. ಅವರ ಕಷ್ಟಗಳನ್ನು ಯಾರೂ ಗಮನಿಸುತ್ತಿಲ್ಲವಾದ್ದರಿಂದ ನೀವು ಮಿಡಿತೆಯ ದಂಡಿನಂತೆ ಅವರ ಮೇಲೆ ಬಿದ್ದು, ಅವರನ್ನೂ ಹೊಸಕಿ ಹಾಕಿದ್ದೀರಿ. ಬಹಳ ಅಂದವಾದ ದೇವತಾ ಸ್ತ್ರೀಯಂತವರು ಆ ರಾಜನ ಆಸ್ಥಾನಗಳಲ್ಲಿ ಇದ್ದರು. ಯಾವತ್ತೂ ಪಾದಗಳಿಂದ ನೆಲವನ್ನು ಕೂಡ ತಾಕದ ಅವರು ನಿಮ್ಮ ಸ್ವಾರ್ಥಪೂರ್ಣವಾದ ಕುತಂತ್ರಗಳಿಂದ ದರಿದ್ರರೂ ತಿರುಬೋಕಿಗಳೂ ಆಗಿ ಹೋದರು. ಅವರಿಗೆ ಮತ್ತೆ ಮದುವೆ ಮಾಡಿಕೊಳ್ಳುವ ಅವಕಾಶ ಇದ್ದಿದರೆ ಅವರಿಗೆ ಅಂತಹ ದೀನಪರಿಸ್ಥಿತಿ ಬರುತ್ತಿತ್ತೇ? ನಿಜಕ್ಕೂ ಬರುತ್ತಿರಲಿಲ್ಲ. ಒಬ್ಬ ಗಂಡ ಸತ್ತು ಹೋದರೆ ಒಬ್ಬ ಮಹಿಳೆ ಬದುಕಿನಿಂದ ಕೂಡ ಪೂರ್ತಿಯಾಗಿ ಜೀವ, ಕಲ್ಲಿನಂತೆ ನಶಿಸಿದಂತೆ ಸರಿ. ಆದರೆ ಅದರ ಮೂಲದಿಂದ ಇನ್ನೊಂದು ನಾಲ್ಕೋ, ಐದೋ ಒಂದೊಂದು ಸಾರಿ ಹತ್ತು

ಜೀವನಗಳು ಕೂಡ ಚೂರು ಚೂರಾಗುತ್ತವೆ. ಇನ್ನೊಂದೆಡೆ ನೋಡಿರಿ: ಒಬ್ಬ ಹೆಂಡತಿಗೆ ಮಗ ಹುಟ್ಟದೆ ಹೋದರೆ ಹೆಂಡತಿಯರ ಸಂಖ್ಯೆ ಎರಡು, ಮೂರು, ನಾಲ್ಕು ಹೀಗೆ ಬೆಳೆಯುತ್ತ ಹೋಗುತ್ತದೆ. ಮರಾಠರಲ್ಲಿ, ದೇಶಮುಖರಲ್ಲಿ ಪ್ರತಿಯೊಬ್ಬ ಗಂಡಸಿಗೆ ನಾಲ್ಕೈದು ಮಂದಿ ಹೆಂಡತಿಯರು, ಕನಿಷ್ಟ ಮೂವರು ಹೆಂಡತಿಯರಿರಬಹುದು. ಅದನ್ನಾರೂ ತಪ್ಪು ಎಂದು ಹೇಳುವುದಿಲ್ಲ. ಇಷ್ಟಕ್ಕಿದ್ದಂತೆ ನಮ್ಮ ಮುದಿಯುವಕ ಸ್ವರ್ಗಕ್ಕೆ ಪ್ರಯಾಣ ಬೆಳೆಸಿದರೆ ಅವನ ಪ್ರತಿಯೊಬ್ಬ ಹೆಂಡತಿ, ಗಂಡು ಮಕ್ಕಳಿದ್ದರೂ, ಇಲ್ಲದಿದ್ದರೂ, ಪಕ್ಕದಲ್ಲಿ ಕುಳಿತು ತಲೆ ಚಚ್ಚಿಕೊಳ್ಳುತ್ತ ಅಳಬೇಕಾದ್ದೇ. ಮಹಿಳೆಯರ ಮನಸ್ಸು ಬಹಳ ಮೃದುವಾದುದು. ಅವರು ನಿಮ್ಮಂತಲ್ಲದೆ ಚಿಕ್ಕ ಚಿಕ್ಕ ವಿಷಯಗಳಿಗೆ ತೃಪ್ತಿ ಪಡುತ್ತಾರೆ. ಅವರ ಮೆದುಳು ಯಾವಾಗಲೂ ದೊಡ್ಡ ದೊಡ್ಡ ಉದ್ಯೋಗ, ಬಹಳ ಹಣ ಹೊಂದಬೇಕೆಂಬ ಆಲೋಚನೆ ಯಿಂದ ಗುಯ್‌ಗುಡುವುದಿಲ್ಲ. "ಜನ ನನ್ನನ್ನು ಸರಿಯಾಗಿ ಗೌರವಿಸುತ್ತಿದ್ದಾರಾ ಇಲ್ಲವೇ? ಇಲ್ಲದೆ ಹೋದರೆ 'ಆ ಮುದುಕ ಗೋಮಾಜಿ' ಎನ್ನುತ್ತ ತನ್ನ ಬಗ್ಗೆ ಚರ್ಚಿಸುತ್ತಿದ್ದಾರಾ?" ಎಂದುಕೊಳ್ಳುತ್ತ ಅವರು ಯಾವಾಗಲೂ ತಹತಹ ಪಡುತ್ತಿರುತ್ತಾರೆ. ಅವರು ಪಡೆಯ ಲಾರದವನ್ನು ಪಡೆಯುವುದಕ್ಕೆ ಪ್ರಯತ್ನಿಸುತ್ತ ಜೀವನವನ್ನು ಕಳೆಯುವುದಿಲ್ಲ. ನೀವು ಹಿಂದಕ್ಕೆ ತಿರುಗಿ ಹೋಗಿ ಬುದ್ಧಿಗೇಡಿತನವೆಲ್ಲ ಹೆಂಗಸರದೇ ಎನ್ನುವಂತೆ ಮಾತಾಡಿದರೆ ನಾವು ಏನೆನ್ನ ಬಲ್ಲೆವು?

ಐದನೇ ವಿಷಯ : ಮಹಿಳೆಯರೇ ಎಲ್ಲ ಅಪರಾಧಗಳಿಗೆ ನಿಧಿಗಳೆಂದು ನಿರ್ಧರಿಸಿದ್ದೀರಿ. ನಿಜಕ್ಕೂ ಇದಕ್ಕೆ ವಿರುದ್ಧವಾದುದೇ ಸತ್ಯ. ಮಹಿಳೆ ತಪ್ಪು ದಾರಿ ಹಿಡಿದರೆ ಅದು ಯಾವತ್ತೂ ನಿಮ್ಮಿಂದಲೇ. ದಯವಿಟ್ಟು ನೋಡಿರಿ: ಎಷ್ಟೋ ಮಂದಿ ತಂದೆಯರು ತಮ್ಮ ಹತ್ತು, ಹನ್ನೊಂದು ವರ್ಷದ ಹೆಣ್ಣುಮಕ್ಕಳನ್ನು, ಚಿಕ್ಕ ಚಿಕ್ಕ ನಕ್ಷತ್ರಗಳಂತೆ ಹೊಳೆಯುವ ಹೆಣ್ಣು ಮಕ್ಕಳನ್ನು, ದೊಡ್ಡ ದೊಡ್ಡ ನೋಟಿನ ಕಂತೆಗಾಗಿ ಎಂಬತ್ತು, ತೊಂಬತ್ತು ವರ್ಷದ ಮುದುಕರಿಗೆ ಕಟ್ಟಿಕೊಡುತ್ತಾರೆ. ಆ ಮುದುಕನ ಆಸ್ತಿಯ ಮೇಲೆ ಕಣ್ಣಿಟ್ಟು, "ಅವನು ಸತ್ತು ಹೋದರೂ ದೊಡ್ಡ ನಷ್ಟವೇನೂ ಇಲ್ಲವಲ್ಲಾ? ನಮ್ಮ ಹುಡುಗಿಗೆ ಹಣದ ಕೊರತೆ ಇರುವುದಿಲ್ಲವಲ್ಲ! ಆಕೆ ಕೆಲವು ದಿನಗಳಲ್ಲಿ ಮಾಮೂಲಾಗಿ ಇದ್ದು ಊಟ ಮಾಡುವುದು, ನೀರು ಕುಡಿಯುವುದು ಮಾಡುತ್ತಾಳೆ. ಒಡವೆ ಇಟ್ಟುಕೊಳ್ಳುತ್ತಾಳೆ. ಮಾಮೂಲಾಗಿ ಬಟ್ಟೆ ತೊಟ್ಟುಕೊಳ್ಳುತ್ತಾಳೆ, ಗಂಡನಿಲ್ಲದಿದ್ದರೆ ಏನು ದೊಡ್ಡ ನಷ್ಟವಂತೆ?" ಎನ್ನುತ್ತಾರೆ. ಇಂತಹ ಮಾತುಗಳಿಂದ ಮೇಕೆಯನ್ನು ಹುಲಿಗೆ ಒಪ್ಪಿಸಿದಂತೆ ನಾಚಿಕೆಯಿಲ್ಲದೆ ಆಕೆಯನ್ನು ಒಪ್ಪಿ ಸುತ್ತಾರೆ. ಆದರೆ ಆಕೆಗೆ ನಿಜವಾದ ಸಂತೋಷ, ಪ್ರಿಯನಾದ ಗಂಡ, ಆಕೆಯನ್ನು ಸೊಗಸಾದ ಆಭರಣಗಳಿಂದ, ವಸ್ತ್ರಗಳಿಂದ ತುಂಬುವುದರಲ್ಲಿ ಸಂತೋಷಪಡುವ ವ್ಯಕ್ತಿ, ಆಕೆಯನ್ನು ಯಾವಾಗಲೂ ಹೊಗಳುತ್ತ, ಪ್ರೀತಿಯಿಂದ ಸಮಾನವಾಗಿ ನೋಡಿಕೊಳ್ಳುವ ಅವನೇ ಹೋದರೆ ಉಳಿದ ಜಗತ್ತು ಆಕೆಗೆ ಬರೀ ಅರಣ್ಯವೇ ಅಲ್ಲವೇ? ಬರೀ ಮೇಲು ಮೇಲಿನ ಆಡಂಬರಗಳಿಂದ ಆಕೆಗೆ ಕೆಲಸವೇನಿದೆ? ಹಿಂದಿನ ದಿನಗಳಲ್ಲಿ ಮಹಿಳೆ ಗಂಡನ ಜೊತೆ ಸತಿಸಹಗಮನ

ಮಾಡುತ್ತಿದ್ದಳು- ಅದೂ ಚೆನ್ನಾಗಿಯೇ ಇದೆ. ಆಕೆ ಕೂಡ ಅವನ ಜೊತೆ ಬೂದಿಯಾದರೆ ಎಲ್ಲ ಮುಗಿದು ಹೋಗುತ್ತಿತ್ತು.

ತಾಯಿಯ ನಂತರ ಗಂಡನಷ್ಟು ಆಕೆಯನ್ನು ಯಾರೂ ಪ್ರೀತಿಸುವುದಿಲ್ಲವೆಂಬುದು ಸತ್ಯ. ಆ ಇಬ್ಬರೂ ಹೋದ ಮೇಲೆ ಆಕೆಗೆ ಜೀವನವನ್ನು ಎಳೆದುಕೊಂಡು ಹೋಗುವುದಕ್ಕೆ ಬಲ ಎಲ್ಲಿಂದ ಬರುತ್ತದೆ, ಅದೂ ಯುವರಕ್ತದ ಬೆಂಕಿಯ ಕೆಂಡಗಳು ಆಕೆಯ ಹೃದಯದಲ್ಲಿ ಉರಿಯುತ್ತ ಇರುವಾಗ! ಹಣಕ್ಕಾಗಿ ಮಾರಿಕೊಂಡ ಹೆಣ್ಣುಮಕ್ಕಳ ಗತಿ ಅಷ್ಟೇ ಮತ್ತೆ!

ಕೆಲವು ಮಂದಿ ತಮ್ಮ ಹೆಣ್ಣುಮಕ್ಕಳನ್ನು ಎರಡನೇ ಹೆಂಡತಿಯಾಗಿ ಮದುವೆ ಮಾಡಿ ಕೊಡುತ್ತಾರೆ. ಆದರೆ ಒಬ್ಬ ಮಹಿಳೆಯನ್ನು ಎರಡನೇ ಹೆಂಡತಿ ಆಗು ಎನ್ನುವುದು ಮುಳ್ಳಿನಂತೆ ಮತ್ತಾವ ಆಯುಧವೂ ಮನಸ್ಸಿನಲ್ಲಿ ಚುಚ್ಚಿಕೊಂಡು ನೋಯಿಸದು. ಗಂಡ ಇನ್ನೊಬ್ಬ ಮಹಿಳೆಯನ್ನು ಕೊಂಚ ಪರಿಶೀಲನೆಯಿಂದ ನೋಡಿದರೂ ಆಕೆಯ ರಕ್ತ ಕುದಿಯುತ್ತದೆ. ಅದೂ ಸುಮ್ಮನೆ ನೋಡುವ ವಿಷಯ. ಇನ್ನು ಗಂಡ ಇನ್ನೊಬ್ಬ ಮಹಿಳೆಯನ್ನು ಮದುವೆ ಮಾಡಿಕೊಂಡರೂ ಅಥವಾ ಮದುವೆಯಿಲ್ಲದೆ ಇಟ್ಟುಕೊಂಡರೂ ಅದು ಮನೆಯಲ್ಲಾದರೂ, ಹೊರಗಡೆಯಲ್ಲಾದರೂ ಆಕೆ ಹೇಗೆ ಸಹಿಸಬಲ್ಲಳು. ಇಬ್ಬರು ಮಹಿಳೆಯರು ಒಂದೇ ಮನೆಯಲ್ಲಿ ಸಂತೋಷದಿಂದ ಇರುವುದನ್ನು ನೀವೆಂದೂ ನೋಡಿಲ್ಲ. ಬಟ್ಟೆ, ಒಡವೆ ವಿಷಯ ದಲ್ಲಿ ಅವರಿಬ್ಬರನ್ನು ನೀವೆಷ್ಟು ಸಮಾನವಾಗಿಯಾದರೂ ನೋಡಿರಿ. ಆದರೆ ನೀವು ಒಬ್ಬರನ್ನು ಪ್ರೀತಿಸಿದಂತೆ ಇಬ್ಬರನ್ನು ಸಮಾನರಾಗಿ ಹೇಗೆ ಪ್ರೀತಿಸಬಲ್ಲಿರಿ? ಪ್ರೀತಿಯೆಂಬುದು ಮಾವಿನ ಹಣ್ಣೋ, ಪೇರಲ ಹಣ್ಣೋ ಅಲ್ಲವಲ್ಲ ಚೂರು ಮಾಡಿ ಹಂಚಿ ಕೊಡುವುದಕ್ಕೆ. ಪ್ರೀತಿ ಹಾಲಿನಂತಹುದು. ಒಂದು ಸಾರಿ ಹುಳಿ ಬಂತೋ ಅದನ್ನೆಷ್ಟು ಕಡೆದರೂ ಮತ್ತೆ ಸರಿಪಡಿಸ ಲಾಗದು. ಒಂದು ಸಾರಿ ಮುರಿದು ಹೊದರೆ ಮತ್ತೆ ಅದನ್ನು ಸೇರಿಸಲಾರರಿ. ನಿಜವೇ! ಮನುಷ್ಯರು ಹೊಸ ವಸ್ತುಗಳನ್ನು ಹಳೆಯ ವಸ್ತುಗಳಿಗಿಂತಲೂ ಇಷ್ಟಪಡುವುದು ಸಹಜವೇ, ಅವರು ಯಾರಾದರೂ ಸರಿ! ಆದರೆ ಪುರುಷ ತನ್ನ ಹೆಂಡತಿ ಯಾರನ್ನಾದರೂ ಕೊಂಚ ಶ್ರದ್ಧೆಯಿಂದ ಗಮನಿಸಿದರೂ, ಇನ್ನು ಅಷ್ಟೇ, ಅವನು ಕೋಪದಿಂದ ಬೆಂದು ಹೋಗಲು ಆರಂಭಿಸುತ್ತಾನೆ. ಇನ್ನು ಆಕೆಯ ಕುಟುಂಬ ಅವಮಾನದ ಪಾಲಾಗುವುದು, ಆಕೆಗೆ ಹೊಡೆತ, ಕೊಠಡಿಯಲ್ಲಿ ಬಂಧಿಸುವುದು, ಅವಸ್ಥೆಗಳನ್ನು ಪಡುವುದು. ಇವೇನೂ ನಿಮಗೆ ಅನ್ವಯಿಸು ವುದಿಲ್ಲವೇ?

ನೀವು ಆಕೆ ನೋಡಿದ ಒಂದು ನೋಟವನ್ನೇ ಸಹಿಸಲಾರದೆ ಹೋದರೆ ಆಕೆಯ ಎದೆಯ ಮೇಲೆ ಉರಿಯುವ ಕುಲುಮೆಯನ್ನು ಇಟ್ಟುಕೊಂಡು ಸಹಿಸುತ್ತಾಳಾ? ಮತ್ತೆ ಜನರು ತಮ್ಮ ಹೆಣ್ಣು ಮಕ್ಕಳನ್ನು ಎರಡನೇ ಹೆಂಡತಿಯಾಗಿ ಯಾಕೆ ಕಳುಹಿಸುತ್ತಾರೆ? ಯಾರಿಗಾದರೂ ಹೆಚ್ಚು ಮಂದಿ ಹೆಣ್ಣುಮಕ್ಕಳಿದ್ದರೆ, ಅವರು ಆಕೆಯನ್ನು ಯಾವುದೇ ಬಗೆಯ ಗಂಡು ಸಿಕ್ಕಿದರೂ ಅವನಿಗೆ ಕಟ್ಟಿಬಿಡುತ್ತಾರೆ. ಅವನು ಎಂಥವನಾದರೂ ಪರವಾಗಿಲ್ಲ. ಕೆಲವು ಮಂದಿ ತಮ್ಮ ಹೆಣ್ಣುಮಕ್ಕಳನ್ನು ತಮ್ಮ ಕುಟುಂಬವನ್ನು ನಾಶ ಮಾಡಬಲ್ಲ ಗಂಡಸರಿಗೇ

ಕಟ್ಟಿಕೊಡುತ್ತಾರೆ. ಒಬ್ಬ ಗಂಡಸು ಎಷ್ಟು ಕುರೂಪಿಯಾಗಿಯಾದರೂ ಇರಬಹುದು. ದುರಭ್ಯಾಸಗಳಿಂದ, ಕನಿಕರವಿಲ್ಲದೆ ಕ್ರೂರವಾಗಿ, ಇತರರನ್ನು ಹೊಡೆಯುವುದು, ಹಿಂಸಿಸುವುದರಲ್ಲಿ ಆನಂದ ಹೊಂದುವವನು, ಕುಟುಂಬಕ್ಕೆ ಊಟ ತಿಂಡಿ ಕೂಡ ನೀಡಲಾರದನಾಗಿರಬಹುದು. ಆದರೂ ಸರಿ, ಜನರು ಅಂತಹ ದುಷ್ಟರಿಗೆ ಹೆಣ್ಣುಮಕ್ಕಳನ್ನು ಹಸುವನ್ನು ಕಟುಕನಿಗೆ ಒಪ್ಪಿಸುವಂತೆ ಒಪ್ಪಿಸುತ್ತಾರೆ. ಅವೆಲ್ಲವನ್ನು ಬಣ್ಣಿಸಬೇಕೆಂದರೆ ಒಂದು ಗಾಡಿ ಕಾಗದ ಸಾಕಾಗುವುದಿಲ್ಲ. ಮತ್ತೆ ಹೆಂಗಸರು ಇಂತಹವುಗಳಿಂದ ಮನೆ ಬಿಟ್ಟು ಓಡಿ ಹೋಗುತ್ತಾರೆಂದರೆ ಅದು ಯಾರ ದೋಷ? ತಂದೆಯದ್ದೇ, ಮಗಳದ್ದೇ?

ನಿಜಕ್ಕೂ ಎಲ್ಲಕ್ಕಿಂತ ಶ್ರೇಷ್ಠ ಸಂತೋಷ ಪಡೆದ ಮಹಿಳೆಯರು-ಅದೇ ಅನುಕೂಲವಂತನಾದ ಗಂಡನನ್ನು ಪಡೆದವರು-ಮುಂದುವರಿದು ಕೇವಲ ಒಡವೆ, ವಸ್ತ್ರಗಳಿಗಾಗಿ ಇಂತಹ ಹಾಳು ಕೆಲಸಗಳನ್ನು ಮಾಡುವವರು ಬಹಳ ಕಡಿಮೆ ಮಂದಿ ಇರುತ್ತಾರೆ. ಬಹುಶಃ ಈಗ ನೀವೊಬ್ಬ ರಾಜನ ಕುಟುಂಬವನ್ನು ತೋರಿಸಿ ಅಲ್ಲಿ ಸುಖ ಸಂತೋಷಗಳಿಗೇನೂ ಕೊರತೆ ಇಲ್ಲವಲ್ಲ ಎನ್ನಬಹುದು. ಆದರೆ ಅವರು ತಮ್ಮ ಮಹಿಳೆಯರನ್ನು ತಮ್ಮ ವಿಹಾರಗಳಲ್ಲಿ ಜೊತೆಗೆ ಕರೆದುಕೊಂಡು ಹೋಗುತ್ತಾರಾ? ರಾಜರಿಂದ, ಈ ದೊಡ್ಡ ಶ್ರೀಮಂತರಿಂದ ಯಾವ ಕೆಲಸವನ್ನಾದರೂ ಮಾಡಿಸುವುದು ಬಹಳ ಕಷ್ಟ. ವರ್ಷದಲ್ಲಿ ಆರು ತಿಂಗಳು ಅವರು ನಿಜಕ್ಕೂ ತಮ್ಮ ಹೆಂಡತಿಯರನ್ನು, ರಾಣಿಯರನ್ನು ನೋಡುವುದೇ ಇಲ್ಲ. ಆದ್ದರಿಂದ ಅವರಿಗೆ ಯಾವ ಸುಖವೂ ಇಲ್ಲವೆಂದಾಯಿತು. ಅವರೇನು ಮಾಡಬೇಕು ಮತ್ತೆ? ಅವರ ಸುತ್ತಲೂ ಭೋಜನ, ಪಾನೀಯ, ಸೌಕರ್ಯ, ಸೌಖ್ಯಗಳು ಎಲ್ಲ ತುಂಬಿಯೇ ಇರುತ್ತವೆ. ಈ ಹೂವಿನಂತಹ ಮಹಿಳೆಯರನ್ನು ಗಂಡಸರು ಹೇಗೆ ಹಿಂದಕ್ಕೆ ಬಿಟ್ಟು ಇರಬಲ್ಲರು? ಅದು ಹೇಗಿದೆಯೆಂದರೆ "ಅಮ್ಮ ಇಡುವುದಿಲ್ಲ, ಅಪ್ಪ ಬೇಡಲು ಬಿಡುವುದಿಲ್ಲ" ಎಂಬಂತೆ. ಮಹಿಳೆಯರ ಬಗ್ಗೆ ಇಷ್ಟು ಉದಾಸೀನತೆ ಇರುವಾಗ ಸಹಜವಾಗಿಯೇ ಅವರು ಹಂದಿಗಳಂತೆ ಚರಂಡಿಯಲ್ಲಿ ಬಿದ್ದು ಹೊರಳಾಡುತ್ತಿರುತ್ತಾರೆ. ಇದು ಒಂದು ಉದಾಹರಣೆ ಮಾತ್ರವೇ. ಸತ್ಯ ಹೇಳಬೇಕೆಂದರೆ ನಿಮ್ಮ ಗಂಡಸರಂತೆ ಆ ಮಹಿಳೆಯರು ಕೆಟ್ಟು ಹೋಗುತ್ತಾರೆ. ಅವರು ಇಂತಹ ಕೆಲಸಗಳನ್ನು ಮಾಡುವುದಕ್ಕೆ ಕಾರಣಗಳೇನಿರುತ್ತವೆ, ನೀವೇನಾದರೂ ಒಬ್ಬಳೇ ಹೆಂಡತಿಗೆ ಕಟ್ಟುಬಿದ್ದಿದ್ದರೆ. ಇನ್ನೊಂದು ಉದಾಹರಣೆ ತೆಗೆದುಕೊಳ್ಳೋಣ. ಕೆಲವು ಮಂದಿ ಮಹಿಳೆಯರು ಸರ್ವಸುಖಗಳನ್ನು ಅನುಭವಿಸುತ್ತ ಗಂಡಂದಿರಿಗೆ ದ್ರೋಹ ಮಾಡುತ್ತಾರೆ. ಇಲ್ಲಿನ ಪರಿಸ್ಥಿತಿಗಳೇನು? ಆಕೆ ಎಷ್ಟು ಅದ್ಭುತವಾದ ಮಹಿಳೆಯೋ ಹೊಗಳಿ, ಹೊಗಳಿ ಆಕೆಯ ಮೇಲೆ ನಿಮಗಿರುವ ಮೋಹವನ್ನು ದೃಢವಾಗಿ ಪ್ರದರ್ಶಿಸಿ, ಆಕೆ ನಿಮ್ಮ ರಾಣಿ, ದೊರೆಸಾನಿ ಎಂದು, ನೀವು ಆಕೆಯ ಗುಲಾಮ, ಜೀತಗಾರನೆಂದು, ಬಂದಿ ಎಂದು ಆಕೆಯ ಕಿವಿಯಲ್ಲಿ ಮನೆ ಕಟ್ಟಿಕೊಂಡು ನೀವು ಹೋರಾಡುತ್ತೀರಿ. "ನಿನ್ನಿಂದ ಒಂದು ಪ್ರೀತಿಯ ನೋಟಕ್ಕಾಗಿ ಎದುರು ನೋಡುತ್ತಿದ್ದೇನೆ. ಒಂದು ನೋಟಕ್ಕಾಗಿ ಬಿದ್ದು ಸಾಯುತ್ತಿದ್ದೇನೆ. ನಿನ್ನ ಕೊರಳಲ್ಲಿ ಹಾರವಾಗುತ್ತೇನೆ, ನೀನೇನು ಮಾಡೆಂದರೂ ಮಾಡುತ್ತೇನೆ. ನಿನ್ನ ಕಾಲು

ನೆಲದ ಮೇಲಿನ ಮಣ್ಣನ್ನು ಕೂಡ ತಾಕದಂತೆ ಪಲ್ಲಕ್ಕಿಯಲ್ಲಿ ಕೂರಿಸುತ್ತೇನೆ. ನಿನ್ನ ಚಪ್ಪಲಿಗಳನ್ನು ನನ್ನ ಕೈಯಲ್ಲಿ ಹಿಡಿದುಕೊಂಡು ತಿರುಗುತ್ತೇನೆ" ಹೀಗೆ ನೀವು ಅಂಗಲಾಚಿ ಬೇಡುತ್ತೀರಿ. ಆಕೆ ನಿಮ್ಮ ಆಸೆಯನ್ನು ಕೆರಳಿಸುವ ಸುಳ್ಳುಗಳನ್ನೆಲ್ಲ ಜೇನಿನಂತೆ ಕುಡಿಯುತ್ತಾಳೆ. ಇನ್ನೇನು ನಿಮ್ಮ ಬುಟ್ಟಿಯಲ್ಲಿ ಬಿದ್ದು ಬಿಡುತ್ತಾಳೆ.

ಮತ್ತೆ ಉಳಿದ ಹೆಂಗಸರು ಇಂತಹ ಮಾಯೆಯಲ್ಲಿ ಬಿದ್ದು ಮೋಸ ಹೋಗುವುದನ್ನು ನೋಡಿದ ಆಕೆ ತನಗೆಂತಹ ಕಷ್ಟಗಳು ಬರಲಿವೆಯೋ ಊಹಿಸಿಕೊಳ್ಳದೇ ಬುಟ್ಟಿಯಲ್ಲಿ ಬಿದ್ದು ಬಿಡುತ್ತಾಳಾ ಎಂದು ನೀವು ಕೇಳಬಹುದು. ಅಂತಹ ಆತ್ಮನಿಗ್ರಹ ಇರಬೇಕೆಂದರೆ ಆಕೆಗೆ ದೇವರೇ ಪಕ್ಕದಲ್ಲಿರಬೇಕು, ಕಾಮವೆಂಬುದು ಅಷ್ಟು ತೀವ್ರವಾದುದಾದ್ದರಿಂದ. ಅಲ್ಲವೆನ್ನುತ್ತೀರಾ? ನಾವು ಸಮುದ್ರದಷ್ಟು ವಿವೇಕ ಇದೆಯೆಂದುಕೊಳ್ಳುವ ಮನುಷ್ಯರ ವಿಷಯದಲ್ಲೂ ಇಷ್ಟೇ! ಅವರೂ ಧೈರ್ಯದಿಂದ ವಿಚಿತ್ರವಾದ ಆಲೋಚನೆಯಿಂದ ಮುಂದಕ್ಕೆ ಹೋಗುವುದಕ್ಕೆ ಪ್ರಯತ್ನಿಸುವುದಿಲ್ಲವೇ! ನಾವು ಒಂದು ಸಾರಿ ನಡೆದ ತಪ್ಪನ್ನು ಮತ್ತೊಂದು ಸಾರಿ ನಡೆಯದ ಜಗತ್ತಿನಲ್ಲಿ ನಿಜವಾಗಿ ಬದುಕುತ್ತಿದ್ದರೆ ಸರ್ಕಾರ ಜನರನ್ನು ಕಾರಾಗೃಹದಲ್ಲಿಟ್ಟು ಊಟ ಹಾಕುವುದಕ್ಕೆ ಲಕ್ಷಾಂತರ ಹಣ ಖರ್ಚು ಮಾಡುವ ಅಗತ್ಯ ಬರುತ್ತಿರಲಿಲ್ಲ.

ಇಷ್ಟು ದೊಡ್ಡ ದರೋಡೆಕೋರರು ನೀವು! ಮಿಂಚನ್ನು ಕೂಡ ನಿಮ್ಮ ಮುಷ್ಟಿಯಿಂದ ಜಾರಿ ಹೋಗಲು ನೀವು ಬಿಡುವುದಿಲ್ಲ. ಬೇರೆಯವರ ಹೆಂಡತಿಯನ್ನು ಅಪಹರಿಸಿಕೊಂಡು ಹೋಗುವುದು ನಿಮಗೆ ಒಂದು ದೊಡ್ಡ ಲೆಕ್ಕವೇ? ಎರಡು ಕೈ ಸೇರಿದರೆ ಮಾತ್ರ ಚಪ್ಪಾಳೆಯಾಗುತ್ತದೆ ಎಂದುಕೊಳ್ಳಿರಿ. ಆದರೂ ಬಲಗೈಯೇ ಬಲವಾದದ್ದಲ್ಲವೇ!

ಕೆಲವು ಮಂದಿ ಶ್ರೀಮಂತರು ತಮ್ಮ ಹೆಣ್ಣುಮಕ್ಕಳ ಮೇಲೆ ಮಮಕಾರದ ಕಾರಣದಿಂದ ಬಡ ಕುಟುಂಬಗಳಿಂದ ಬಂದ ಹುಡುಗರಿಗೆ ಕೊಟ್ಟು ಮದುವೆ ಮಾಡುತ್ತಾರೆ. ಆ ಜೋಡಿಯನ್ನು ತಮ್ಮ ಮನೆಯಲ್ಲೇ ಇಟ್ಟುಕೊಳ್ಳುವ ಉದ್ದೇಶದಿಂದ. ಇಬ್ಬರೂ ಮುಗ್ಧರಾಗಿ ಏನೂ ತಿಳಿಯದಂತೆ ಇರುವಷ್ಟೂ ಕಾಲ ಎಲ್ಲವೂ ಚೆನ್ನಾಗಿಯೇ ನಡೆದು ಹೋಗುತ್ತವೆ. ಆದರೆ ಕೆಲವು ವರ್ಷಗಳ ನಂತರ ಆಕೆಗೆ ಸ್ವಲ್ಪ ಅನುಭವ ಆಗುತ್ತದೆ. ಆಕೆ ದೊಡ್ಡ ಮನೆತನದ ಮಗಳು, ಸಕಲ ಸೌಭಾಗ್ಯಕ್ಕೆ ಅಭ್ಯಾಸವಾದ ಜೀವ ಆಕೆಯದು. ಚುರುಕುತನ, ತಿಳಿವಳಿಕೆಯುಳ್ಳವಳು. ಆಕೆಯ ಗಂಡನೇನೋ ತನ್ನ ಬದುಕನ್ನು ದುರದೃಷ್ಟನಂತೆಯೇ ಕಳೆದಿದ್ದಾನೆ ಅಲ್ಲಿಯವರೆಗೆ! ಅವನ ತಂದೆಗೆ ಚುರುಕುತನವೇನೆಂದು, ಸೌಖ್ಯವೆಂದರೆ ಏನೆಂದು ಗೊತ್ತಿಲ್ಲ. ಆ ಹುಡುಗನಾದರೆ ಸಹಜವಾದ ತಿಳಿವಳಿಕೆಯಿಂದ ಯಾವುದೋ ಕೆಲವು ವಿಷಯಗಳನ್ನು ನೋಡಿ ಕಲಿತುಕೊಳ್ಳುತ್ತಾನೆ. ಆದರೆ ಆ ತಂದೆಗೆ ಹೇಗೆ ತಿಳಿಯಬೇಕು ಆ ಶ್ರೀಮಂತರ ಬದುಕಿನ ರೀತಿ ನೀತಿಗಳಿಗೆ ಹೇಗೆ ಹೊಂದಿಕೊಳ್ಳಬೇಕೆಂದು? ಅವನು ಹುಟ್ಟಿನಿಂದಲೇ ಬಡವ. ಜೀವನದಲ್ಲಿ ಹೊಟ್ಟೆಗಷ್ಟು ಶುಚಿಯಾದ ಊಟವನ್ನು ಕೂಡ ಎಂದೂ ಪಡೆಯದವನು. ನೀವೊಂದು ಮಾಮೂಲು ಕತ್ತೆಯನ್ನು ಹಿಡಿದುಕೊಂಡು ದಿನಕ್ಕೆರಡು ಸಾರಿ ಅದರ ಬೆನ್ನು ಉಜ್ಜಿ, ಮಂಕರಿಗಟ್ಟಲೆ ಹುಲ್ಲು ಹಾಕಿ, ಅದರ ಬೆನ್ನ ಮೇಲೆ ಬಂಗಾರ, ಬೆಳ್ಳಿಯ

ಜರಿಯಿಂದ ಕೂಡಿದ ಹೂಗಳನ್ನು ಹೊಲಿದ ವಸ್ತ್ರಗಳನ್ನು ಹಾಕಿ, ಗರಿಯ ಟೋಪಿ, ಅದಕ್ಕೊಂದು ಬೆಳ್ಳಿ ಜರಿಯ ಕುಚ್ಚು ಕಟ್ಟಬಹುದು. ಅವೆಲ್ಲ ಹಾಕಿದ ನಂತರ ಕೂಡ ಅದು ಒಂದು ಸೊರಗಿ ಸಣ್ಣಗಾಗಿ ಸಾಯಲು ಸಿದ್ಧವಾಗಿರುವ ಮುದಿ ಕುದುರೆಯ ಪಕ್ಕದಲ್ಲಾದರೂ ಹೆಮ್ಮೆಯಿಂದ ನಿಲ್ಲಬಲ್ಲುದೇ! ಇನ್ನೇನು ಆಕೆ ಅವನೆಂದರೆ ಅಸಹ್ಯಪಟ್ಟುಕೊಳ್ಳುತ್ತಾಳೆ- ಅದು ಎಂತಹುದೆಂದರೆ ಹಳೆಯ ಕೊಳೆಯ ದುಪಟಿ ಚೂರನ್ನು ಹೊಸದಾದ ಉಣ್ಣೆಯ ಶಾಲುವಿನ ಮೇಲೆ ಅಂಟಿಸಿ ಹೊಲಿದಿರುವಂತಹುದು. ಅನಂತರ ನಡೆಯುವುದು ಎಲ್ಲರೂ ಆಶಿಸುವುದೇ. ಅವೆಲ್ಲವನ್ನು ನಾನಿಲ್ಲಿ ಹೇಳಬೇಕಾಗಿಲ್ಲ. ಜನರು ಇದರ ಬಗ್ಗೆ ನಿತ್ಯ ನಗೆಪಾಟಲು, ಅವಮಾನಗಳಿಗೆ ಒಳಗಾಗುವುದನ್ನು ನಾವು ದಿನವೂ ನೋಡುತ್ತಿದ್ದೇವಲ್ಲವೇ! ಒಬ್ಬ ತಂದೆ ತನ್ನ ಪ್ರೀತಿಯನ್ನು ಮಗಳಿಗೆ ಜೀವನಾದ್ಯಂತ ಕೆಲಸಕ್ಕೆ ಬರುವಂತೆ ಮಾಡಲಾರನೇ? ಆ ತಂದೆ ಮೊದಲಿಗೇ ಆಕೆಗೆ ಅನುಕೂಲವಂತನಾದ ಗಂಡನನ್ನು ನೋಡಿ ಮದುವೆ ಮಾಡಬಲ್ಲನಾದರೆ ಅವರಿಬ್ಬರೂ ಸುಖಸಂತೋಷಗಳಿಂದ ಬಾಳುವುದನ್ನು ನೋಡಿ ತಾನೂ ಅಪಾರ ಆನಂದವನ್ನು ಹೊಂದುತ್ತಿದ್ದನಲ್ಲವೇ!

ನಿಮಗೆ ಒಬ್ಬ ಹಳ್ಳಿಗುಗ್ಗು, ಕುರೂಪಿ, ಕೊಳಕಾಗಿ ಇರುತ್ತ, ಜಗಳವಾಡುತ್ತ ಯಾವಾಗಲೂ ತನ್ನ ನೀಚ ಸ್ವಭಾವವನ್ನು ಹೊರಹಾಕುತ್ತ ಇರುವ ಹೆಂಡತಿಯೊಂದಿಗೆ ಇರಲು ಇಷ್ಟವಿರುತ್ತದಾ? ಹೆಂಡತಿಯೊಬ್ಬಳು ಮಾತ್ರವೇ ಅಂತಹ ಪರಿಸ್ಥಿತಿಯನ್ನು ಯಾಕೆ ಇಷ್ಟ ಪಡುತ್ತಾಳೆ ಮತ್ತೆ? ನಿಮಗೆ ಒಳ್ಳೆಯ ಹೆಂಡತಿ ಬೇಕೆಂಬ ಆಸೆಯಿರುವಂತೆಯೇ ಆಕೆಗೂ ಒಳ್ಳೆಯ ಗಂಡ ಬೇಕೆಂದು ಇರುವುದಿಲ್ಲವೇ? ನಿಮ್ಮ ಚಿಕ್ಕಂದಿನಲ್ಲಿ ನಿಮ್ಮ ತಾಯಿ ತಂದೆಯರು ಭಿಕ್ಷೆ ಬೇಡಿ ತಿನ್ನುವಷ್ಟು ಬಡವರಾಗಿರಬಹುದು, ಆದರೆ ನಿಮ್ಮ ಮದುವೆಯ ವಿಷಯದಲ್ಲಿ ಅವರು ಬಹಳ ಶ್ರದ್ಧೆ ತೆಗೆದುಕೊಂಡಿರಬಹುದು. ಅವರು ಬೇರೆಯವರಿಂದ ಹಣ ತಂದು ಸಾಲಗಾರರಾಗಿ, ಬಹಳ ಕಷ್ಟಪಟ್ಟು ನಿಮ್ಮ ಮದುವೆ ಕುದುರಿಸಿರಬಹುದು. ಆ ಸಮಯದಲ್ಲಿ ನಿಮಗೆ ಒಳ್ಳೆಯ ಅಂದಗಾತಿ ಸಿಕ್ಕುವ ಅವಕಾಶವೇ ಇಲ್ಲದಿರಬಹುದು. ನಿಮಗೆ ದೃಷ್ಟಿಬೊಂಬೆಯಂತಹ ಹುಡುಗಿ ಸಿಕ್ಕಿರಬಹುದು. ನೀವು ಆಕೆಯನ್ನೇ ದೇವಕನ್ಯೆ ಎಂದುಕೊಂಡಿರಬಹುದು. ಓದಿನಲ್ಲಿ ಮುಂದಕ್ಕೆ ಬಂದು, ಉದ್ಯೋಗದಲ್ಲಿ ಕೊಂಚ ಮೇಲಕ್ಕೆ ಏರುತ್ತಲೇ ನಿಮ್ಮ ಮೊದಲ ಹೆಂಡತಿಯನ್ನು ನೋಡಿದರೆ ನಿಮಗೆ ಅವಮಾನಕರವೆಂದು ಅನಿಸಬಹುದು. ಹಣ ನಿಮ್ಮ ಮೇಲೆ ಪ್ರಭಾವ ಬೀರಲು ಆರಂಭಿಸಿದ ಕೂಡಲೇ, ಹೆಂಡತಿ ಎಂದರೆ ಇಷ್ಟೇ ಬಿಡು ಎಂದು ನಿಮಗೆ ಅನಿಸಲೂಬಹುದು. ಹೆಂಗಸರಿಗೆ ಪ್ರತಿ ತಿಂಗಳೂ ಕೊಂಚ ಹಣ ಕೊಟ್ಟು ಉಳಿದ ಕೆಲಸಗಾರರಂತೆಯೇ ಅಡಿಗೆ ಮಾಡಿಕೊಳ್ಳುವುದಕ್ಕೆ, ಮನೆ ನೋಡಿಕೊಳ್ಳುವುದಕ್ಕೆ ಮನೆಯಲ್ಲಿ ಇಟ್ಟುಕೊಳ್ಳುತ್ತೇವಲ್ಲವೇ! ಆಕೆಯನ್ನು ನೋಡಿದರೆ ನಿಮಗೀಗ ಒಂದು ಸಾವಿರವೋ, ಸಾವಿರದ ಎರಡು ನೂರಕ್ಕೋ ಕೊಂಡುಕೊಂಡು ನೀವು ಸ್ವಂತ ಮಾಡಿಕೊಂಡ ಹೆಣ್ಣಾಳಿನಂತೆ ಅನಿಸಬಹುದು. ನಿಮಗೆ ಇಷ್ಟವಾದ ನಾಯಿಯನ್ನೋ, ಕುದುರೆಯನ್ನೋ ನೀವೆಂದಾದರೂ ನಿಮ್ಮ ಹೆಂಡತಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತೀರಿ. ನಿಮ್ಮ ಕುದುರೆಗಳಲ್ಲಿ ಒಂದು ಸತ್ತು ಹೋದರೆ,

ಇನ್ನೊಂದು ಕುದುರೆಯನ್ನು ತಂದುಕೊಳ್ಳುವುದಕ್ಕೆ ಕೂಡ ಅಷ್ಟೇನೂ ಕಷ್ಟಪಡಬೇಕಾಗಿಲ್ಲ. ಒಬ್ಬರು ಹೋದರೆ ಇನ್ನೊಬ್ಬರು ಬರುತ್ತಾರೆ. ಅದೇ ಬಡವನಾದರೆ ಹೆಂಡತಿಯನ್ನು ಸ್ವಲ್ಪ ವಾದರೂ ನೋಡಿಕೊಳ್ಳುತ್ತಾನೆ. ಏಕೆಂದರೆ ಒಬ್ಬಳು ಹೋದರೆ ಇನ್ನೊಬ್ಬಳನ್ನು ತಂದು ಕೊಳ್ಳುವುದು ಅವನಿಗೆ ಕಷ್ಟವಲ್ಲವೇ! ಆದರೆ ಶ್ರೀಮಂತರು ಅದನ್ನು ಕೂಡ ಮಾಡುವುದಿಲ್ಲ. ಅವರಿಗೆ ಅವಕಾಶ ಸಿಕ್ಕಿದರೆ ವಾರ ಹೊಸಬಳನ್ನು ಮದುವೆಯಾಗುವುದಕ್ಕೆ ತಯಾರಾಗಿರುತ್ತಾರೆ. ಅಲ್ಲದಿದ್ದರೆ ಯಮನಿಗೆ ಹೆಂಡತಿಯರನ್ನು ಆದಷ್ಟು ಬೇಗ ಕರೆದುಕೊಂಡು ಹೋಗುವುದಕ್ಕೆ ಬಿಡುವು ಕಡಿಮೆ. ಇಲ್ಲದಿದ್ದರೆ ಹೋದರೆ ಒಂದೇ ದಿನದಲ್ಲಿ ನೀವು ಕೆಲವು ಮಂದಿ ಹೆಂಡತಿ ಯರನ್ನು ಒಬ್ಬರ ನಂತರ ಒಬ್ಬರನ್ನು ಮದುವೆಯಾಗಬಲ್ಲಿರಿ. ಅವೆಲ್ಲವನ್ನು ಬಿಟ್ಟು ಬಿಡಿ, ಆದರೆ ಆಕೆ ನಿಮ್ಮ ಹೆಂಡತಿ ಎಂದು ಹೇಳಿಕೊಳ್ಳುವುದಕ್ಕೂ ನಿಮಗೆ ಧ್ವನಿ ಹೊರಡದು. ಇದಕ್ಕೂ ಮುನ್ನ ನಿಮ್ಮ ಜೊತೆ ಮಾತಾಡುವಾಗ ಯಾರೂ ಮರ್ಯಾದೆಯಿಂದ ಮಾತಾಡು ತ್ತಿರಲಿಲ್ಲ. ಈಗೇನೋ ಎಲ್ಲರೂ ನಿಮ್ಮನ್ನು ನಿಮ್ಮ ಅಧಿಕಾರ, ಹಣ ನೋಡಿ ಅಪ್ಪಾ ಸಾಹೇಬ್ ಅವರು, ಬಾಬಾಸಾಹೇಬ್ ಅವರು ಎನ್ನುತ್ತಿದ್ದಾರೆ. ಇನ್ನೇನು ನಿಮಗೆ ಬ್ರಹ್ಮಾಂಡ ವಾದ ಆಲೋಚನೆ - ನಿಮಗೆ ಅಂತಸ್ತಿಗೆ ತಕ್ಕ ಹೆಂಡತಿ ಬೇಕೆನಿಸುತ್ತದೆ. ನೀವು ನಿಮ್ಮ ಮದುವೆ ದಿನಕ್ಕಾಗಿ ಅಸಹನೆಯಿಂದ ಎದುರು ನೋಡಲು ಆರಂಭಿಸುತ್ತೀರಿ. ಯಾವ ಹೆಂಡತಿ ಯಾದರೂ ಗಂಡನನ್ನು ಹೀಗೆ ನೋಡಬಲ್ಲಳೇ? ಒಳ್ಳೆಯ ದಿನಗಳಲ್ಲೋ, ಕೆಟ್ಟ ದಿನಗಳಲ್ಲೋ ನಿಮ್ಮ ಮಾತನ್ನು ಚಾಚೂ ತಪ್ಪದಂತೆ ಪಾಲಿಸಿ, ನಿಮ್ಮನ್ನು ಸಂತೋಷಪಡಿಸಬೇಕೆಂದು ಅಂದುಕೊಳ್ಳುವುದಿಲ್ಲವೇ! ಹೆಂಡತಿ ಎಂದಾದರೂ "ಅವನಿಗೆ ಹಣವಿಲ್ಲ, ಕುರೂಪಿ ಯಾಗಿದ್ದಾನೆ, ಇನ್ನಾರ ಜೊತೆಗಾದರೂ ನಾನು ಹೊರಟುಹೋಗುತ್ತೇನೆ ಎಂದು ಕೊಳ್ಳುತ್ತಾಳೆಯೇ? ಯಾರ ಪಾಪಗಳು ನೀಚವಾದುವು, ಮಹಿಳೆಯರದಾ? ಪುರುಷರದಾ?

ಇನ್ನು ಆರನೆಯ ಅಂಶಕ್ಕೆ ಬರೋಣ. ನಮ್ಮಲ್ಲಿ ನಿಜವಾಗಿ ಯಾರು ನೂರಾರು ಬಾರಿ ಮೋಸಗಳಲ್ಲಿ ಮುಳುಗಿ ತೇಲುತ್ತಿದ್ದೇವೆ? ನೀವೇ ಇದರಲ್ಲಿ ಮೊದಲನೆಯವರು. ಪ್ರತಿ ಹೆಜ್ಜೆಯಲ್ಲೂ ನಮಗೊಂದು ಉದಾಹರಣೆ ಕಾಣಿಸುತ್ತದೆ. ನೀವು ಹಾಕುವ ವೇಷಗಳನ್ನೆಲ್ಲ ನೋಡಿರಿ, ನೀವು ಶರೀರದ ಮೇಲೆ ಕಪ್ಪು, ಹಳದಿ ಬಣ್ಣಗಳ ಪಟ್ಟೆಗಳನ್ನು ಹಾಕಿಕೊಂಡು ಹುಲಿಯಾಗಿ ಬದಲಾಗಬಲ್ಲಿರಿ? ನೀವು ಗೋಸಾಯಿಗಳಾಗಿ ಹೋಗುತ್ತೀರಿ. ಫಕೀರರು, ಹರಿದಾಸರು, ಬ್ರಹ್ಮಚಾರಿಗಳು, ಸಾಧುಗಳು, ದುಧಾಹರರು, ಗಿರುಪುರಗಳು, ಭಾರತಿಗಳು, ನಾನಕರು, ಕಾನ್‌ಫೂಟೇಗಳು, ಜೋಗಿಗಳು, ಜಡೆಧಾರಿಗಳು, ನಗ್ನಮುನಿಗಳ ವೇಷ ಹಾಕಿ ಲೋಕವನ್ನು ಬಿಟ್ಟು ಬಿಟ್ಟಂತೆ ಕಾಣಿಸಿ, ಶರೀರಕ್ಕೆ ಬೂದಿಯನ್ನು ಬಳಿದುಕೊಂಡು, ಜುಟ್ಟನ್ನು ಜಡೆ ಕಟ್ಟುವಂತೆ ಬೆಳೆಸಿಕೊಂಡು, ಅರಣ್ಯದಲ್ಲಿ ಜೀವಿಸುವುದಕ್ಕೆ ಹೊರಟು ಹೋಗಿ ಲೋಕವನ್ನೆಲ್ಲ ಮೋಸಗೊಳಿಸುತ್ತೀರಿ. ಅವರು ಯಾರೆಂದರೆ ಒಬ್ಬರು ರಾಮಗಿರಿಬುವಾ, ಮತ್ತೊಬ್ಬರು ಶಾಸ್ತ್ರಿಬುವಾ, ಇನ್ನೊಬ್ಬರು ಗಣಪತಿ ಬುವಾ ಫಲ್ ಟಂಕರ್ ಹೆಸರಿನಿಂದ ದೊಡ್ಡ ಸಾಧುವಾಗಿ ಚಲಾವಣೆ ಆದರೆ ಇನ್ನೊಬ್ಬರು ನಾನಕಪತಿ ಆಗುತ್ತಾರೆ. ಏನು

ಗುಣಗಳಿವೆಯೋ ಅವರೆಲ್ಲರಲ್ಲಿ! ನಾವೇನು ಹೇಳಬಲ್ಲೆವು? ಅವರಿಗೆ ಅಗತ್ಯವಾದ ಸದ್ಗುಣಗಳಿವೆ. ಅವರು ಸ್ವಲ್ಪ ನಿರ್ಮೋಹತ್ವ ಸಾಧಿಸಿದ್ದಾರೆ, ಅವರು ಪವಿತ್ರವಾದ ಕೆಲವು ಮಂತ್ರಗಳನ್ನು ಓದುತ್ತ ಇರುತ್ತಾರೆ. ಅವರು ನಮಗೇನಾದರೂ ಹೇಳಿದರೆ ಸಾಕು ನಾವು ನಂಬುತ್ತಿರುತ್ತೇವೆ. ಇನ್ನು ನಮ್ಮ ಸ್ವಾಮಿಗೆ ಹೆಸರು ಕೀರ್ತಿ ಬಂದ ಕೂಡಲೇ, ಅವನಿಗೆ ಮಧುರವಾದ ಪದಾರ್ಥಗಳನ್ನು ಜೀರ್ಣಿಸಿಕೊಳ್ಳುವ ಅಭ್ಯಾಸವಾಗುತ್ತದೆ. ಗಂಡು ಬೆಕ್ಕಿನಂತೆ ಸೊಗಸುತನ, ಸೊಕ್ಕು ಬರುತ್ತದೆ. ಇನ್ನು ಅವನು ಧರ್ಮಕಾರ್ಯಗಳ ಬಗ್ಗೆ ಮರೆತು ಹೋಗಲು ಆರಂಭಿಸುತ್ತಾನೆ. ಒಂದು ಕಡೆ ಕುಳಿತಕೊಂಡು ಹೆಂಗಸರು ದರ್ಶನ ಮಾಡಿಕೊಳ್ಳು ವುದಕ್ಕೆ ಬರುತ್ತಿದ್ದರೆ, ಆತ ಬೇರೆ ಜಪಮಾಲೆ ತಿರುವಲು ಆರಂಭಿಸುತ್ತಾನೆ. ನವಯೌವನ ದಲ್ಲಿರುವ ಹುಡುಗಿಯರನ್ನು ನೋಡುತ್ತ ಕುಳಿತು ಈಕೆ ಸುಂದರಿ, ಆಕೆ ಅಂದಗಾತಿ ಎನ್ನುತ್ತ ಧ್ಯಾನ ಮಾಡುತ್ತ ಜಪಮಾಲೆ ತಿರುವುತ್ತಿರುತ್ತಾನೆ. ಇನ್ನು ಶಿವನೂ ಇಲ್ಲ ಹರಿಯೂ ಇಲ್ಲ, ಎಲ್ಲರನ್ನು ಮರೆತು ಹೋಗುತ್ತಾನೆ. ಇನ್ನು ಅವನ ತುಟಿಗಳ ಮೇಲೆ ತುಳುಕಾಡುವುದು ಗೋಪಿಕೆ ರಾಧಳಂತಿರುವ ಆ ಅಂದವಾದ ಯುವತಿಯರ ಹೆಸರು ಮಾತ್ರವೇ. ಅವನ ಕಣ್ಣಿಗೀಗ ಕಾಣಿಸುವುದು ಆ ಮುಗ್ಧ ಸುಂದರ ನಗುಮುಖ ಮಾತ್ರವೇ. ಒಳಗೊಳಗೆ ಧ್ಯಾನ ಮಾಡುವುದು ಹಣ ಕುರಿತೇ. ನೋಡುವುದಕ್ಕೆ ಮಾತ್ರ ಮೇಲ್ನೋಟಕ್ಕೆ ಅವನು ಹುಚ್ಚನಂತೆ ಕಾಣಿಸಿದರೂ ಅದು ಗುಳ್ಳೇನರಿಗಿರುವ ಹುಚ್ಚು.

ಹೀಗೆ ಬರುವುದು ಯಾರೋ! ಅವನು ಕಾಶಿಯಿಂದ ಬರುತ್ತಿರುವ ಬ್ರಹ್ಮಚಾರಿ. ಆ ಸ್ವಾಮಿ ಎಷ್ಟು ರಾಜನ ಲಕ್ಷಣಗಳಿಂದ ಕೂಡಿದ್ದಾನೆಂದರೆ ಅವನನ್ನು ನೋಡುತ್ತಿದ್ದರೆ ಸಾಕ್ಷಾತ್ ದೇವರೇ ಇಳಿದು ಬಂದು ನಮ್ಮ ಕಣ್ಣ ಮುಂದೆ ಮಂದಸ್ಮಿತನಾಗಿ ನಿಂತಂತೆ ಭಾವನೆ ಬರುತ್ತದೆ. ಒಂದು ಸಾರಿ ಅವನ ಹಿಂದಿರುವ ವಸ್ತುಗಳನ್ನು ನೋಡಿರಿ - ಒಂದು ಪಲ್ಲಕ್ಕಿ, ಒಂದು ಬಂಡಿ, ಒಂದು ಡಜನ್ ಮಿಂಚಿನಂತಹ ಕುದುರೆಗಳು, ಚುರುಕಾಗಿರುವ ಹತ್ತು ಹನ್ನೆರಡು ಮಂದಿ ಶಿಷ್ಯರು, ಕುದುರೆಯಂತೆ ಹೊಳೆಯುತ್ತಿರುವ ಹುಡುಗರು. ಒಬ್ಬನೇನೋ ಗಂಗಾದಾಸನೆನ್ನುತ್ತಾನೆ, ಎರಡನೆಯವನೇನೋ ತಾನು ರಾಮಪ್ರಸಾದನೆನ್ನುತ್ತಾನೆ. ಗಂಗಾ ದಾಸನಿಗೆ ಗುರುವಿನ ಭಜನೆ ಹೇಗೆ ಮಾಡಬೇಕೆಂದು ಯಾರೂ ಹೇಳಬೇಕಾಗಿಲ್ಲ. ನಮ್ಮ ಮಹಾರಾಜನಿಗೆ ನಿಜವಾಗಿ ದಿನಗಳ ಹಿಂದೆ ಭಗವಂತನ ಸಾಕ್ಷಾತ್ಕಾರವಾಗಿದೆ. ಉಜಡ್ ಗ್ರಾಮದ ಹಿರಿಯನಿಗೆ ಒಂದೇ ಒಂದು ಸಂತಾನವೂ ಇಲ್ಲ. ಅವನಿಗೆ ನಮ್ಮ ಸ್ವಾಮಿ ಪ್ರಸಾದ ಕೊಟ್ಟ ಕೂಡಲೇ ಒಬ್ಬ ಮಗ ಹುಟ್ಟಿದ. ಆ ಬಾಲಕ ಎಲ್ಲರಂತವನಲ್ಲ. ಕಾಯಿಲೆ ಕಸಾಲೆಗಳಿಂದ ದುಃಖಪಡುತ್ತಿರುವವರು, ದೆವ್ವಗಳಿಂದ ಪೀಡಿತರಾದವರು ಎಷ್ಟೋ ಜನರು ಅವನ ದರ್ಶನ ಮಾಡಿಕೊಂಡರೆ ಸಾಕು ಅವೆಲ್ಲ ಮಾಯವಾಗುತ್ತವೆ. ಅವನೇ ಶಿವನ ಅವತಾರ. ಒಂದು ಸಾರಿ ಒಬ್ಬ ವ್ಯಕ್ತಿ ಇಂತಹ ಮಾತುಗಳು ಆಡಿದ ನಂತರ ಲೋಕಕ್ಕೆ ಆ ಮಾತುಗಳನ್ನು ಹರಡಲು ಪಾಠಗಳ ಅಗತ್ಯವಿಲ್ಲವಲ್ಲವೇ! ಮುಂದೆ ಒಂದು ನೊಣದ ಬಗ್ಗೆ, ನಂತರ ಕಾಗೆ ಬಗ್ಗೆ ಅವರು ಹಾಗೆ ಮಾತಾಡಿಕೊಳ್ಳುತ್ತ ಹೋಗುತ್ತಲೇ ಇದ್ದಾರೆ.

ಇನ್ನೇನು ನಮ್ಮ ಸ್ವಾಮಿ ಹೊರಗೆ ಹಂಗು ಆಡಂಬರಗಳಿಂದ ಮೆರೆಯುತ್ತ ಇರುತ್ತಾನೆ. ಒಂದು ಸಾರಿ ಒಳಕ್ಕೆ ಯಾರಾದರೂ ಇಣುಕಿ ನೋಡಿದರೋ ಅಲ್ಲಿ ದೀವಿಗೆಯಂತೆ ಬೆಳಗುತ್ತ ಕಾಣಿಸುವುವು ಎರಡು ಬಯಕೆಗಳು ಮಾತ್ರವೇ - ಒಂದು ಸ್ತ್ರೀಯರು, ಇನ್ನೊಂದು ಐಶ್ವರ್ಯ.

ಹೌದು ನಿಜವೇ! ಕೊರಳ ಸುತ್ತಲೂ ತುಳಸಿ ಮಾಲೆ ಹಾಕಿಕೊಳ್ಳುತ್ತಾರೆ, ವಿಠಲನ ಗುಣಗಳನ್ನು ಹಾಡುತ್ತ, ಹರಿದಾಸರಂತೆ ಮೇಲಕ್ಕೆ ಕಾಣಿಸುತ್ತ, ಹೆಸರು ಪಡೆದ ಭಿಕ್ಷುಕರಂತೆ ತಿರುಗುತ್ತ ಕಾಶಿಗೆ ಹೊರಟು ಹೋಗುತ್ತಾರೆ. ಆದರೆ ನೀವು ಪ್ರಾಯಶ್ಚಿತ್ತದಿಂದ ಅಲ್ಲಿಗೆ ಹೋಗಿ ಗಡ್ಡ, ಮೀಸೆ ತೆಗೆದು ಹಾಕಿದ ಮಾತ್ರಕ್ಕೆ ಎಲ್ಲ ಪಾಪಗಳೂ ತೊಳೆದುಕೊಳ್ಳಬಲ್ಲೆವೆಂದು ಕೊಳ್ಳುವಿರಾ? ಅದು ನಡೆಯುವ ಕೆಲಸ ಅಲ್ಲ. ಮೇಲಾಗಿ ನೀವು ಹೆಮ್ಮೆಯನ್ನು, ಮತ್ತಷ್ಟು ಕೆಟ್ಟ ಬಯಕೆಗಳನ್ನು ಹೊಂದಿಸಿಕೊಳ್ಳುತ್ತೀರಿ. ಹೊರಗೆ ನೋಡುವುದಕ್ಕೆ ಮಾತ್ರ ಬಹಳ ಪವಿತ್ರವಾದವರಂತೆ ಕಾಣಿಸುತ್ತೀರಿ. ಆದರೆ ಗಂಗಾ ಜಲವಾದರೂ ನಿಮ್ಮಲ್ಲಿ ಉರಿಯುವ ಮೋಸದ ದೀವಿಗೆಯನ್ನು ತಣ್ಣಗಾಗಿಸಬಲ್ಲುದೇ?

ಆದ್ದರಿಂದ ನೀವು ಸನ್ಯಾಸವನ್ನು ಸ್ವೀಕರಿಸಿದ್ದೀರಲ್ಲವೇ? ಮತ್ತೆ ಆಸೆಗಳನ್ನು, ಬಯಕೆ ಗಳನ್ನು ಜಯಿಸಬೇಕಲ್ಲವೇ! ನೀವು ನಿಮ್ಮ ಕೌಪೀನ ವಸ್ತ್ರಗಳಿಂದ, ಕೋಲು, ಕೈಯಲ್ಲಿ ಗಿಂಡಿ ಹಿಡಿದು ಸಿದ್ಧರಾಗಿ ಪ್ರಪಂಚವೆಲ್ಲವನ್ನು ಅದರಲ್ಲಿ ಜೀವಗಳನ್ನು ಶ್ರೀಮನ್ನಾರಾಯಣ ನೊಂದಿಗೆ ಸಮಾನವಾಗಿ ಪ್ರೀತಿಸುತ್ತ, ಗೌರವಿಸುತ್ತ ಇದ್ದೀರಲ್ಲ! ಆದರೆ ನೀವು ಗಂಗಾನದಿ ದಡದಲ್ಲಿ ಅಂದವಾದ ಕಲ್ಲಿನ ಮೆಟ್ಟಿಲ ಮೇಲೆ ಸ್ನಾನ ಮಾಡಿ ಶುದ್ಧಿ ಮಾಡಿಕೊಳ್ಳುವಾಗ ವಿಭೂತಿಯನ್ನು ನಿಮ್ಮ ಶರೀರಕ್ಕೆ ಬಳಿದುಕೊಳ್ಳುವಾಗ, ಅಲ್ಲಿ ಕುಳಿತುಕೊಂಡು ಪರಮಾತ್ಮ ಶೇಷಶಾಯಿ, ಶ್ರೀಮನ್ನಾರಾಯಣ ಎಂಬ ನಾಮ ಜಪಿಸುವಾಗ, ಒಂದು ಕೈಗೆ ಗೋಮುಖ ತಗಿಲಿಸಿಕೊಂಡು ಜಪಮಾಲೆ ತಿರುಗಿಸುವಾಗ ಏನಾಗುತ್ತದೇ ನೋಡಿರಿ! ನಿಮ್ಮ ಕಿವಿಗಳಿಗೆ ನದಿ ದಡದಲ್ಲಿ ಮೊಟ್ಟ ಮೊದಲು ಮೆಟ್ಟಿಲ ಮೇಲೆ ಹೆಜ್ಜೆಯ ಸದ್ದು ಕೇಳಿದ ಕೂಡಲೇ, ನಿಮ್ಮ ಕಣ್ಣು ಚುರುಕಾಗಿ ಅಲುಗಾಡುತ್ತವೆ, ಕೈಯಲ್ಲಿನ ಗೋಮುಖ ಬಿದ್ದು ಹೋಗುತ್ತದೆ, ನಮ್ಮ ಸ್ವಾಮೀಜಿಯಲ್ಲಿ ಗೊಂದಲ, ಕಸಿವಿಸಿ ಆರಂಭವಾಗುತ್ತದೆ, ನಾರಾಯಣನು ಅವನ ಬಾಯಿಂದ ಹಿಂದಕ್ಕೆ ತಿರುಗಿ ನೋಡದಂತೆ ಓಡಿ ಹೋಗುತ್ತಾನೆ. ಈಗ ಬರುವ ನಾರಾಯಣನು ಎಂತಹವನೋ? ಸ್ತ್ರೀ ರೂಪದಲ್ಲಿ ಬರುವ ನಾರಾಯಣ, ಈಗ ಆಕೆ ಹೋಗಿ ನಮ್ಮ ಸ್ವಾಮಿ ಗೋಮುಖದಲ್ಲಿ ಕುಳಿತುಕೊಳ್ಳುತ್ತಾಳೆ. ಹೊರಗೇನೋ ಕಾಷಾಯ ವಸ್ತ್ರಗಳಲ್ಲಿ ಅಲೆಯುತ್ತಿ ರುತ್ತಾರೆ, ಒಳಗೊಳಗೆ ಕೊಳೆತು ಹೋಗುವಷ್ಟು ಕೆಟ್ಟ ಆಲೋಚನೆಗಳು. ಒಳಗೇನು ನಡೆ ಯುತ್ತದೋ ನಿಜಕ್ಕೂ ಯಾರು ನೋಡುತ್ತಾರೆ? ಭಿಕ್ಷೆ ಬೇಡಿ ಪಡೆದ ಹಣವನ್ನೆಲ್ಲ ಕೂಡಿ ಸುವುದು, ಒಬ್ಬ ವೇಶ್ಯೆಯ ಬಳಿ ಓಡುವುದು - ಅದೇ ಜಗತ್ತನ್ನು ವಿಸರ್ಜಿಸುವುದು ಎಂಬುದಕ್ಕೆ ಅರ್ಥ ಇಲ್ಲಿ.

ದೇವರುಗಳೇ ಹೆಂಗಸರನ್ನು ನಾಶ ಮಾಡುತ್ತ ಇರುತ್ತವೆ. ಇನ್ನು ನಿಮ್ಮನ್ನು ನಂಬಿಕೊಂಡು ಲಾಭವಿಲ್ಲ. ಕೃಷ್ಣ ಅರ್ಜುನನ್ನು ಒಬ್ಬ ಮುನಿಯ ಮಾರು ವೇಷದಲ್ಲಿ ಸುಭದ್ರೆಯನ್ನು ಕರೆದುಕೊಂಡು ಹೋಗುವುದಕ್ಕೆ ಪ್ರೇರೇಪಿಸಿದಾಗ, ಯಾದವ ಕುಮಾರರು "ಅತ್ತೆಯನ್ನು

ಒಬ್ಬ ಮುನಿಯೇ ಕರೆಕೊಂಡು ಹೋದನೆಂದು" ಒಬ್ಬರಿಗೊಬ್ಬರು ಹೇಳಿಕೊಂಡರು. ಆದರೆ ನೀವೆಂದಾದರೂ ಒಬ್ಬ ಅತ್ತೆ ಮುನಿಯನ್ನು ಕರೆಕೊಂಡು ಹೋಗುವುದರ ಬಗ್ಗೆ ಕೇಳಿದ್ದೀರಾ? ಆ ದಿನಗಳಲ್ಲಿ ರಾವಣಾಸುರನನ್ನು ಎದುರಿಸುವ ಮನುಷ್ಯರಿಲ್ಲ - ಅವನೇನೋ ಮೂರು ಲೋಕಗಳನ್ನು ಕಂಗೆಡಿಸುತ್ತಿದ್ದಾನೆ. ಪ್ರತಿಯೊಂದು ಕಡೆ ಮನುಷ್ಯರು ದುಃಖಿಸುತ್ತ ಗೋಣಗಿಕೊಳ್ಳುತ್ತ ಇದ್ದಾರೆ. ಇಂದ್ರಪುರ ನಿರ್ಜನವಾದ ನಂತರ ದೇವತೆಗಳು, ಋಷಿಗಳು ಕ್ಷೀರಸಾಗರದಲ್ಲಿರುವ ಶೇಷಶಾಯಿ ಭಗವಾನನ ಹತ್ತಿರ ಪಾಹಿಮಾಂ ಎನ್ನುತ್ತಾ ಓಡಿ ಹೋಗಿ, "ಸ್ವಾಮಿ, ಆ ರಾಕ್ಷಸನು ನಮ್ಮನ್ನು ಹಿಂಸೆಗೊಳಿಸಿ, ತೊತ್ತುಗಳನ್ನಾಗಿ ಮಾಡಿಕೊಳ್ಳದಂತೆ ಕಾಪಾಡೆಂದು" ಮೊರೆಯಿಟ್ಟುಕೊಂಡರು. ಸರ್ವಶಕ್ತಿ ಸಂಪನ್ನನಾದ ದೇವರು ಪ್ರಪಂಚವನ್ನೆಲ್ಲ ಒಂದು ಕ್ಷಣದಲ್ಲಿ ಮೇಲಕ್ಕೆತ್ತಬಲ್ಲ, ಹಾಗೇ ನಾಶವನ್ನೂ ಮಾಡಬಲ್ಲ. ತಾನು ಬಯಸಿದರೆ, ಅಷ್ಟು ಅನಂತಶಕ್ತಿವಂತನ ಮುಂದೆ ರಾವಣಾಸುರನ ಬಲವೆಷ್ಟು? ಆದರೆ ಈ ದಿನಗಳಲ್ಲಿ ಮನುಷ್ಯರಂತೆ ಅರ್ಥ ಮಾಡಿಕೊಳ್ಳುವುದಿಲ್ಲ. ರಾವಣನು ಸೀತೆಯನ್ನೆತ್ತಿಕೊಂಡು ಹೋದ ನಾದ್ದರಿಂದ ವಾನರ ಸೈನ್ಯ ದಕ್ಷಿಣದಲ್ಲಿದ್ದ ಅವನ ರಾಜ್ಯದ ಮೇಲೆ ದಂಡೆತ್ತಿ ನಾಶ ಮಾಡಬೇಕಾಗಿ ಬಂತು. ನಿಜಕ್ಕೂ ಅದೇ ಅಲ್ಲವೇ ನಡೆದದ್ದು. ಆದರೆ ಈಗ ಜನ ಏನೆನ್ನುತ್ತಿದ್ದಾರೆ ಗೊತ್ತಾ! "ಆ ಪೂರ್ವದ ಮಾತುಗಳೇನನ್ನೂ ಗಮನಿಸಬೇಡಿರಿ, ಆ ನಯವಂಚಕಿಯೇ ರಾವಣನ ನಾಶಕ್ಕೆ ಕಾರಣವಾಗಿದ್ದಾಳೆ. ಈ ನಿಕೃಷ್ಟರಾದ ಸ್ತ್ರೀಯರು ಯಾವುದಕ್ಕಾದರೂ ಸಿದ್ಧರಾಗುತ್ತಾರೆ, ಮನೆ ರಾಜ್ಯಗಳನ್ನು ನಾಶ ಮಾಡುತ್ತ!" ಎಂದು.

ಮತ್ತೆ ನಮಗೇನು ಬಂತು ಇದರಲ್ಲಿ! ಮತ್ತೆ ಸ್ತ್ರೀಯರದೇ ತಪ್ಪೆಲ್ಲ! ಸೀತೆ ಅಗ್ನಿಪ್ರವೇಶ ಮಾಡಿದಳು. ಆದರೆ ಜನ ಆಕೆಯದೇ ತಪ್ಪು ಎನ್ನುವುದನ್ನು ಬಿಡಲಿಲ್ಲ. ಅತ್ತ ರಾಮನು ಅದರಿಂದ ಶ್ರೇಷ್ಠವಾದದ್ದೂ ಇಲ್ಲ. ಎಷ್ಟು ಅದ್ಭುತವಾದ ದೇವರಿದ್ದಾರೆ ನಿಮಗೆ? ನೀವೇನೋ ಅವರಿಗೆ ನೆರಳಿನಂತವರು? ಅವರು ಒಂದು ರೂಪದಲ್ಲಿಯೇ ಕಂಡುಬರುತ್ತಾರೆ. ನೀವು ಎರಡು ರೂಪಗಳಲ್ಲಿ ಕಂಡುಬರುತ್ತೀರಿ. ನಿಮ್ಮ ಈ ಮೋಸಗಳ ಬಗ್ಗೆ ನಾವು ಹೇಗೆ ಹೇಳಬಲ್ಲೆವು? ನಿಮ್ಮಲ್ಲಿ ಒಬ್ಬರು ಮತ್ತೊಬ್ಬರಿಗೆ ಮೇಲ್ನೋಟಕ್ಕೆ ತಮ್ಮನಂತೆ ವರ್ತಿಸುತ್ತೀರಿ. ಆದರೆ ಅಂತರಂಗದಲ್ಲಿ ಅವನಿಗೆ ಕೇಡು ನಡೆಯಬೇಕೆಂದು ಯಾವಾಗಲೂ ಬಯಸುತ್ತಲೇ ಇರುತ್ತೀರಿ. ಇನ್ನು ಕೆಲವರು ಮೇಲ್ನೋಟಕ್ಕೆ ಸ್ನೇಹಿತರಂತೆ ಕಾಣಿಸುತ್ತಿದ್ದರೂ ಅವನ ಕಣ್ಣು ಮಾತ್ರ ಆ ಸ್ನೇಹಿತನ ಹೆಂಡತಿಯಿಂದ ನಾಯಿಯವರೆಗೆ ಆಸೆಯಿಂದ ಹೊರಳುತ್ತಲೇ ಇರುತ್ತದೆ. ಒಳಗೆ ಹೊರಗೆ ಕೂಡ ಶುದ್ಧವಾಗಿರುವ ಗಂಡಸರು ಬಹಳ ಅಪರೂಪವೇ! ನೀವು ನಾಲ್ಕೈದು ಮಂದಿ ಒಂದು ಕಡೆ ಸೇರುತ್ತೀರಿ? ನಂತರ ಏನಾಗುತ್ತದೆ? "ಅಗೋ ಅವನನ್ನು ನೋಡಿರಿ, ಹಣವನ್ನು ಚೆಲ್ಲುತ್ತ ಇರುತ್ತಾನೆ ಬಡಾಯಿಗಾಗಿ. ಒಂದು ಸಾರಿ ಅವನು ಹೊಡೆತ ತಿನ್ನುವುದನ್ನು ನೋಡಬೇಕು." ಇಲ್ಲದ ಹೋದರೆ "ಇವನಿದ್ದಾನೇ, ಈ ದಿನಗಳಲ್ಲಿ ಎಷ್ಟು ಬೆಳೆದು ಬಿಟ್ಟಿದ್ದಾನೋ, ಎಷ್ಟು ಆಶ್ಚರ್ಯ. ಹಿಂದೆ ಹೊಟ್ಟೆ ತುಂಬಾ ತಿನ್ನಲು ಅನ್ನವಿಲ್ಲದವನು ಆ ಸೂಳೆ ಮಗನೀಗ ಜೋಡುಕುದುರೆ ಗಾಡಿಯಲ್ಲಿ ಸುತ್ತಾಡುತ್ತಿದ್ದಾನೆ." ಅದೇನು ಈ ಕೆಲಸ-

ನೀವು ಕಾಗೆಗಳ ಜಾತಿಯಂತವರು, ತಲೆಯಲ್ಲಿ ಯಾವಾಗಲೂ ಕುತಂತ್ರದ ಆಲೋಚನೆಗಳು, ಉಳಿದವರಲ್ಲಿ ಮೇಲ್ನೋಟಕ್ಕೆ ಕಂಡುಬಂದ ತಪ್ಪುಗಳನ್ನು ಹೊರಗೆ ಎಳೆದು ಕುಕ್ಕಿ ತಿನ್ನುವುದಕ್ಕೆ ಸಿದ್ಧವಾಗಿರುತ್ತೀರಿ. ನೀವೇ ಹೇಳಿರಿ, ಮತ್ತೆ ಮಾತಾಡಿರಿ, ಹೆಂಗಸೆಂದಾದರೂ ಈ ಕೆಲಸವನ್ನು ಮಾಡುತ್ತಾಳಾ? ಯಾವ ಮಹಿಳೆಯಾದರೂ ಒಬ್ಬ ಗೋಸಾಯಿಯಾಗಲಿ ಸಾಧುವಾಗಲಿ ವೇಷ ಹಾಕಿಕೊಂಡು ಅನಂತರ ಒಬ್ಬ ಗಂಡಸನ್ನು ಕರೆದುಕೊಂಡು ಹೊರಟು ಹೋದಳಾ ಎಂದಾದರೂ? ನಿಮಗೆ ಒಂದು ಉದಾಹರಣೆ ಕಾಣಿಸಿದರೂ ತೋರಿಸಿರಿ ಮತ್ತೆ.

ಮಹಿಳೆಯರು ಸಹಜವಾಗಿ ಆಸೆಬುರುಕರೇ ಅಲ್ಲದೆ ಅಮಾಯಕರು ಕೂಡ. ಯಾರೇನು ಹೇಳಿದರೂ ನಂಬುತ್ತಿರುತ್ತಾರೆ. ಅವರು ತಮ್ಮ ಗಂಡಂದಿರಿಂದ ಮಕ್ಕಳು, ಹಣ, ಪ್ರೀತಿಯನ್ನು ಪಡೆಯುವುದಕ್ಕೆ ಏನು ಮಾಡುತ್ತಾರೋ ಹೇಳುವುದು ಕಷ್ಟ. ಇದಕ್ಕೆ ಉದಾಹರಣೆ ಏನೆಂದರೆ ಈ ನಡುವೆ ವಾರ್ತಾ ಪತ್ರಿಕೆಯಲ್ಲಿ ಒಬ್ಬ ಸ್ತ್ರೀ ಕತೆ ಬಂದಿದೆಯಲ್ಲ! ಮಕ್ಕಳಿಲ್ಲದ ಆಕೆ ಒಬ್ಬ ಮೋಸಗಾರನಾದ ಪೂಜಾರಿ ಮಾತು ಕೇಳಿ ಒಬ್ಬ ಚಿಕ್ಕ ಹುಡುಗಿ-ನಾನೇನು ಹೇಳುತ್ತಿದ್ದೇನೆಂದು ನಿಮಗೆ ಗೊತ್ತು-ಸಂಪಾದಿಸಿ ಬೆಲ್ಲದ ಜೊತೆ ಕಲಸಿ ತಿಂದರೆ ಮಕ್ಕಳು ಹುಟ್ಟುತ್ತಾರೆಂದು ನಂಬಿದಳು. ಒಳ್ಳೆಯ ಅವಕಾಶ ನೋಡಿಕೊಂಡು ಆಕೆ ಆ ಕೆಲಸ ಮಾಡಿದಳು. ಇನ್ನೇನು ಈ ವಿಷಯ ಎಲ್ಲರಿಗೂ ಗೊತ್ತಾಗಿ ದೊಡ್ಡ ಗುಲ್ಲೆದ್ದಿತು. ಆಕೆಯ ಗಂಡನಿಗೆ ಈ ವಿಷಯ ತಿಳಿದು ದೊಣ್ಣೆಯಿಂದ ಆಕೆಯ ಬೆನ್ನು ಮೆತ್ತಗಾಗುವಂತೆ ಬಡಿದ. ಆಕೆ ಎಲ್ಲರಿಗೂ ಈ ವಿಷಯ ತಿಳಿದು ಅವಮಾನವಾಗುತ್ತದೆಂಬ ಭಯದಿಂದ ಆತ್ಮಹತ್ಯೆ ಮಾಡಿಕೊಂಡಳು.

ಒಂದು ವೇಳೆ ಆಕೆ ಶಿಕ್ಷಣ ಪಡೆದಿದ್ದರೆ ಇಂತಹ ಕುತಂತ್ರದ ಕೆಲಸಕ್ಕೆ ತೊಡಗುತ್ತಿದ್ದಳಾ? ಎಷ್ಟೋ ಬಗೆಯ ಮೋಸಗಾರರು-ಜೋಷಿಗಳು, ಕಾನ್‌ಪೂಟೆಗಳು, ಬೈರಾಗಿಗಳು, ಮಹಿಳೆಯರಿಗೆ ನೀವು ಗಂಡನ ಪ್ರೀತಿ ಪೂರ್ಣವಾಗಿ ಪಡೆಯುತ್ತೀರೆಂದು, ನಿಮ್ಮ ಗಂಡಂದಿರು ಪಾದಾಕ್ರಾಂತರಾಗುತ್ತಾರೆಂದು ನಂಬಿಸಿ ಮೋಸ ಮಾಡುತ್ತಿರುತ್ತಾರೆ. "ಶನಿವಾರ ರಾತ್ರಿ, ತುಂಬು ಹುಣ್ಣಿಮೆ ದಿನ ಮಕ್ಕಳಿರುವ ಮನೆಯ ಕಡೆ ನೋಡಿ ನೀನು ದೀಪ ಬೆಳಗಿಸಿದರೆ ಗಂಡು ಮಗು ಹುಟ್ಟುತ್ತಾನೆ," ಇಲ್ಲದೆ ಹೋದರೆ "ಒಂದು ಅಮಾವಾಸ್ಯೆ ದಿನ, ಶನಿವಾರ ರಾತ್ರಿ ತಲೆಸ್ನಾನ ಮಾಡಿ ಒಡೆದು ಹೋದ ಕೊಡವನ್ನು ನೆತ್ತಿಯ ಮೇಲಿಟ್ಟುಕೊಂಡು, ಬೆತ್ತಲೆಯಾಗಿ ಹೋಗಿ ಹನ್ನೊಂದು ಸಾರಿ ಹನುಮಂತನ ಗುಡಿಯಲ್ಲಿ ದರ್ಶನ ಮಾಡಿಕೊಂಡು ಬರಬೇಕು. "ಮಹಿಳೆಯರು ಇಂತಹ ಸುಳ್ಳು ಮಾತುಗಳನ್ನು ಕೇಳಿ ಅವುಗಳ ಮೇಲೆ ಕೂಡಲೇ ಗುರಿಯನ್ನು ಕುದುರಿಸಿಕೊಳ್ಳುತ್ತಾರೆ. ಇಂತಹ ಇಂಗಿತವಿಲ್ಲದ ಕೆಲಸಗಳನ್ನು ಅವರು ಗಂಡು ಮಕ್ಕಳನ್ನು ಪಡೆಯಲು, ಗಂಡನ ಪ್ರೀತಿಯನ್ನು ಪೂರ್ತಿಯಾಗಿ ಪಡೆಯಲು ಈ ಆಸೆಯನ್ನಿಟ್ಟುಕೊಂಡು ಮಾತ್ರವೇ ಮಾಡುತ್ತಾರೆ. ಮಹಿಳೆಯರ ಮನಸ್ಸು ಎಷ್ಟು ಸುಲಭವಾಗಿ ನಂಬುವ ಸ್ವಭಾವವನ್ನು ಹೊಂದಿರುತ್ತದೆಯೆಂದರೆ ಅವರು ಎಂತಹ ಕೆಲಸದಲ್ಲಾದರೂ, ಎಷ್ಟು ಕಷ್ಟವಾದರೂ ಅವುಗಳಲ್ಲಿ ಕೂಡಲೇ ಇಳಿದುಬಿಡುತ್ತಾರೆ. ಇದನ್ನು ಗಮನಿಸಿಯೇ ಅವರೆಷ್ಟು ಮೂರ್ಖರು, ಅಜ್ಞಾನಿಗಳೆಂದು ತಿಳಿದುಹೋಗುತ್ತದೆ. ಅವರು ಕೂಡ ನಿಮ್ಮಷ್ಟು ಚುರುಕಾದವರು,

ತಿಳಿವಳಿಕೆಯುಳ್ಳವರಾದರೆ ಅವರು ಕೂಡ ನಿಮ್ಮಂತೆ ಸೌಲಭ್ಯಗಳನ್ನು, ಸೌಕರ್ಯಗಳನ್ನು ಅನುಭವಿಸುತ್ತ ಇಂತಹ ಕೆಲಸಗಳನ್ನು ಮಾಡುತ್ತಿದ್ದರೆ, ನೀವು ಅವರ ಮೇಲೆ ತಪ್ಪು ಆರೋಪ ಹೊರಿಸಿದರೆ ಸರಿಯೆನಿಸುತ್ತದೆ.

ನೀವು ಆಕರ್ಷಣ ಶಕ್ತಿ ಕುರಿತು ಮಾತಾಡಬೇಕೆಂದುಕೊಳ್ಳುತ್ತೀರಿ? ಮಹಿಳೆಯರಿಗೆ ಆ ಶಕ್ತಿ ತಲೆಯಿಂದ ಕಾಲಬೆರಳವರೆಗೆ ಪೂರ್ತಿಯಾಗಿದೆ. ಅವರ ಪ್ರತಿ ಅಂಗವೂ, ಅವರ ಕೊರಳು, ಮಾತು, ನಡೆ, ನುಡಿ, ಕೆಲಸ ಮಾಡುವ ಬಗೆ ಅವರ ಪ್ರತಿ ಹೆಜ್ಜೆಯಲ್ಲೂ ಇತರರ ಬಯಕೆಗಳನ್ನು ಹೊರುತ್ತಲೇ ತಿರುಗುತ್ತಿರುತ್ತಾರೆ. ಆದರೆ ಗಂಡಸರು ಜೇನಿನ ಹುಟ್ಟಿನ ಸುತ್ತಲೂ ಕಣಜಗಳಂತೆ ಆಕೆಯನ್ನು ನೋಡಿದ ಕೂಡಲೇ ಮೋಹಾವೇಶದಲ್ಲಿ ಬಿದ್ದು ತಿರುಗುತ್ತಿದ್ದರೆ ಅದು ಆಕೆಯ ದೋಷವೇ!

ನೀವು ಒಮ್ಮೆ ಪ್ರಯತ್ನಿಸಿ ನೋಡಿರಿ; ಒಂದು ದೊಡ್ಡ ಅಡಿಗೆ ಪಾತ್ರೆ ತೆಗೆದುಕೊಂಡು, ಅದರ ತುಂಬ ಚಿನ್ನದ ನಾಣ್ಯಗಳನ್ನು ತುಂಬಿ ಅದರ ಪಕ್ಕದಲ್ಲಿಯೇ ಒಬ್ಬ ಮಹಿಳೆಯನ್ನು ನಿಲ್ಲಿಸಿ. ನಿಮ್ಮ ಹಿಂದೆ ಒಬ್ಬ ದೊಡ್ಡ ಸಾಧುವನ್ನು, ಒಬ್ಬ ಬ್ರಹ್ಮಚಾರಿಯನ್ನು ಕರೆದು ಅವನಿಗೆ ಹೇಳಿರಿ, "ಸ್ವಾಮಿ! ನಿಮಗೆ ಈ ಎರಡರಲ್ಲಿ ಯಾವುದು ಹೆಚ್ಚು ಇಷ್ಟವಾದರೆ ಅದನ್ನು ತೆಗೆದುಕೊಳ್ಳಿರಿ" ಎನ್ನಿ. ಆಗ ನೋಡಿ, ಅವನು ಚಿನ್ನವಿರುವ ಪಾತ್ರೆಯನ್ನು ಆಚೆ ಎಸೆದು ಕೂಡಲೇ ಅಂದವಾದ ಮಹಿಳೆಗಾಗಿ ಕೈಗಳನ್ನು ಚಾಚದೆ ಹೋದರೆ!

ಇನ್ನು ಏಳನೇ ಅಂಶ : ಮಹಿಳೆಯರೇ ಎಲ್ಲ ಪಾಪಗಳಿಗೆ ಮೂಲ. ಇದು ಎಷ್ಟು ಮಾತ್ರಕ್ಕೂ ಅಲ್ಲ. ಎಲ್ಲ ದುಷ್ಕಾರ್ಯಗಳು ಗಂಡಸರಿಂದಲೇ ಆರಂಭವಾಗುತ್ತವೆ. ನೀವು ಧರ್ಮವನ್ನು ತ್ಯಜಿಸಿ, ನಿಮಗೆ ಚಿತ್ತ ಬಂದಂತೆ ವರ್ತಿಸುತ್ತ, ಕುಡಿದು ಕುಪ್ಪಳಿಸುತ್ತ ತಮಾಷಾ ಗಳಲ್ಲಿ ವೇಷ ಹಾಕುವ ಯುವಕರನ್ನು ನೋಡಿಕೊಳ್ಳುತ್ತ ಇಸ್ಪೀಟ್ ಆಡುತ್ತ, ಗಾಂಜ ಸೇದುತ್ತ, ಮುಂಡೆಯರನ್ನು ಇಟ್ಟುಕೊಳ್ಳುತ್ತ ಎಲ್ಲ ಬಗೆಯ ಕೆಟ್ಟ, ಜಿಗುಪ್ಸೆಯ ಕೆಲಸಗಳನ್ನು ಮಾಡುತ್ತ ಇರುತ್ತೀರಿ. ನೀವಿದನ್ನು ಹೇಳಿರಿ. ನಿಜಕ್ಕೂ ವೇಶ್ಯೆಯರೆಂದರೆ ಯಾರು? ನಿಜಕ್ಕೂ ವೇಶ್ಯೆಯರೆಂದರೆ ನೀವು ಮೋಸ ಮಾಡಿ ಮನೆಯಿಂದ ಕರೆದುಕೊಂಡು ಹೋಗಿ ಬಿಟ್ಟು ಬಿಟ್ಟವರೇ! ಆಕೆ ಉಳಿದ ಜೀವಿಗಳಂತಲ್ಲದೆ ಬೇರೆ ರೀತಿಯಿಂದ ಸೃಷ್ಟಿಸಿದ ಮತ್ತೊಂದು ಬಗೆಯ ಜೀವಿ ಎಂದುಕೊಳ್ಳುತ್ತಿದ್ದೀರಾ? ಅವರನ್ನು ಸೃಷ್ಟಿಸಿದ್ದು ಬೇರೆ ದೇವರಾ? ಯಾವ ಮಹಿಳೆಯನ್ನಾದರೂ ತೆಗೆದುಕೊಳ್ಳಿ. ಆಕೆಯ ಮನೆಯೇ ಆಕೆಗೆ ವ್ಯಥೆಯನ್ನುಂಟು ಮಾಡಬಹುದು, ಆಕೆಯ ಪ್ರಾಣಕ್ಕೇ ಅಪಾಯವಾಗಬಹುದು. ಆಕೆ ಒಂದು ಬೋನಿನಲ್ಲಿ ಸಿಕ್ಕಿ ಮುಂದೆ ಒಂದು ಬಾವಿ ಹಿಂದೆ ಒಂದು ಬಾವಿಯಂತೆ ಇದ್ದು ಆಕೆ ಪ್ರಾಣವನ್ನೇ ಕಳೆದು ಕೊಳ್ಳಬಹುದು. ಆದರೆ ಆಕೆಯ ಜೊತೆಗೆ ಆಧಾರವಿಲ್ಲದೆ ತನ್ನಷ್ಟಕ್ಕೆ ತಾನು ಬದುಕುವುದಿಲ್ಲ. ಆಕೆ ಎಷ್ಟು ಧೈರ್ಯವಂತಳಾದರೂ ಸರಿ. ತನ್ನ ಹಿತ್ತಲಲ್ಲಾದರೂ ಸರಿ ತನ್ನ ಕಾಲ ಮೇಲೆ ತಾನು ನಿಲ್ಲಲಾರಳು. ಅದಕ್ಕೆ ಕಾರಣ ಆಕೆ ಬಂದಿಯಾಗಿ ಬದುಕುವುದರಿಂದ ಆಕೆಯ ಜೀವನ ಒಂದೇ ಮನೆಯೊಳಗೆ ನಾಲ್ಕು ಗೋಡೆಗಳಿಗೆ ಪರಿಮಿತವಾಗಿ ಹೋಗುವುದರಿಂದ, ಮನೆ

ಹೊರಗೆ ಯಾವಾಗಲೂ ಹೆಜ್ಜೆಯಿಡದೆ ಇರುವುದರಿಂದ. ಆದ್ದರಿಂದಲೇ ಆಕೆ ಎಷ್ಟು ಸಾಹಸಿಯಾದರೂ, ನಾಚಿಕೆಗೇಡಿಯಾದರೂ ಒಬ್ಬ ಪುರುಷನ ಹಿಂದೆ ತನ್ನಷ್ಟಕ್ಕೆ ತಾನು ಹೋಗುವುದಿಲ್ಲ. ನೀವೇ ಆಕೆಗೆ ನಿಮ್ಮ ಬಯಕೆಗಳ ಸಂಕೇತಗಳನ್ನು ಕೊಡುತ್ತ, ಆಕೆಯಲ್ಲಿ ಇಲ್ಲಸಲ್ಲದ ಆಲೋಚನೆಗಳನ್ನು ಕೆರಳಿಸುತ್ತೀರಿ. ಒಂದು ಸಾರಿ ಆಕೆ, ಕೆಟ್ಟ ಗಂಡಸರ ಬಲೆಗೆ ಬಿದ್ದರೆ ಅಷ್ಟೆ! ಅನಂತರ ಪಾಪವೆಂದರೆ ಏನೆಂದು ಕಲಿಸುವುದಕ್ಕೆ ಆಕೆಗೆ ಗುರು ಬೇಕಾಗಿಲ್ಲ.

ಇದು ಹೇಗೆಂದರೆ ಯಾರಾದರೂ ಅಫೀಮು, ಮದ್ಯ, ವ್ಯಾಪಾರ ಆರಂಭಿಸಿದ ದಿನಗಳಂತೆ. ಅವರು ನಿಜವಾದ ಮದ್ಯಕ್ಕೆ ಏನು ಬೆರೆಸಬೇಕು, ಮದ್ಯ ಹೆಚ್ಚಾಗುವುದಕ್ಕೆ ಏನನ್ನು ಸೇರಿಸಬೇಕು, ಮದ್ಯವನ್ನು ಯಾರು ಮಾರಿಕೊಡುತ್ತಾರೆ, ಮಾರುವವರನ್ನು ಹೇಗೆ ಸಂತೋಷಪಡಿಸಿ ಮತ್ತಷ್ಟು ಸರಕನ್ನು ಮಾರಿಸಿಕೊಳ್ಳಬೇಕು-ಇವೆಲ್ಲವನ್ನು ಕಲಿತುಕೊಳ್ಳುತ್ತ ಸಮಯವನ್ನು ಹಾಳು ಮಾಡುವುದಿಲ್ಲ. ಇಷ್ಟರಲ್ಲಿ ಇನ್ನೊಬ್ಬ ಮಹಿಳೆಯೋ, ಪುರುಷನೋ ಅದೇ ವ್ಯಾಪಾರಕ್ಕೆ ಬರುತ್ತಾರೆ. ಅವರು ಮೊದಲಿನವರು ಹೇಗೆ ವ್ಯಾಪಾರ ಮಾಡುತ್ತಾರೋ ನೋಡಿ ಕಲಿತುಕೊಂಡು ಅದೇ ವಿದ್ಯೆಯಲ್ಲಿ ಕೂಡಲೇ ಪ್ರವೀಣರಾಗುತ್ತಾರೆ. ಯಾವುದಾದರೂ ವಸ್ತು ಕೊಂಚ ಮಾರಾಟವಾಗಲು ಆರಂಭಿಸಿದರೆ ಪ್ರತಿಯೊಬ್ಬರೂ ಅದೇ ವಸ್ತುವನ್ನು ತಯಾರು ಮಾಡುತ್ತಾರೆ. ಆದರೆ ಮೊದಲಿಗೆ ಯಾರೂ ಆ ಕೆಲಸಕ್ಕೆ ಮುಂದೆ ಬರದೆ ಹೋದರೆ, ಯಾರೂ ಆ ವಸ್ತುವನ್ನು ತಯಾರಿಸುತ್ತಿರಲಿಲ್ಲ. ಒಂದು ವೇಳೆ ನೀವೆಂದೂ ಅವರ ಬಳಿ ಹೋಗಲಿಲ್ಲವೆಂದುಕೊಳ್ಳಿ, ಅವರಿಗೆ ನೂರಾರು ರೂಪಾಯಿ ಕೊಡಲಿಲ್ಲವೆಂದುಕೊಳ್ಳಿ, ನೀವು ಮದುವೆಗಳಲ್ಲೂ, ಉತ್ಸವಗಳಲ್ಲೂ ಅವರನ್ನು ಅಪಾರವಾಗಿ ಗೌರವಿಸಲಿಲ್ಲವೆಂದುಕೊಳ್ಳಿರಿ, ಇಲ್ಲದೆ ಹೋದರೆ ಒಂದು ಸಾರಿ ಅವರ ಕಡೆ ಖುಷಿಯಿಂದ ನೋಡಲಿಲ್ಲವೆಂದುಕೊಳ್ಳಿರಿ, ಅವರಿಷ್ಟು ಬೆಳೆಯುತ್ತ ಇದ್ದರಾ. ನಿಜಕ್ಕೂ ಇದೆಲ್ಲಕ್ಕೂ ನೀವೇ ಕಾರಣ. ಒಂದು ವೇಳೆ ಮಹಿಳೆಯರು ಮನೆಯಿಂದ ಹೊರಗೆ ಹೊರಟುಹೋದರೆ ತಾವು ಹೇಗೆ ಬದುಕಬೇಕೆಂದು ಭಯಪಟ್ಟರೆ, ಅವರು ನಿಜಕ್ಕೂ ಮನೆಯ ಹೊರಗೆ ಕಾಲು ಇಡುತ್ತಾರಾ? ಈಗ ಕನಿಷ್ಟ ಒಂದು ರೀತಿಯಲ್ಲಾದರೂ ಸರಿ ಅವರಿಗೆ ತಮ್ಮ ಹೊಟ್ಟೆ ತುಂಬಿಸಿಕೊಳ್ಳುವ ಅವಕಾಶ ಇದೆಯೆಂದು ಗೊತ್ತು. ಈ ಕಾರಣಗಳಿಂದಲೇ ಈ ಕೆಲಸ ಅಷ್ಟು ಬೆಳೆಯುತ್ತಿದೆ. ಆ ವೇಶ್ಯೆಯರೆಲ್ಲರೂ ಹೊರಡುವ ಗೂಡು ಬೇರೆ ಎಲ್ಲೋ ಇಲ್ಲ. ನೀವೇ ಇದೆಲ್ಲವನ್ನೂ ಆರಂಭಿಸೋದು, ಆಕೆಗೆ ಸಿಹಿಯಾದ ಮಾತು ಹೇಳಿ, ಆಸೆ ಕೆರಳಿಸಿ, ಆಕರ್ಷಣೆಯಿಂದ ಆಕೆಯನ್ನು ಹೊಸಿಲು ದಾಟಿಸಿ, ಆಕೆಯ ಮನೆಯಲ್ಲೇ ಆಕೆಯನ್ನು ಬೇರೆಯವಳನ್ನಾಗಿ ಮಾಡುವುದು. ಆಕೆ ನವಯೌವನದಲ್ಲಿ ಇದ್ದಷ್ಟು ಕಾಲ ಆಕೆಯೊಂದಿಗೆ ನೀವು ಚೆನ್ನಾಗಿಯೇ ಕಾಲಕ್ಷೇಪ ಮಾಡುತ್ತೀರಿ. ಆಕೆ ಆ ಆಕರ್ಷಣೆ ಕಳೆದುಕೊಂಡು ಹಾಳಾಗಿ ಹೋದ ದಿನ ವಿಧಿಯೊಂದಿಗೆ ನೀವೂ ಆಕೆಯನ್ನು ಕೀಳಾಗಿ ನೋಡುತ್ತೀರಿ. ಅದಕ್ಕೇ ಆಕೆ ಈ ನಿಕೃಷ್ಟವಾದ ವ್ಯಾಪಾರ ತನ್ನ ಉಳಿವಿಗಾಗಿ ಬಹಿರಂಗವಾಗಿ ಆರಂಭಿಸಿದ್ದೇ ಅಲ್ಲದೇ, ಉಳಿದ ಮಹಿಳೆಯರನ್ನು ಕೂಡ ತನ್ನೊಂದಿಗೆ ಸೇರಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತದೆ. ಇದೆಲ್ಲ ನೀವು ಈ ಅನುಭವದಿಂದಲೇ ನೋಡಬಹುದು. ಪ್ರತಿಯೊಬ್ಬರೂ

ಮೂರುಲೋಕಗಳೂ ತಮ್ಮಂತೆಯೇ ತಯಾರು ಮಾಡಲ್ಪಟ್ಟಿವೆ ಎಂದುಕೊಳ್ಳುತ್ತಾರೆ. ಕಳ್ಳನ ಕಣ್ಣಿಗೆ ಪ್ರತಿಯೊಬ್ಬರೂ ಕಳ್ಳರೇ, ಸುಳ್ಳು ಹೇಳುವವನಿಗೆ ಪ್ರತಿಯೊಬ್ಬನೂ ಸುಳ್ಳುಕೋರನೇ, ಒಬ್ಬ ವೇಶ್ಯೆಯ ದೃಷ್ಟಿಯಲ್ಲಿ ಪ್ರತಿಯೊಬ್ಬರೂ ಶೀಲವಿಲ್ಲದವರೇ. ಇದಕ್ಕೆ ವಿರುದ್ಧವಾದುದು ಕೂಡಾ ನಿಜವೇ! ದಯಾರ್ದ್ರರು, ಪವಿತ್ರರು, ಪ್ರಾಮಾಣಿಕರು, ಕರುಣಾಮಯಿಗಳು, ಕಪಟ ತಿಳಿಯದವರು, ಕ್ಷಮಾಹೃದಯಿಗಳು-ಅವರು ಜಗತ್ತೆಲ್ಲ ತಮ್ಮಂತೆಯೇ ಇದೆಯೆಂದು ಅಂದುಕೊಳ್ಳುತ್ತಾರೆ.

ಹಸ್ತಿನಾಪುರದಲ್ಲಿ ಪಾಂಡವರ ಗೃಹದಲ್ಲಿ ರಾಜಸೂಯಯಾಗ ಮಾಡಿದಾಗ ಶ್ರೀಕೃಷ್ಣ ದುರ್ಯೋಧನನನ್ನು "ಹೋಗಿ ಈ ದೊಡ್ಡ ಋಷಿ ಸಮಾವೇಶದಲ್ಲಿ ಒಬ್ಬ ಯೋಗ್ಯನಾದ ವ್ಯಕ್ತಿಯನ್ನು, ನನ್ನ ಕೈಯಿಂದ ಬಹುಮಾನ ಸ್ವೀಕರಿಸಬಲ್ಲ ಸದ್ಗುಣವಂತನನ್ನು ನೋಡಿ ನನ್ನ ಬಳಿಗೆ ಕರೆದುಕೊಂಡು ಬಾ" ಎಂದು ಆಜ್ಞಾಪಿಸಿದ.

ದುರ್ಯೋಧನ ಸಭೆಯಲ್ಲ ಸುತ್ತಿ ಎಲ್ಲರನ್ನೂ ಒಬ್ಬೊಬ್ಬರಂತೆ ಪರಿಶೀಲಿಸಿ ನೋಡಿ ಅವೆರಲ್ಲರೂ ಕಡಿಮೆ ಗುಣ ಉಳ್ಳವರೆಂಬ ನಿರ್ಧಾರಕ್ಕೆ ಬಂದ. ಅವನು ಪರಮಾತ್ಮನ ಬಳಿಗೆ ಹೋಗಿ "ಪ್ರಭೂ ಅವರಲ್ಲಿ ಒಬ್ಬನೂ ನಿನ್ನ ಕೈಯಿಂದ ಬಹುಮಾನವನ್ನು ತೆಗೆದು ಕೊಳ್ಳುವುದಕ್ಕೆ ಅರ್ಹನಾಗಿಲ್ಲ. ಎಲ್ಲರೂ ಮೂರ್ಖರು ಅಥವಾ ಕಪಟಿಗಳಾಗಿದ್ದಾರೆ ಎಂದ. ಅದನ್ನು ಕೇಳಿ ಪರಮಾತ್ಮ ಧರ್ಮರಾಜನನ್ನು ಕೂಡಾ ಹಾಗೇ ಆಜ್ಞಾಪಿಸಿದ. ಅವನು ಎಲ್ಲರ ಬಳಿ ಹೋಗಿ ಪರಿಶೀಲಿಸಿ ಬಂದ. "ಧರ್ಮರಾಯ! ಇವರೆಂತವರು ಎನ್ನುತ್ತೀರಿ? ಯಾರಾದರೂ ನನ್ನಿಂದ ಬಹುಮಾನ ತೆಗೆದುಕೊಳ್ಳುವ ಅರ್ಹರಿದ್ದಾರೆ ಎನ್ನುತ್ತೀಯಾ?" ಎಂದು ಭಗವಂತನು ಕೇಳಿದ. ಧರ್ಮರಾಯ ಕೈಗಳನ್ನು ಮುಗಿದು ಉತ್ತರ ಹೇಳಿದ, "ಪ್ರಭೂ! ಈ ಸಭೆಯಲ್ಲಿ ಪ್ರತಿಯೊಬ್ಬರೂ ಸೂರ್ಯನಷ್ಟು ತೇಜೋವಂತರಾಗಿ ಬೆಳಗುತ್ತಿದ್ದಾರೆ, ಅಗ್ನಿಯಷ್ಟು ಪವಿತ್ರವಾಗಿ ಉರಿಯುತ್ತಿದ್ದಾರೆ. ಅದರಲ್ಲಿ ಒಬ್ಬರನ್ನು ಹೇಗೆ ಆಯ್ಕೆ ಮಾಡಲಿ? ನನ್ನ ಕಣ್ಣಿಗೆ ಪ್ರತಿಯೊಬ್ಬರೂ ಶ್ರೇಷ್ಠ ಗೌರವ ಸತ್ಕಾರಗಳಿಗೆ ಪಾತ್ರರೇ." ಈ ಮೇಲಿನ ವಿಷಯದಲ್ಲಿ ಕೂಡ ಅಷ್ಟೇ.

ಮಹಿಳೆಯರು ಅಗ್ನಿಕುಂಡಗಳಂತೆ ಉರಿಯುತ್ತಿದ್ದಾರೆ, ನೀವು ಅದರಲ್ಲಿ ಎಣ್ಣೆ ಹಾಕಿದ ಮಾತ್ರಕ್ಕೆ ಅವರು ಕಡಿಮೆ ಕಾಂತಿಯಿಂದ ಉರಿಯುತ್ತಾರಾ? ಬಟ್ಟೆಯ ಮೇಲೆ ಎಣ್ಣೆ ಹುಯ್ದು ಬೆಳಗಿಸಿದ ದೀವಿಗೆ ಸುತ್ತಲೂ ಹತ್ತು ಹುಳುಗಳಿರುತ್ತವೆಯಲ್ಲವೆ! ನಿಮ್ಮ ಮೇಲೆ ಮೋಹದಿಂದ ವಿವೇಕ ಕಳೆದುಕೊಳ್ಳುವಂತೆ ಮಾಡಿ, ಭವಿಷ್ಯತ್ತಿನ ಮೇಲೆ ಎಷ್ಟೋ ಚಿನ್ನದ ಆಸೆಗಳನ್ನು ಕಲ್ಪಿಸಿ, ನಿಮಗೆ ತೋಚಿದ ವಿಧಾನದಲ್ಲಿ ಆಕೆ ಮನೆ ಹೊರಗೆ ಬರುವಂತೆ ಮಾಡುತ್ತಾರೆ. ಆ ಮಹಿಳೆಯರಲ್ಲಿ ಒಬ್ಬರನ್ನು ಇದೆಲ್ಲ ನಿಜವೇ ಎಂದು ಕೇಳಿದರೆ ಆಕೆ ಕೋಪದಲ್ಲಿ ಚಿರತೆಯಂತೆ ತುಟಿಯನ್ನು ಕಚ್ಚಿಕೊಂಡು, ನಿಮ್ಮ ಹೆಸರನ್ನು ಕೇಳಿದ ಕೂಡಲೇ ಹಲ್ಲು ಕಡಿಯುತ್ತಾಳೆ. ದುರ್ಮಾರ್ಗದಿಂದ ದುರ್ಮಾರ್ಗವೇ ಹುಟ್ಟುತ್ತದೆಯಾಗಲಿ ಅದು ಬೆಳಕು ದೊಡ್ಡದಾಗುವುದಕ್ಕೆ ಬಿಡುವುದಿಲ್ಲವೇ! ಬೃಂದಾವನ ಗಿಡದ ಸುತ್ತಲೂ ಬಳ್ಳಿ ಹಬ್ಬಿದಂತೆ ನಿಮ್ಮ ದುರ್ಮಾರ್ಗ

ನಿಮ್ಮನ್ನು ಸುತ್ತಿಕೊಂಡೇ ಇರುತ್ತದೆಯಾಗಲಿ ನೀವು ಮಾತ್ರ ಅದನ್ನು ಹೆಂಗಸರ ಮೇಲೆ ತಳ್ಳಿಹಾಕುವುದರಲ್ಲಿ ಗಟ್ಟಿಗರು.

'ಯಾರನ್ನಾದರೂ ತೆಗೆದುಕೊಳ್ಳಿ!' ಮಹಿಳೆಯರಾದರೂ, ಪುರುಷರಾದರೂ, ಒಂದು ಸಾರಿ ರುಚಿ ನೋಡಿದರೆಂದರೆ ಅವರು ಮಾಡದ ದುರ್ಮಾರ್ಗ ಇರುವುದಿಲ್ಲ. ನೀವು ಏನನ್ನಾದರೂ ಕದ್ದರೆಂದುಕೊಳ್ಳಿ, ಅದನ್ನು ಇಲ್ಲವೆನ್ನಲು ಸುಳ್ಳು ಹೇಳಬೇಕು. ಸುಳ್ಳನ್ನು ಮುಚ್ಚಿಕೊಳ್ಳಲು ಇನ್ನೂ ನೀಚವಾದ ಕೆಲಸಗಳನ್ನು ಮಾಡಬೇಕು. ಅದು ಹಾಗೆ ಮುಂದಕ್ಕೆ ಹೋಗುತ್ತಲೇ ಇರುತ್ತದೆ. ಆದ್ದರಿಂದ ನಿಜಕ್ಕೂ ಮೊಟ್ಟಮೊದಲೇ ನೀವು ಆಹ್ವಾನಿಸುತ್ತಿರುವಂತೆ ಆಕೆಯ ಕಡೆ ನೋಟವನ್ನು ಹರಿಸದೆ ಹೋದರೆ ಇದೆಲ್ಲ ನಿಜಕ್ಕೂ ನಡೆಯುತ್ತಿರಲಿಲ್ಲವಲ್ಲ! ಈಗ ಹೇಳಿರಿ ಮಹಿಳೆಯರ ದುರ್ಗುಣಗಳಾವುವಾದರೂ ಇವುಗಳಿಗೆ ಹತ್ತಿರದಲ್ಲಾದರೂ ಬರುತ್ತವೆಯಾ? ಹೆಂಗಸರು ಎಂದಾದರೂ ರಸ್ತೆಯ ಪಕ್ಕದಲ್ಲಿ ನಿಂತು ಆಟಪಾಟಗಳನ್ನೇನಾದರೂ ನೋಡುವುದು, ಹೆಂಗಸರು ಕುಡಿದು ರಸ್ತೆಯ ಮೇಲೆ ಬಿದ್ದು ಹೋಗುವುದು, ಹೆಂಗಸರು ಜೂಜಾಡುವುದು, ಹೆಂಗಸರು ನೂರಾರು ಮಂದಿ ಗುಂಪಾಗಿ ಸೇರಿ ದರೋಡೆ ಕಳ್ಳರಾದದ್ದು ಎಲ್ಲಿಯಾದರೂ ನೋಡಿದ್ದೀರಾ? ಅವರನ್ನು ಎಂದಾದರೂ ಅಫೀಮು ಅಂಗಡಿಯಲ್ಲಾಗಲಿ, ಇನ್ನೊಬ್ಬ ಗಂಡಸಿನ ಮನೆಯಲ್ಲಿ ಬಹಿರಂಗವಾಗಿ ಪ್ರೇಮಕಲಾಪವನ್ನು ನಡೆಸುತ್ತ ಇರುವಾಗ ನೋಡಿದ್ದೀರಾ? ವೇಶ್ಯೆಯರ ಸಂಗತಿ ಬೇರೆ, ಅವರ ವಿಷಯ ಬಿಡಿ. ಅದು ಅವರಿಗೆ ಹೊಟ್ಟೆ ಹೊರೆಯುವ ಮಾರ್ಗ; ಅವರು ವಿಟರು ಹೇಳಿದಂತೆ ನಡೆದುಕೊಳ್ಳದಿದ್ದರೆ ಉಪವಾಸ ಮಲಗಬೇಕಾಗುತ್ತದೆ.

ಒಬ್ಬ ಅದೃಷ್ಟವಂತನಾದ ಗಂಡಸು ಬರೆದ ಪುಸ್ತಕ 'ಸ್ತ್ರೀ ಚರಿತ್ರೆ' ಎಂದು ಬಂದಿದೆ. ಅದು ದುರ್ಮಾರ್ಗಿಗಳಾದ ಮಹಿಳೆಯರ ಕುರಿತೇ ಇದೆ! ಆದರೆ ಆ ಕತೆಗಳಲ್ಲಿ ಸತ್ಯವೆಷ್ಟಿದೆ? ನೀವೆಷ್ಟು ಕಷ್ಟಪಟ್ಟು ಪ್ರಯತ್ನಿಸಿದರೂ ನಿಮಗೆ ಅದರಲ್ಲಿ ನಿಜ ಬದುಕಿನ ಉದಾಹರಣೆಗಳು ಕಾಣಿಸುವುದಿಲ್ಲ. ರಾಜಕುಮಾರಿಯರನ್ನು, ರಾಣಿಯರನ್ನು ಎಷ್ಟು ಜಾಗರೂಕತೆಯಿಂದ ಕಾವಲು ಕಾದು, ರಾಜಭವನಗಳಲ್ಲಿ ಕಟ್ಟುನಿಟ್ಟಾಗಿ ಇಡುತ್ತಾರೆ! ಅವರು ರಾತ್ರಿ ಹೊತ್ತು ಗಂಡು ವೇಷದಲ್ಲಿ ಅಂತಃಪುರಗಳಿಂದ ಓಡಿ ಹೋಗುವುದು ಸಾಧ್ಯವಾದ ವಿಷಯವೇನಾ? ಮಹಾರಾಜ ಬಿಟ್ಟರೆ ಯಾವ ಗಂಡಸೂ ಒಳಗೆ ಹೋಗುವುದಕ್ಕೆ, ಕನಿಷ್ಟ ಗಂಡು ನಾಯಿಯನ್ನು ಕೂಡಾ ಒಳಗೆ ಹೋಗುವುದಕ್ಕೆ ಬಿಡುವುದಿಲ್ಲವಲ್ಲ. ಐವತ್ತಕ್ಕೂ ಹೆಚ್ಚು ದಿಟ್ಟರಾದ ಸೈನಿಕರು ದ್ವಾರದ ಬಳಿ ಕಾವಲು ಇರುತ್ತಾರೆ. ಸೈನಿಕರೆಲ್ಲ ಕುರುಡರೇನೂ ಅಲ್ಲವಲ್ಲ! ಅಥವಾ ಹೇಗೋ ಕತ್ತಲು ಮುಸುಕಿ ಆ ಕ್ಷಣದಲ್ಲಿ ಅವರು ಕಣ್ಣನ್ನು ಮುಚ್ಚಿಹಾಕುತ್ತದೆಯಾ? ಒಬ್ಬಿಬ್ಬರ ಬಾಯಿಯನ್ನಾದರೆ ಲಂಚದಿಂದ ಮುಚ್ಚಬಹುದೆಂದುಕೊಳ್ಳಿರಿ. ಮತ್ತೆ ಒಂದು ದೊಡ್ಡ ಗುಂಪು ದ್ರೋಹಿಗಳಿರುವಾಗ ಯಾರೋ ಒಬ್ಬರು ಅರಚಿ ಕೂಗು ಹಾಕುತ್ತಾರೆ ಅಲ್ಲವೆ.

ನಿಜ ಹೇಳಬೇಕೆಂದರೆ ಐಶ್ವರ್ಯದಲ್ಲಿ ಮುಳುಗಿ ತೇಲುತ್ತ ಸುಲಭವಾದ ಜೀವನ ಗಳಿಸುವ ಒಬ್ಬ ಮಹಿಳೆ ಒಬ್ಬ ಗೋಸಾಯಿಗಾಗಿಯೋ ಒಬ್ಬ ದ್ವಾರಪಾಲಕನಿಗಾಗಿಯೇ ಅದೆಲ್ಲವನ್ನು ಬಿಟ್ಟುಬಿಡುವ ಸಾಹಸ ಹೇಗಿರುತ್ತದೆ? ಬಿಸಿಲ ಮುಖವನ್ನರಿಯದ ಹೆಣ್ಣು, ಯಾವಾಗಲೂ ಮನೆಯಲ್ಲಿ ಬಂದಿಯಾಗಿಯೇ ಬದುಕಿದ ಹೆಣ್ಣು, ಬೇರೆ ಪುರುಷನ ಮುಖವನ್ನು ಎಂದೂ ನೋಡದ ಹೆಣ್ಣು? ಎಲ್ಲಾ ಅಸಹಜ-ನಿಮಗೆ ನಿಜ ಜೀವನದಲ್ಲಿ ಅಂತಹುದೆಂದೂ ನಡೆಯುವುದಿಲ್ಲ.

ಹಂಸಗಳು ಮುತ್ತುಗಳನ್ನು ತಿಂದು ಬದುಕುತ್ತವೆ. ಒಂದು ವರ್ಷ ಪೂರ್ತಿ ಹಸಿವಿನಿಂದ ಇರಬೇಕಾಗಿ ಬಂದರೆ ಅವು ಮಲಿನ ಪದಾರ್ಥಗಳನ್ನು ತಿನ್ನುತ್ತ ಸಂತೋಷವಾಗಿ ಇರಬಲ್ಲವೇ? ಒಬ್ಬ ನಾಟ್ಯಗಾತಿ ವ್ಯಭಿಚಾರವನ್ನು ಒಂದು ಜೀವನ ವಿಧಾನವಾಗಿಯೇ ಭಾವಿಸುತ್ತಾಳೆ. ಆಕೆಗೆ ಬರುವ ಹಣ ಮುಖ್ಯವಾಗಲಿ ತಾನು ಯಾರ ಜೊತೆ ಹೋಗುತ್ತಿದ್ದೇನೆ ಎಂಬುದು ಮುಖ್ಯವಲ್ಲ. ಆದರೆ ಒಬ್ಬ ವೇಶ್ಯೆ ಕೂಡ ಒಂದು ರಾಜಭವನದ ದ್ವಾರಪಾಲಕನೊಂದಿಗೋ ಅಥವಾ ಕುರೂಪಿಯಾದ ಒಬ್ಬ ಮುದಿಯೋಗಿಯನ್ನೋ ಆಯ್ಕೆ ಮಾಡಿಕೊಳ್ಳುವುದಿಲ್ಲ. ರಾಣಿಯ ವಿಷಯದಲ್ಲೂ ಅದೇ ನಿಜವಲ್ಲವೇ! ಆ 'ಸ್ತ್ರೀಚರಿತ್ರೆ'ಯಲ್ಲಿ ಕೆಲವು ಕತೆಗಳು ಎಷ್ಟು ನಿಕೃಷ್ಟವಾಗಿವೆಯೆಂದರೆ ಅವನ್ನು ಓದುವುದಕ್ಕೆ ಕೂಡ ನಾವು ನಾಚಿಕೆ ಪಡುತ್ತೇವೆ. ಈ ಪುಸ್ತಕ ಓದಿದ ಯಾರಿಗಾದರೂ ಲೇಖಕ ಎಷ್ಟು ತಿಳಿವಳಿಕೆ ಮೀರಿದ ದೇಶಭಕ್ತನೆಂದು ಸುಲಭವಾಗಿ ಅರ್ಥವಾಗುತ್ತದೆ.

ಈ ಪ್ರಭುತ್ವದ ಕಾಲದಲ್ಲಿ ಶಿಕ್ಷಣ ಆದಷ್ಟು ಬೇಗ ವ್ಯಾಪಕವಾಗಿ ಹರಡಿ ಎಷ್ಟೋ ಪ್ರಕಾಶನ ಸಂಸ್ಥೆಗಳು ಸ್ಥಾಪಿತವಾಗಿವೆ. ಆದ್ದರಿಂದ ಬಹಳ ಚಿಕ್ಕ ಚಿಕ್ಕ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. 'ಮಂಜುಘೋಷ' ಎಂಬ ಪುಸ್ತಕ, 'ಮುಕ್ತಮಾಲ' ಎಂಬ ಪುಸ್ತಕ, 'ಮನೋರಮನಿ' ಕುರಿತ ನಾಟಕ ಮೊದಲಾದವು ಇವೆ. ಒಂದು ಪುಸ್ತಕದಲ್ಲಾಗಲೀ, ನಾಟಕದಲ್ಲಾಗಲಿ ಶೃಂಗಾರ, ಹಾಸ್ಯ, ದುಃಖ ಎಂಬ ಮೂರು ವಸ್ತುಗಳಿದ್ದರಾಗಲಿ ಆನಂದವಿರುವುದಿಲ್ಲ. ಅದನ್ನು ಒಪ್ಪಿಕೊಳ್ಳುತ್ತೇನಾಗಲಿ ಒಬ್ಬ ಲೇಖಕ ತಾನು ಬರೆಯುವ ಮುನ್ನ ಆ ಕತೆ ಬದುಕಿಗೆ ಹತ್ತಿರವಾಗಿದೆಯೇ ಇಲ್ಲವೇ, ಅಂತಹ ಘಟನೆಗಳು ಎಂದಾದರೂ ನಡೆದಿವೆಯೇ ಇಲ್ಲವೇ ಎಂದು ಯೋಚಿಸಿ ಆ ನಂತರವೇ ಬರೆಯುವುದಕ್ಕೆ ತೊಡಗಬೇಕು.

ಮೊದಲು ಮಂಜುಘೋಷಳನ್ನು ನೋಡೋಣ. ಆಕೆ ಒಬ್ಬ ದೊಡ್ಡ ಚಕ್ರವರ್ತಿಯ ಮುದ್ದಿನ ಮಗಳು. ಅಂತಹ ಅವಳು ಒಮ್ಮೆಲೆ ವಸಂತ ಮಾಧವನೊಂದಿಗೆ ಕಲೆತು ರಥದೊಳಕ್ಕೆ ದುಮುಕಿ, ತನ್ನ ಮುದಿ ತಂದೆಯನ್ನು ಮೋಸಗೊಳಿಸಿ, ಯಾವ ಬಗೆಯ ಆಲೋಚನೆಯಿಲ್ಲದೆ ಓಡಿ ಹೋಗುತ್ತಾಳಾ? ಅಲ್ಲದೆ ತನ್ನನ್ನು ಚಿಕ್ಕಂದಿನಿಂದ ಮುದ್ದಿಸಿ, ಬೆಳೆಸಿದ ತಂದೆಯನ್ನು ಆಕೆಯಷ್ಟು ಬುದ್ಧಿವಂತಳು, ಗುಣವಂತಳು ಆ ರಾಜಕುಮಾರನು ಯಾರು, ಎಲ್ಲಿಂದ ಬಂದಿದ್ದಾನೆಯೆಂಬ ವಿವರಗಳು ತಿಳಿದುಕೊಳ್ಳದೆ ತನ್ನ ವೈಭವೋಪೇತವಾದ ರಾಜಭವನ, ಸುಖವಾದ ಜೀವನವನ್ನು ಸುಮ್ಮನೆ ಬಿಟ್ಟು ಬಿಡುತ್ತಾಳಾ! ಹೋಗುವಾಗ ಕನಿಷ್ಟ ತನ್ನ

ಮುದಿ ತಂದೆಯ ರೂಪವಾದರೂ ಆಕೆಯ ಕಣ್ಣಮುಂದೆ ಬರಲಿಲ್ಲವೇ? ಆಕೆ ಯಾವ ಭಾವನೆಗಳೂ ಇಲ್ಲದೆಯೇ ಹೊರಟು ಹೋಗುತ್ತಾಳಾ? ಆದ್ದರಿಂದ ಓದುಗರೇ, ನೀವೇ ಈ ಕತೆ ಜೀವನಕ್ಕೆ ಎಷ್ಟು ಹತ್ತಿರವಾಗಿದೆಯೋ ನಿರ್ಧರಿಸಬಹುದು. ದ್ವಾಪರಯುಗ ಮುಗಿದಂದಿನಿಂದ ಇಂದಿನ ಕಲಿಯುಗ ಆರಂಭವಾಗುವವರೆಗೆ ಹಲವು ಸಾವಿರ ಸಾವಿರ ವರ್ಷಗಳು ಉರುಳಿವೆ. ಇಂಗ್ಲಿಶ್ ರಾಜ್ಯ ಕೂಡ ಸುಮಾರು ಇನ್ನೂರೈವತ್ತು ವರ್ಷಗಳಿಂದ ನಡೆಯುತ್ತಿದೆಯಲ್ಲವೆ! ಈ ಲೇಖಕ ಈ ಕಾಲದಲ್ಲೇ ಜನಿಸಿರಬೇಕು. ಆದ್ದರಿಂದ ಲೇಖಕನ ಅಜ್ಜಂದಿರು, ನನ್ನ ಅಜ್ಜಂದಿರು ಹತ್ತು ತಲೆಮಾರುಗಳ ಕೆಳಗೆ ಕೂಡ ಸ್ವರ್ಗ, ರಥ, ವಸಂತ ಮಾಧವನ ನಂತಹವನನ್ನು ಎಂದೂ ನೋಡಿರಲಾರರು.

ಇಂಗ್ಲಿಶರು ಹಲವು ಬಗೆಯ ಯಂತ್ರಗಳನ್ನು, ಇನ್ನೂ ಹಲವು ವಿಚಿತ್ರವಾದ ವಾಹನಗಳನ್ನು, ಆಕಾಶದಲ್ಲಿ ಹೋಗುವುದನ್ನು ತಯಾರು ಮಾಡಿರಬಹುದು. ಆದರೆ ಅವರು ಕೂಡ ಅವರು ಕೋರಿದಂತೆ ನಡೆಯುವ ರಥವನ್ನು ಮಾತ್ರ ತಯಾರು ಮಾಡಲಿಲ್ಲ. ಆದ್ದರಿಂದ ವಸಂತ ಮಾಧವನಿಗೆ ಮಾತ್ರ ಅಂತಹ ರಥ ಎಲ್ಲಿ ಸಿಕ್ಕಿತೆಂದು, ಅವನು ಅದನ್ನು ಮಂಜುಘೋಷಳನ್ನು ಎತ್ತಿಕೊಂಡು ಹೋಗುವುದಕ್ಕೆ ಬಳಸಿಕೊಂಡನೆಂದು ಅಂದುಕೊಳ್ಳುವುದಕ್ಕೆ ಅವಕಾಶ ಇಲ್ಲವಲ್ಲವೇ!

ಎರಡನೇ ಪುಸ್ತಕಲ್ಲಿರುವ 'ಮುಕ್ತಮಾಲ' ಒಂದು ದೊಡ್ಡ ಕುಟುಂಬದ ಒಬ್ಬ ನಾಯಕನಿಗೆ ಹುಟ್ಟಿದವಳು. ಆಕೆಯ ಗಂಡ ರಾಜನ ಅಭಿಮಾನ ಕಳೆದುಕೊಂಡು ಕಾರಾಗೃಹದಲ್ಲಿದ್ದ. ಅವನನ್ನು ನೋಡುವುದಕ್ಕೆ ಮಾಡುವ ಪ್ರಯತ್ನಗಳಲ್ಲಿ ಆಕೆ ದುಷ್ಟನಾದ ಜೈಲು ಅಧಿಕಾರಿ ಭದ್ರಕ್ಷನೆಂಬುವನ ಕೈಯಲ್ಲಿ ಸಿಕ್ಕಿ ಬೀಳುವಳು. ಅವನು ಆಕೆಗೆ ಹಲವು ಕಷ್ಟಗಳನ್ನು ಕೊಟ್ಟರೂ ಆಕೆಯನ್ನು ಒಂದು ಗಾಢಾಂಧಕಾರವಾದ ಕಾಡಿನಲ್ಲಿ ಕಟ್ಟಿ ಹಾಕಿದರೂ ಆಕೆ ತನ್ನ ಸ್ತ್ರೀ ಧರ್ಮವನ್ನೆಂದೂ ಬಿಡಲಿಲ್ಲ. ಲೇಖಕ ಹೇಳಿದ ಒಟ್ಟು ಕತೆ ಇದೇ. ಅದಕ್ಕೆ ಪ್ರತಿಯಾಗಿ ನಾನು ಏನು ಹೇಳುತ್ತೇನೆಂದರೆ ಒಬ್ಬ ಹೆಣ್ಣಿನ ಶಕ್ತಿ ಒಬ್ಬ ಪುರುಷನ ಮುಂದೆ ಇರುವೆಯಂತಹುದು. ಅವನಿಗೆ ಒಂದು ಕೈಯಲ್ಲಿ ಆಕೆಯ ಒಟ್ಟು ಶರೀರದಲ್ಲಿರುವಷ್ಟು ಶಕ್ತಿಯಿದೆ. ಕಾಮದಿಂದ ಕೆರಳಿಬೀಳುವ ಒಂದು ಹುಲಿ ಜನಸಂಚಾರವಿಲ್ಲದ ಒಂದು ಹಿತ್ತಿಲಲ್ಲಿ ಕಟ್ಟಿ ಹಾಕಿದ ಒಂದು ಹಸುವನ್ನು ನೋಡಿದೆ ಎಂದುಕೊಳ್ಳಿರಿ - ಅದನ್ನು ಆ ಹುಲಿ ಜೀವದಿಂದ ಉಳಿಸುತ್ತದಾ?

ನಿಮ್ಮ ದೇವರುಗಳು ಕೂಡ ವಕ್ರಬುದ್ಧಿಯುಳ್ಳವರೇ, ಇನ್ನು ಮನುಷ್ಯರು ದುಷ್ಟರಾದರೆ ಆಶ್ಚರ್ಯವೇನಿದೆ? ಇಂದ್ರ ಗೌತಮನ ವೇಷವನ್ನು ಹಾಕಿಕೊಂಡು ಮುನಿಪತ್ನಿ ಅಹಲ್ಯೆಯ ಶೀಲವನ್ನು ಹಾಳು ಮಾಡಿದ. ಚಂದ್ರಾವಳಿ ಶ್ರೇಷ್ಠ ಪತಿವ್ರತೆಯಾದರೂ ಕೃಷ್ಣನು ರಾಹಿ ರೂಪದಲ್ಲಿ ಆಕೆಯ ನಿಯಮವನ್ನು ಭಗ್ನ ಮಾಡಿದನಲ್ಲವೇ! ನೀವು ಪತಿವ್ರತಾ ಧರ್ಮದ ಬಗ್ಗೆ ಇಷ್ಟು ದೊಡ್ಡ ಗಲಭೆಯನ್ನು ಏಕೆ ಮಾಡುತ್ತೀರಿ. ನಿಜಕ್ಕೂ ಮನೆಗಳನ್ನು, ಕುಟುಂಬಗಳನ್ನು ನಾಶ ಮಾಡುವುದಕ್ಕೆ ಆಲೋಚನೆಗಳನ್ನು ಮಾಡುವುದು ನೀವೇ ಆಗಿರುವಾಗ?

ಕೃಷ್ಣನೂ ದೇವರೇ. ಒಳಿತು ಕೆಡುಕನ್ನು ಅಳೆಯುವ ತಕ್ಕಡಿ ಅವನ ಕೈಯಲ್ಲೇ ಇದೆಯಲ್ಲವೇ! ಎಲ್ಲ ತಿಳಿದ ಆತ್ಮಾರಾಮನವನು. ಸತ್ಯ ಯಾವುದೋ ಮೋಸ ಯಾವುದೋ ತಿಳಿದುಕೊಳ್ಳಬಲ್ಲ. ಅವನು ಸ್ತ್ರೀಯರ ಮೇಲೆ ದಯೆ ತಾಳಿ, ನಿಮ್ಮಲ್ಲಿ ಹೂತುಕೊಂಡಿರುವ ತುಚ್ಛ ಬಯಕೆಗಳನ್ನೆಲ್ಲ ನಾಶ ಮಾಡಿ, ಅವರನ್ನು ನಿಮ್ಮ ಕಬಂಧ ಹಸ್ತಗಳಿಂದ ಬಿಡುಗಡೆ ಮಾಡಿದರೆ ತಪ್ಪು. ಅವರಿಗೆ ಸ್ವಾತಂತ್ರ್ಯವಿಲ್ಲ. ಇಲ್ಲದೆ ಹೋದರೆ ಅವರ ಜೀವನಕ್ಕೇನೂ ಬೆಲೆ ಇಲ್ಲ. ಆ ಕತೆಗಳೆಲ್ಲ ಪುಸ್ತಕಗಳಲ್ಲೇ ನಿಜ. ಒಬ್ಬ ಬ್ರಾಹ್ಮಣ ಪುರಾಣಗಳನ್ನು ಹೇಳುವಾಗ ಕೇಳುವವರಿಗೆ ಜಾಗ್ರತೆಯಿಂದಿರಲು ಹೇಳುತ್ತಾನೆ. ಬದನೆಕಾಯಿಯಲ್ಲಿ ದೋಷವಿದೆಯೆಂದು, ತಿನ್ನಬಾರದ ಪದಾರ್ಥವೆಂದು ಇತ್ಯಾದಿ ಗಟ್ಟಿಯಾಗಿ ಎಚ್ಚರಿಸುತ್ತಾನೆ. ಮನೆಗೆ ಹೋದ ಕೂಡಲೇ ಅವನು ಲೊಟ್ಟೆ ಒಡೆದುಕೊಂಡು ಮಣಗಟ್ಟಲೆ ಬದನೆಕಾಯಿಗಳನ್ನು ತಿನ್ನುತ್ತಾನೆ. ಆದ್ದರಿಂದ ಈ ಜ್ಞಾನವೆಲ್ಲ ಮಾತುಗಳಿಗೆ ಮಾತ್ರ ಸೀಮಿತವಲ್ಲವೇ! ಇದನ್ನು ಯಾರು ಪಾಲಿಸುತ್ತಾರೆ ಈ ದಿನಗಳಲ್ಲಿ. ಮಹಿಳೆಯ ಪ್ರಾಮಾಣಿಕತೆ ಕುರಿತು ಯಾರು ಗಮನಿಸುತ್ತಾರೆ ಈಗ. ಆಕೆ ಬಿಡುಗಡೆ ಹೇಗೆಂದರೆ ಆಕೆ ಏಟು ತಿಂದು ಬಿದ್ದು ಹೋಗಿ, ಒಬ್ಬ ದುಷ್ಟನ ಪಾದಗಳ ಬಳಿ ಬಿದ್ದು ಪ್ರಾಣ ಕಳೆದುಕೊಳ್ಳುವುದು ಬಿಟ್ಟು ಬೇರೆ ದಾರಿಯಿಲ್ಲ. ಆ ಕತೆಗಳನ್ನು ಬರೆಯುವುದರಿಂದ ಪ್ರಯೋಜನವೇನು? ಅದು ಒಂದು ಚಿಕ್ಕ ಹುಡುಗಿಗೆ ದೊಡ್ಡ ದೊಡ್ಡ ವಿಷಯಗಳನ್ನು ವಿಶದೀಕರಿಸಿ ಹೇಳುವಂತಹುದು? ಸಾಮಾನ್ಯವಾಗಿ ನಡೆಯುವ ವಿಷಯಗಳೊಂದಿಗೆ ಹೋಲಿಸಿ ನೋಡಿದಾಗ ಅವೆಲ್ಲ ಎಷ್ಟು ಅಭೂತ ಕಲ್ಪನೆಗಳೋ ಎಂದು ನಿಮಗೆ ಸುಲಭವಾಗಿ ತಿಳಿಯುತ್ತದೆ. ಇನ್ನು 'ಮನೋರಮ' ನಾಟಕ. ನಾಟಕಕಾರ ಅದನ್ನು ನಾಲ್ಕು ಬೇರೆ ಬೇರೆ ಕತೆಗಳ ಸುತ್ತಲೂ ಹೆಣೆದಿದ್ದಾನೆ.

ಮೊದಲ ಕತೆಗೆ ಸಂತೋಷದಾಯಕವಾದ ಮುಕ್ತಾಯ ಏಕಿದೆಯೆಂದರೆ ಮನೋರಮ, ಗಣಪತಿರಾವ್ ಇಬ್ಬರೂ ಒಳ್ಳೆಯ ಸ್ವಭಾವವುಳ್ಳವರು, ಓದಿಕೊಂಡವರು. ಎರಡನೇ ಕತೆ ಗೋಡೂಬಾಯಿ, ರಾಮರಾವ್ ಫಡ್ನೀಸ್ ಎಷ್ಟು ಅನುಕೂಲವಲ್ಲದ ದಂಪತಿಗಳೋ, ಆ ಯುವತಿ ಮುದಿ ಗಂಡನನ್ನು ಎಷ್ಟು ಅಸಹ್ಯಪಡುತ್ತಾಳೋ, ಎಷ್ಟು ಕೀಳಾಗಿ ನೋಡುತ್ತಾಳೋ ಎಂಬುದನ್ನು ಹೇಳುತ್ತದೆ. ಆ ನಂತರ ಗೋಡೂಬಾಯಿ ಹೇಗೆ ಮನೆಯಿಂದ ಗಂಡನನ್ನು ಬಿಟ್ಟು ಓಡಿ ಹೋದಳು, ಹೇಗೆ ನ್ಯಾಯಾಧಿಕಾರಿ ತನ್ನ ಕೆಲಸ ತಾನು ಮಾಡಿಕೊಂಡು ಹೋದನೋ, ಕೆಲಸದ ಆಳು ಸರಸ್ವತಿಬಾಯಿ, ನಾಯಿಂದ ತೂಕ್ಯಾ ಕೊಟ್ಟ ಸಾಕ್ಷ್ಯದಿಂದ ಆಕೆ ನ್ಯಾಯಸ್ಥಾನದಲ್ಲಿ ಎಲ್ಲರ ಮುಂದೆ ಹೇಗೆ ಅವಮಾನದ ಪಾಲಾದಳೋ ಬಣ್ಣಿಸುತ್ತದೆ. ಇನ್ನು ಮೂರನೇ ಕತೆ ಗಂಗೂ ಕುರಿತು, ನೀಚನಾದ ಆಕೆ ಗಂಡ ವಿನಾಯಕರಾವ್ ಕುರಿತು ಆಕೆ ಸರಸ್ವತಿಬಾಯಿಯಿಂದ ಆಕರ್ಷಿಸಲ್ಪಟ್ಟು ವ್ಯಭಿಚಾರಕ್ಕೆ ಇಳಿದು, ಕರಾಚಿಗೆ ಓಡಿ ಹೋಗಿ, ಬಹಿರಂಗವಾಗಿ ವೇಶ್ಯೆಯಾಗಿ ಬದಲಾಗುತ್ತಾಳೆ. ಈ ಕತೆ ನಾವು ಒಬ್ಬ ವೇಶ್ಯೆ ತೋರುವ ದಯೆಗೆ, ಆಕೆಯ ಅಂತಸ್ತಿಗೆ, ಆಕೆಯ ಸಿಹಿಯಾದ ಮಾತುಗಳಿಗೆ, ಆಕೆಯ ಬಟ್ಟೆಗಳಿಗೆ ಎಷ್ಟರಮಟ್ಟಿಗೆ ಬೆಲೆ ಕೊಡಬೇಕೋ ಅನಂತರ ಅವೆಲ್ಲವುಗಳ ಫಲಿತ ಏನೆಂದು ಹೇಳುತ್ತದೆ.

ನಾಲ್ಕನೇ ಕತೆಯಲ್ಲಿ ರಾಮಭಟ್ ಎಂಬ ಬ್ರಾಹ್ಮಣನ ವಿಧವೆ ಸೊಸೆ ಧಾಕು. ಆಕೆ ಗರ್ಭವತಿಯಾಗಿ ಕಷ್ಟಕೋಟಲೆಗಳಿಗೆ ಸಿಲುಕಿ, ಬೊಂಬಾಯಿ ಬಾಟ್ಲಿವಾಲಾ ಆಸ್ಪತ್ರೆಯಲ್ಲಿ ಸೇರಿ ಅಲ್ಲಿ ಅತ್ಯಂತ ನಿಕೃಷ್ಣವಾದ ಸಾವು ಸಾಯುತ್ತಾಳೆ. ಇವೆಲ್ಲ ಆಕೆಗೆ ಶಾರೀರಿಕ ಸಂಪರ್ಕದ ಮೂಲಕ ಬಂದು ಬಿದ್ದಿವೆ.

ಇನ್ನೇನು, ಲೇಖಕ ಇಂತಹ ಘಟನೆಗಳನ್ನೆಲ್ಲ ಬೆಳಕಿಗೆ ತಂದ. ಆದರೆ ಇಂತಹ ನಾಟಕ ಬರೆಯುವುದರಿಂದ ಅವನು ತನ್ನ ತತ್ವವನ್ನೇ ಹೊರಗಿಟ್ಟ. ಜನರು ಅವನು ಯಾಕೆ ಹೀಗೆ ಮಾಡುತ್ತಿದ್ದಾನೋ ಅರ್ಥ ಮಾಡಿಕೊಂಡು, ಅವನನ್ನು ನೋಡಿ ನಗುತ್ತಿದ್ದಾರೆ. ಒಂದು ಗಾದೆ ಇದೆಯಲ್ಲವೇ, "ಬೊಗಸೆ ಮುಚ್ಚಿದಷ್ಟು ಕಾಲ ಅದರಲ್ಲಿ ಲಕ್ಷ ರೂಪಾಯಿಗಳಿವೆ ಎಂದುಕೊಳ್ಳುತ್ತಾರೆ" ಎಂದು. ನಿಜಕ್ಕೂ ಪ್ರತಿ ಮನೆಯಲ್ಲಿ ಒಂದು ಮಣ್ಣಿನ ಒಲೆ ಇರುತ್ತದೆ. ಪ್ರತಿಯೊಂದು ಮನೆಯಲ್ಲಿ ಕತ್ತಲ ಜೊತೆ ಬೆಳಕು ಕೂಡ ಇರುತ್ತದೆ. ಒಬ್ಬ ಸೋದರಿ, ಒಬ್ಬ ತಾಯಿ, ಒಬ್ಬ ಸೊಸೆ, ಒಬ್ಬಳು ಬಾಲವಿಧವೆ ಪ್ರತಿಯೊಂದು ಕುಟುಂಬದಲ್ಲಿ ಇರುತ್ತಾರಾ ಇಲ್ಲವೋ? ನೀವು ಒಬ್ಬರ ಮೇಲೆ ನಿಂದೆ ಹೊರಿಸಿದರೆ ಅದು ಎಲ್ಲರ ಮೇಲೆ ಬೀಳು ವುದಿಲ್ಲವೇ? ಇದರಿಂದ ಉಪಯೋಗವೇನು? ಮನೋರಮ ಜೀವನದಂತೆ ಎಲ್ಲ ಮಹಿಳೆಯರ ಜೀವನವನ್ನು ಉತ್ತಮಪಡಿಸುವುದರಲ್ಲಾಗಲಿ ಅಥವಾ ಪ್ರತಿ ತಾಯಿತಂದೆ ತಮ್ಮ ಹೆಣ್ಣುಮಕ್ಕಳಿಗೆ ಈಡು-ಜೋಡಾದ ಗಂಡಂದಿರನ್ನು ನೋಡುವುದರಲ್ಲಾಗಲಿ ಈ ಪುಸ್ತಕ ಉಪಯೋಗವಾಗಿದೆಯೇ?

ಅಂತಹವು ಯಾವುವೂ ನಡೆಯುವುದಿಲ್ಲ. ಯಾವ ಗಂಡಸೂ "ನಾನು ರಾಮಾರಾವ್‌ನಂತಹ ಮುದುಕನಲ್ಲವೇ, ನಾನು ಗೋಡುಬಾಯಿಯಂತಹ ಸಾಹಸಿಯಾದ ಹುಡುಗಿಯನ್ನು ಮದುವೆ ಯಾದರೆ, ಅವಳು ನ್ಯಾಯಾಲಯದಲ್ಲಿ ವ್ಯಾಜ್ಯಗಳಿಂದ ನನ್ನ ಹೆಸರು, ಕೀರ್ತಿಯ ಜೊತೆ ಆಟವಾಡಲು ತೊಡಗುತ್ತಾಳೆ. ಆದ್ದರಿಂದ ನಾನು ಮುದಿತನದಲ್ಲಿ ಮದುವೆ ಮಾಡಿಕೊಳ್ಳ ಬಾರದು ಎಂದು ಅಂದುಕೊಳ್ಳುತ್ತಿದ್ದಾನಾ! ಮುದಿ ಗಂಡಸರು ಮದುವೆ ಮಾಡಿಕೊಳ್ಳುತ್ತಲೇ ಇರುತ್ತಾರೆ. ಅದು ಅವಮಾನಕ್ಕೆ, ಬಹಿರಂಗವಾಗಿಯಾದರೂ ಆಗದಿದ್ದರೂ ದಾರಿ ಮಾಡುತ್ತದೆ.

ನಿಕೃಷ್ಟರಾದ ಗಂಡಸರನ್ನು ಮದುವೆಯಾಗಿದ್ದರಿಂದಲೇ ಮಹಿಳೆಯರು ಓಡಿ ಹೋಗುತ್ತಾ ರೆಂದು ಕೂಡ ಅಂದುಕೊಳ್ಳಬೇಕಾಗಿಲ್ಲ. ಹಾಗೇನಾದರೂ ಆದರೆ ಕೆಲಸಕ್ಕೆ ಬಾರದ ಮೂರ್ಖರನ್ನು ಮಾಡಿಕೊಂಡ ಹೆಂಗಸರೆಲ್ಲ ಮನೆ ಬಿಟ್ಟು ಹೋಗಿದ್ದಿದ್ದರೆ ಈ ದಿನ ಲೋಕವೆಲ್ಲ ಬೇಕಾಬಿಟ್ಟಿಯಾಗಿ ತಿರುಗುವ ಮಹಿಳೆಯರಿಂದ ತುಂಬಿರುತ್ತಿತ್ತಲ್ಲವೇ?

ಇನ್ನು ಧಾಕೂ ಕತೆಗೆ ಬಂದರೆ ಆಕೆ ಆಸ್ಪತ್ರೆಯಲ್ಲಿ ಸತ್ತು ಹೋಗುವುದು ವಿಚಿತ್ರವೇನೂ ಅಲ್ಲ. ಸಾಯಬೇಕಾದವರು ಎಲ್ಲಿದ್ದರೂ-ಮನೆಯಲ್ಲಾದರೂ ಹೊರಗಾದರೂ ಸಾಯ ಬೇಕಾದ್ದಲ್ಲವೇ! ನಾನು ನಿಮಗೆ ಹೇಳಬೇಕಾದ್ದೇನೆಂದರೆ ಲೇಖಕರೇ ನಿಮ್ಮ ಕತೆ ಮಹಿಳೆ ಯರನ್ನು ಪುರುಷರನ್ನು ಮತ್ತೆ ಯಾವ ತಪ್ಪು ಮಾಡದಂತೆ ಭಯಪಡಿಸುತ್ತದೆ ಎಂದುಕೊಳ್ಳಿರಿ.

ಒಂದು ವೇಳೆ ದುಷ್ಟತನಕ್ಕೆ ರೂಪವೆಂಬುದು ಇದ್ದರೆ ಅದು ನಿಮ್ಮ ಪುರುಷರೇ ಆಗುತ್ತಾರೆ. ಮತ್ತೆ ಮಹಿಳೆಯರಿಗೆ ನೀವೇನು ಹೇಳ್ತೀರಿ? ಎಲ್ಲಿಯೋ ಒಬ್ಬಳು ಅಸಹಜವಾದ ಮಹಿಳೆ, ಬಹಳ ಭಯಂಕರವಾದ ಕೆಲಸ ಮಾಡುವ ಆಕೆ, ನಮ್ಮ ಪೂರ್ವದ ಪೇಶ್ವೆ ಅತ್ತೆ ಆನಂದಬಾಯಿ ಯಂತವಳಿರಬಹುದು. ಆದರೆ ಅಂತಹವರು ಬಹಳ ಕಡಿಮೆ. ವಿಜಯಲಕ್ಷ್ಮಿಯಂತಹ ಒಬ್ಬ ಮಹಿಳೆ ತಪ್ಪು ದಾರಿಯಲ್ಲಿ ಹೋದರೆ ಪ್ರತಿಯೊಬ್ಬ ಮಹಿಳೆಯನ್ನು ದೋಷಿಯಾಗಿಯೇ ನೋಡುತ್ತಾರೆ. ಆದರೆ ಸತ್ಯವೇನೆಂದರೆ ಆಕೆಯಂತಹ ಗುಣಸ್ವಭಾವವುಳ್ಳ ಗಂಡಸರನ್ನು ನೀವು ನೂರಕ್ಕೆ ಐದು ಮಂದಿಯನ್ನು ಕೂಡ ನೋಡಲಾರಿರಿ.

ಒಂದು ವೇಳೆ ಮಹಿಳೆಯರು ದುರ್ಮಾರ್ಗಗಳಲ್ಲಿ ಹೋದರೂ, ಅವರು ನಿಮಗಿಂತಲೂ ಒಳ್ಳೆಯವರೇ. ಮೊಟ್ಟಮೊದಲು ಆಕೆಯನ್ನು ಬಲೆಯಲ್ಲಿ ಹಾಕಿಕೊಳ್ಳುವುದಕ್ಕೆ ನೀವು ಎಲ್ಲ ಬಗೆಯ ಕೆಲಸಗಳನ್ನು ಮಾಡುತ್ತೀರಿ. ಒಂದು ಸಾರಿ ಆಕೆ ನಿಮಗೆ ದಕ್ಕಿದಳೆಂದರೆ, ನಿಮ್ಮನ್ನು ಪೂರ್ತಿಯಾಗಿ ನಂಬಿ, ತಾನು ಮನಃಪೂರ್ವಕವಾಗಿ ಪ್ರೀತಿಸಲು ಆರಂಭಿಸುತ್ತಾಳೆ. ಜಗತ್ತಿನಲ್ಲಿ ಎಲ್ಲಕ್ಕಿಂತಲೂ ಆಕೆಗಿರುವ ದೊಡ್ಡ ಆಭರಣ ಸ್ತ್ರೀಧರ್ಮವನ್ನೇ ಬಿಟ್ಟು, ಆಕೆ ನಿಮಗೆ ಜೀವನವನ್ನು ಅರ್ಪಿಸುತ್ತಾಳೆ. ಆಕೆಗೆ ನೀವು ಮಾಡುವ ಕುತಂತ್ರಗಳೆಲ್ಲ ಹೇಗೆ ಅರ್ಥ ವಾಗುತ್ತವೆ? ಆ ಸಮಯದಲ್ಲಿ ನೀವು ಆಕೆಯ ಗುಲಾಮನಂತೆ ವರ್ತಿಸುತ್ತೀರಿ. ಆಕೆಯ ಮನಸ್ಸಿನಲ್ಲಿ ಸ್ಥಾನವನ್ನು ಗಳಿಸಿಕೊಳ್ಳುವುದಕ್ಕೆ ಆಕೆಯ ಚಪ್ಪಲಿಯನ್ನಾದರೂ ನೀವು ಬಾಯಲ್ಲಿಟ್ಟುಕೊಳ್ಳುತ್ತೀರಿ. ಆಕೆಯ ಮೇಲೆ ನೀವು ತೀವ್ರವಾದ ಪ್ರೀತಿಯನ್ನು ತೋರುತ್ತೀರಿ. ಆದರೆ ಎಷ್ಟು ದಿನ ನಿಮ್ಮ ಪ್ರೀತಿ ನಿಲ್ಲುತ್ತದೆ? ಬಯಕೆಗಳು ತೀರುವವರೆಗೇ ಅಲ್ಲವೆ! ನಿಮ್ಮ ತುಚ್ಛವಾದ ವಾಂಛೆಗಳು ತೀರಿದ ನಂತರ, ಆಕೆ ಗರ್ಭವತಿಯಾದ ಮೇಲೆ, ದುಃಖವೂ, ಜವಾಬ್ದಾರಿಯೂ ಆಕೆಯ ಮೇಲೆ ತಳ್ಳಿ ಮಣ್ಣಿನಹೆಂಟೆ ಅಡ್ಡ ಬಂದಾಗ ಮುಖ ಬಚ್ಚಿಟ್ಟುಕೊಂಡ ಚೇಳಿನಂತೆ, ನೀವು ಎಲ್ಲಿಯೋ ತಲೆ ಮರೆಸಿಕೊಳ್ಳುತ್ತೀರಿ. ಪಾಪ ಜಿಂಕೆ ಮರಿಯಂತೆ, ಪ್ರೇತ ಕಳೆಯಿಂದ ಬೆಳ್ಳಗೆ ಬಿಳಿಚಿಕೊಂಡ ಮುಖದಿಂದ, ಆಕೆ ಹುಲಿಯಂತಹ ಗಂಡಸನ್ನು ಏನು ಮಾಡುತ್ತೀಯ ಎಂದು ಕೇಳುವುದಕ್ಕೆ ಹೋದರೆ ಗೌರವಕ್ಕೆ ಪ್ರತೀಕ ತಾನೇ ಎಂಬಂತೆ ಉತ್ತರ ಹೇಳುತ್ತಾನೆ. "ನಾವೇನು ಮಾಡೋಣವೆಂದು ಕೇಳುವುದರಲ್ಲಿ ಅರ್ಥವೇನಿನ್ನು? ನೀನೇ ಮಾಡಿದೆ. ಮಾಡಿದ್ದಕ್ಕೆ ಫಲಿತಾಂಶವನ್ನು ಅನುಭವಿಸು" ಆಕೆ ಯಾವ ಮುಖದಿಂದ ಸಿಹಿಯಾದ ಮೋಹದ ಮಾತುಗಳನ್ನು ಕೇಳಿದಳೋ, ತಾನು ಯಾವುದನ್ನು ಚಂದಮಾಮನಂತೆ ನೋಡುತ್ತ ಇದ್ದು ಬಿಟ್ಟಳೋ, ಯಾವುದಕ್ಕಾಗಿ ತಾನು ಶರೀರವೂ ಮನಸ್ಸೂ ಅರ್ಪಿಸಿದಳೋ, ಯಾವುದನ್ನು ಆಕೆ ಮನಸ್ಸಿನ ಆಳದಿಂದ ಪ್ರಿತಿಸಿದಳೋ, ಅದೇ ಆ ಮುಖವೇ ಈಗ ಆಕೆಯ ಹೃದಯಕ್ಕೆ ನಾಟಿಕೊಳ್ಳುವಂತೆ ಬಾಣಗಳಂತಹ ಮಾತುಗಳಿಂದ ನೋಯಿಸುತ್ತಿದೆ. ಆಕೆಗೆ ಹೇಗಿರುತ್ತದೆ?

ಆದರೆ ಪಾಪ ಆ ಮಹಿಳೆ ಏನು ಮಾಡಬಲ್ಲಳು? ಕೊನೆಗೆ ನಿರಾಶೆಯಿಂದ ಆಕೆ ಅವನನ್ನು ಬಿಟ್ಟುಬಿಡುತ್ತಾಳೆ. ಮಾನ ಉಳಿಸಿಕೊಳ್ಳುವುದಕ್ಕೆ ಗರ್ಭಪಾತ ಮಾಡಿಸಿಕೊಂಡು, ತಾನು

ಮಾಡಿದ ಕೆಲಸಕ್ಕೆ ಎಲ್ಲ ಬಗೆಯ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾಳೆ. ಇಂಗ್ಲಿಶ್ ರಾಜ್ಯ ಇವುಗಳೆಲ್ಲದರ ಬಗ್ಗೆ ಮಾಡಿದ್ದೇನು? ಸಾಕ್ಷಿಗಳಿಲ್ಲದೆ ಇವುಗಳ ಬಗ್ಗೆ ಏನು ಮಾಡುವುದಿಲ್ಲ. ಆದರೆ ಇಂತಹ ಸೂಕ್ಷ್ಮ ವಿಷಯಕ್ಕೆ ಸಾಕ್ಷಿಗಳು ಸಿಗುವುದಿಲ್ಲವಲ್ಲ! ಸರ್ಕಾರವನ್ನು ಕೂಡ ಈ ವಿಷಯದಲ್ಲಿ ತಪ್ಪು ಎಂದು ಹೇಳಬೇಕಾಗುತ್ತದೆ. ಲಂಚದ ವಿಷಯದಲ್ಲಿ ಅದು ಒಂದು ಸಾರಿ ತೆಗೆದುಕೊಂಡವರನ್ನು ಎರಡು ಸಾರಿ ಕೊಟ್ಟವರನ್ನು ಶಿಕ್ಷಿಸುತ್ತದೆ. ಈ ವಿಷಯ ದಲ್ಲಿ ಕೂಡ ಖಚಿತವಾದ ಕಾನೂನು ಮಾಡಿ, ಇಬ್ಬರನ್ನೂ ಶಿಕ್ಷಿಸುತ್ತ ಮಹಿಳೆಯನ್ನು ಒಂದು ಸಾರಿ ಪುರುಷರನ್ನು ಎರಡು ಸಾರಿ ಶಿಕ್ಷಿಸಬಹುದಲ್ಲವೇ! ಹಿಂದಿನ ದಿನಗಳಲ್ಲಿ ರೋಮನ್ನರು, ಗ್ರೀಕರು ಇಂತಹ ವ್ಯಾಜ್ಯಗಳಿಗೆ ಬಹಳ ಖಚಿತವಾದ ಶಿಕ್ಷೆ ನೀಡುತ್ತಿದ್ದರು. ಆದ್ದರಿಂದ ಸರ್ಕಾರ ಈ ಸಂಗತಿಯನ್ನು ಜಾಗರೂಕತೆಯಿಂದ ಪರಿಶೀಲಿಸಬೇಕು. ಗಂಡಸರು ಈ ವಿಷಯದ ಬಗ್ಗೆ ಸುಮ್ಮನೆ ಒದರುತ್ತ ಇದ್ದರೆ, ಸರ್ಕಾರ ಅವರನ್ನು ಇನ್ನಷ್ಟು ಶಿಕ್ಷಿಸಿ ಅವರ ಮುಖದ ಮೇಲೆ ದೊಡ್ಡ ಮುದ್ರೆ ಹಾಕಬೇಕು. ಅದರಿಂದ ಅವರ ಸೋದರರೆಲ್ಲ ಭಯಪಟ್ಟು ಮತ್ತೆ ಇಂತಹ ವ್ಯಾಜ್ಯದ ಗೊಡವೆಗೆ ಹೋಗಲಾರರು. ಮತ್ತೆ ಆ ದಾರಿಯಿಲ್ಲದ ಮಹಿಳೆ ಬಹಳ ಸಾಧುವಾಗಿ, ವಿಧೇಯಗಳಾಗಿ, ಕರುಣೆ ತೋರಿರೆಂದು ಅಳುತ್ತಾಳೆ ತನ್ನ ಪಾಪವನ್ನೂ ಕಣ್ಣೀರಿನಿಂದ ತೊಳೆದು ಹಾಕಬೇಕೆಂದು ಪ್ರಯತ್ನಿಸುತ್ತಾಳೆ. ಆಕೆ ತನ್ನ ದೋಷಗಳನ್ನು ಮೂಟೆ ಕಟ್ಟಿಕೊಂಡು ಸೆರೆಮನೆಗೋ, ಇನ್ನೊಂದು ಕಡೆಗೋ ಹೋಗಿ ಎಲ್ಲರ ಛೀತ್ಕಾರಗಳನ್ನು ಸಹಿಸುತ್ತ ದಿನಗಳನ್ನು ಕಳೆಯುತ್ತಾಳೆ. ಕೆಲವು ಮಂದಿ ಅಬಲೆಯರು ತಮ್ಮ ಪ್ರಾಣವನ್ನು ತಾವೇ ತೆಗೆದುಕೊಳ್ಳುತ್ತಾರೆ. ಮತ್ತೆ ಕೆಲವರು ಮನೆ, ಕುಟುಂಬವನ್ನು ಬಿಟ್ಟು ಎಲ್ಲಿಗೋ ದೂರ ಹೊರಟು ಹೋಗುತ್ತಾರೆ. ನಿಮಗಿಂತ ಹಾವುಗಳು ಕೂಡ ಒಳ್ಳೆಯವೇ. ನೀವು ಹಾವನ್ನು ಹೊಡೆದರೆ ಸತ್ತು ಹೋಗುತ್ತದೆ. ಆದರೆ ನಿಮ್ಮ ವಿಷ ಶರೀರದಲ್ಲಿದ್ದು ಅದನ್ನು ನಾನಾ ಹಿಂಸೆಗಳನ್ನು ಕೊಟ್ಟು, ಕೊನೆಗೆ ಅದು ನಿಮ್ಮನ್ನು ಸಾಯಿ ಸುತ್ತದೆ. ಮತ್ತೆ ಹಾವುಗಳಿಗಿಂತಲೂ ಭಯಂಕರವಾಗಿ ಮನುಷ್ಯರನ್ನು ನೋಯಿಸುವುದು ಹೀಗೆಯೇ. ಮತ್ತೆ ಯಾರವು, ಯಾರ ಮನಸ್ಸು ದೊಡ್ಡವು? ನೀವು ಮಹಿಳೆಯರಿಗಾಗಿ, ಅವರು ನಿಮಗಾಗಿ ಪಟ್ಟ ಕಷ್ಟಗಳನ್ನು ಪಡಬಲ್ಲಿರಾ?

ನಿಮ್ಮಿಂದ ನಮಗಂತಹ ಕರುಣೆ, ಕನಿಕರ ಯಾವತ್ತೂ ಸಿಗುವುದಿಲ್ಲ. ಈ ದಿನ ನೀವು ಒಬ್ಬ ಮಹಿಳೆಯ ಬದುಕನ್ನು ನಾಶ ಮಾಡುತ್ತೀರಿ, ಆಕೆಯನ್ನು ಊರಿನಿಂದ ಹೊರಗೋಡಿ ಸುತ್ತೀರಿ. ನಾಳೆ ಇನ್ನೊಬ್ಬ ಮಹಿಳೆಯ ಹಿಂದೆ ಬೀಳುತ್ತೀರಿ. ಮೊದಲು ಆಕೆಯನ್ನು ಕನಸಿನಲ್ಲೂ ಕಂಡಿರಲಾರಿರಿ. ಆದರೆ ಸ್ತ್ರೀ ಪ್ರೇಮವೆಂಬುದು ಸಮುದ್ರದಷ್ಟು ಆಳವಾದುದು. ತಾನು ಪ್ರೀತಿಸಿದ ವ್ಯಕ್ತಿಯ ಜೊತೆಯಲ್ಲೇ ಜೀವನಾದ್ಯಂತ ಆ ನಂತರ ಕೂಡ ಇರುತ್ತಾಳೆ. ಅವನು ಆಕೆಯನ್ನು ಕಾಡಿಗೆ ಹೊಡೆದೋಡಿಸಬಹುದು. ಆದರೆ ಆಕೆ ಯಾವಾಗಲೂ ಅವನನ್ನೇ ಸಮರ್ಥಿಸುತ್ತಾಳೆ. ಮಹಿಳೆಯರ ಹೃದಯ ಮಾತ್ರ ಆರ್ದ್ರವಾದ ಪ್ರೀತಿಯಿಂದ ತುಂಬಿರುತ್ತ ವೆಂಬುದು ನಿಜ.

ಹೆಣ್ಣಿನ ಮೂಲಕ ನಾಶವಾಗಿ ಮನೆಯಿಂದ ಹೊರದೂಡಲಾದ ಗಂಡಸರು ಬಹಳ ಕಡಿಮೆ ಸಂಖ್ಯೆಯಲ್ಲಿದ್ದಾರಾಗಲಿ ಅಂತಹ ಹೆಂಗಸರು ಎಷ್ಟು ಮಂದಿಯಿದ್ದಾರೋ ಹೇಳಲಾರೆವು. ನೀವೆಷ್ಟು ನಿರ್ದಯರಾದ ಚತುರರೋ, ಎಷ್ಟು ದೊಡ್ಡ ದರೋಡೆಕೋರರೋ, ನೀವೇನೆಂದರೂ ಕಲ್ಲಿನಂತೆ ಆ ಹೊಡೆತ ನಮಗೇ ಬಂದು ಬೀಳುತ್ತದೆ. ನೀವೊಂದು ಕಬ್ಬಿನ ತೋಟದಲ್ಲಿ ನಡೆದು ಹೋಗಬಹುದು. ಆದರೆ ಅದರಲ್ಲಿ ಒಂದು ಗರಿ ಕೂಡ ನಿಮ್ಮ ಶರೀರವನ್ನು ತಾಕುವುದಿಲ್ಲ. ನೀವು ದಿನವೂ ದೊಡ್ಡ ಸಭೆ ಏರ್ಪಡಿಸಿ, ಭಾಷಣ ಬಿಗಿದು, ಉಳಿದವರಿಗೆ ಏನು ಮಾಡಬೇಕೋ, ಏನು ಮಾಡಬಾರದೋ ಹೇಳುತ್ತಿರುತ್ತೀರಿ. ನಿಮ್ಮ ವಿಷಯದಲ್ಲಿ ಮಾತ್ರ ನೀವು ಅರಿವಿರುವ ಮೂರ್ಖರು. ಒಂದು ದೀವಿಗೆ ಉಳಿದವರೆಲ್ಲರಿಗೆ ಬೆಳಕನ್ನು ನೀಡುತ್ತದೆ. ಆದರೆ ಅದರ ಹಿಂದೆಯೇ ಕತ್ತಲಿರುತ್ತದೆ. ನೀವೂ ಹಾಗೆ ಇರುತ್ತೀರಿ, ನೀವೇ ನಿಮ್ಮ ದುಷ್ಟತನವನ್ನು ನೋಡಿಕೊಂಡರೆ ನಿಮ್ಮ ಎದೆ ಬಿರಿದು ಸತ್ತು ಹೋಗುತ್ತೀರಿ.

ನೀವೇನೋ ನಿಮ್ಮ ತಲೆಯಲ್ಲಿರುವ ತಿಳಿವಳಿಕೆಯನ್ನೂ ಬಳಸಲಾರಿರಿ. ಒಂದು ಕಡೆಯಿಂದ ಇನ್ನೊಂದು ಕಡೆಗೆ ಅಲೆಯುತ್ತ ಎಲ್ಲ ಬಗೆಯ ಪುಸ್ತಕಗಳನ್ನು ಓದುತ್ತ ಇರುತ್ತೀರಿ. ಬಹಳ ವಿದ್ಯೆ ಕಲಿತುಕೊಂಡು ನೀವು ಯಾವ ಪಾತ್ರವನ್ನಾದರೂ ಹಾಕಬಲ್ಲಿರಿ, ಯಾವ ಇಕ್ಕಟ್ಟಿನಿಂದಾದರೂ ಹೊರಗೆ ಬರಬಲ್ಲಿರಿ-ಇದೆಲ್ಲ ಬಹಳ ಸುಲಭವಾಗಿ ಮಾಡಬಲ್ಲಿರಿ. ಮತ್ತೆ ಪಾಪ ಈ ಹೆಣ್ಣುಗಳು ಯಾವಾಗಲೂ ಮನೆಯಲ್ಲೇ ಇರುತ್ತಾರೆ. ಇವರಿಗೇನು ಲೋಕ ಜ್ಞಾನವಿದೆ. ಅಡುಗೆ ಮನೆಯಲ್ಲಿ ಒಲೆಗೂ ಬಾಗಿಲಿಗೂ ನಡುವೆ ಅವರು ಕಲಿತುಕೊಂಡಿದ್ದು ಬಿಟ್ಟು. ಇನ್ನೊಂದು ವಿಷಯವೇನೆಂದರೆ ಹೆಂಗಸರು ಅಂಡಲೆಯುವವರಲ್ಲ, ನಿಮ್ಮಂತೆ ಒಣಗಿದ ಮರದ ಕೊರಡೂ ಅಲ್ಲ. ದೇವರು ಅವರ ಮೇಲೆ ಜೀವನದ ಭಾರವನ್ನೆಲ್ಲ ಹಾಕುವುದರಿಂದ ಅವರು ಸುಲಭವಾಗಿ ಮೋಸಗೊಳ್ಳುತ್ತಾರೆ. ಮತ್ತೆ ನಮ್ಮಲ್ಲಿ ಯಾರು ನಿಜಕ್ಕೂ ದುಷ್ಟತನದಲ್ಲಿ ಮುಳುಗಿ ತೇಲುತ್ತಿದ್ದಾರೆ?

ಇನ್ನು ಎಂಟನೆಯ ವಿಷಯ : 'ಸ್ವರ್ಗದ ಹಾದಿಯನ್ನು ನಾಶ ಮಾಡುವವರು, ಯಮನ ನಗರಕ್ಕೆ ಬಾಗಿಲಿನಂತವರು'. ನೀವಿಂತಹ ಬಿರುದನ್ನು ಕೊಡುವ ಮಹಿಳೆಯರಾರು? ನೀವು ಯಾರ ಗರ್ಭದಲ್ಲಿ ಜೀವ ಪಡೆದಿರಿ? ಜೀವವನ್ನು ಸೆಳೆಯುವ ನಿಮ್ಮ ಭಾರವನ್ನು ಒಂಬತ್ತು ತಿಂಗಳು ಯಾರು ಹೊತ್ತರು? ನಿಮ್ಮನ್ನು ಕಣ್ಣಲ್ಲಿ ದೀಪದಂತೆ ಕಂಡು ಕಣ್ಣಿಟ್ಟುಕೊಂಡ ದೇವತೆ ಯಾರು? ನಿಮ್ಮನ್ನು ತನ್ನ ಕೈಯಲ್ಲಿ ಹೊತ್ತು ಬೆಳೆಸಿದ್ದು ಯಾರು? ಹಸುಗೂಸಿನಿಂದ ಬೆಳೆಸಿ ದೊಡ್ಡದು ಮಾಡಿದ್ದು ಯಾರು? ನಿಮ್ಮನ್ನು ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪೋಷಿಸಿ ಕಾಪಾಡಿದ್ದು ಯಾರು? ಇವೆಲ್ಲವನ್ನು ಮಾಡಿದ್ದು ಯಾರು, ನಿಮ್ಮ ತಾಯಿಯಲ್ಲದೆ? ಪ್ರತಿಕ್ಷಣ ನಿಮ್ಮ ಒಳಿತು ಕೆಡಕುಗಳನ್ನು ನೋಡುತ್ತ, ನೀವೇ ತನ್ನ ಸಂತೋಷಕ್ಕೆ, ಹೆಮ್ಮೆಗೆ ಕಾರಣವೆಂದು ಕೊಂಡು, ನಿಮ್ಮನ್ನು ಅಣ್ಣಯ್ಯ ಎಂದು ಪ್ರೀತಿಯಿಂದ ಯಾವಾಗಲೂ ಕರೆದದ್ದು ಯಾರು ನಿಮ್ಮ ಸೋದರಿ ಅಲ್ಲದೆ? ನಿಮ್ಮ ಹೆಂಡತಿ ಕಷ್ಟಸುಖಗಳಲ್ಲಿ ನಿಮಗೆ ಜತೆಯಾಗಿದ್ದು, ನಿಮ್ಮ ಲೌಕಿಕ ಜೀವನದ ಆಸ್ಥಾನದಲ್ಲಿ ಮುಖ್ಯಮಂತ್ರಿಯಾಗಿದ್ದು, ನಿಮ್ಮನ್ನು ಮನಸಾರೆ

ಪ್ರೀತಿಸಿದ ಒಬ್ಬಳೇ ವ್ಯಕ್ತಿ ಆಕೆಯಲ್ಲವೇ! ಅವರೆಲ್ಲ ಮಹಿಳೆಯರೇ ಅಲ್ಲವೇ, ಅಲ್ಲವೆಂತೀರಾ? ಅಲ್ಲದೆ ಹೋದರೆ ಅವರು ಬೇರೆ, ಅವರು ಬೇರೆ ಜಾತಿಗೆ ಸೇರಿದ ಮಹಿಳೆಯರೇ? ನೀವು ಮಹಿಳೆಯರ ಬಗ್ಗೆ ಮಾತಾಡಲು ಆರಂಭಿಸಿದರೆ ಅವರೆಲ್ಲರ ಬಗ್ಗೆ ಮಾತಾಡಬೇಕಲ್ಲವೇ. ನೀವು ಮಹಿಳೆಯರು ಕೊಡಲಿಗಳಂತವರು, ಎಲ್ಲ ಕುತಂತ್ರಗಳಿಗೆ ಪಾತ್ರರೆಂದು, ದುಷ್ಟತನಕ್ಕೆ ಸಂತರೆಂದು, ಸ್ವರ್ಗದ ಹಾದಿಯನ್ನು ನಾಶ ಮಾಡುವರೆಂದು ಅನ್ನುತ್ತೀರಿ.

ನೀವು ಮಹಿಳೆಯರನ್ನು ಇಂತಹ ಹೆಸರಿನಿಂದ ಕರೆಯುತ್ತಿದ್ದರೆ ನಾವು ನಿಮ್ಮನ್ನು ಏನೆಂದು ಕರೆಯಬೇಕೆನ್ನುತ್ತೀರಿ? ತಾಯಿಯನ್ನು ದ್ವೇಷಿಸುವವರೆಂದಾ? ಮಾತೃಮೂರ್ತಿ ಮೇಲೆಯೇ ಅಪನಿಂದೆ ಹಾಕುವವರೆಂದಾ? ನೀವು ಸನ್ಯಾಸ ಸ್ವೀಕರಿಸಿದರೂ ತಾಯಿಯನ್ನು ಗೌರವಿಸಬೇಕು, ಆಕೆಯ ಆಜ್ಞೆಯನ್ನು ಪಾಲಿಸಬೇಕು. ಮಕ್ಕಳಿಗೆ ಮೂವರೇ ದೇವರಿದ್ದಾರೆ. ತಾಯಿ, ತಂದೆ, ಗುರು. ಪುಂಡಲೀಕನನ್ನು ನೋಡಿರಿ. ತಾಯಿ ತಂದೆಯರಿಗೆಷ್ಟು ಸೇವೆ ಮಾಡಿದನೆಂದರೆ ಭಗವಂತನೇ ಅದನ್ನು ನೋಡುವುದಕ್ಕೆ ಇಳಿದು ಬಂದ. ಈ ದಿನ ಅವನು ಅದೇ ಸ್ಥಾನದಲ್ಲಿ ನಿಂತಿದ್ದಾನಲ್ಲವೇ! ಅವನು ಈಗ ನೀವು ನಿಮ್ಮ ತಾಯಂದಿರನ್ನು ಎಷ್ಟು ಗೌರವಿಸುತ್ತಿದ್ದೀರೋ ನೋಡಿದ್ದಾನಾದ್ದರಿಂದ ಅವನ ಶಕ್ತಿಯೆಲ್ಲ ನಿರ್ವೀರ್ಯವಾಗಿ ಹೋಗಿ, ನೀವು ಹತ್ತಿರ ಹೋಗಿ ಅವನ ಕಾಲು ಮುರಿದರೂ, ತನ್ನ ದಿವ್ಯವಾದ ಶಕ್ತಿ ತೋರಿಸಲಾರದ ಸ್ಥಿತಿಯಲ್ಲಿದ್ದಾನೆ. ಅವನು ಹಾಗೆ ಶಬ್ದ, ಚಲನೆ ಇಲ್ಲದ ಸ್ಥಿತಿಯಲ್ಲಿ ಕುಳಿತುಬಿಟ್ಟಿದ್ದಾನೆ. ಅವನು ಅದ್ಭುತಗಳನ್ನು ಮಾಡುವ ಶಕ್ತಿಯನ್ನು ಕಳೆದುಕೊಳ್ಳದೆ ಹೋದರೂ ನಿಕೃಷ್ಟವಾಗಿ ತಾಯಿಯನ್ನು ದ್ವೇಷಿಸುವವರ ಗೊಡವೆಗೆ ಹೋಗಿ, ಅವನ ಮುಖ ನೋಡುವುದಿಲ್ಲ. ಅಂತಹವನನ್ನು ಮುಟ್ಟಿಕೊಂಡರೆ ಸ್ವಾಮಿ ತಾನು, ತಾನು ಹಾಕಿಕೊಂಡ ಬಟ್ಟೆಗಳೊಂದಿಗೆ ಮಡಿಸ್ನಾನ ಮಾಡ ಬೇಕಾದ್ದೇ. ಅವನ ದಿವ್ಯಶಕ್ತಿಗಳೇ ಅಂತಹ ಚಂಡಾಲನ ಅನುಭವಕ್ಕೆ ಬಂದರೆ ಮೈಲಿಗೆ ಯಾಗುತ್ತದೆ. ಮೇಲಾಗಿ ಅವನಿಗೆ ಗೊತ್ತಲ್ಲ ದುಷ್ಟರಿಗೆ ಸರಿಯಾದ ಶಿಕ್ಷೆ ಯಮನ ಕೈಯಲ್ಲಿಯೇ ಇದೆಯೆಂದು. ದೇವರೇ ಅಲ್ಲಿ ಕ್ಷಮಾಭಿಕ್ಷೆ ಕೋರಬೇಕು. ಬೀರಬಲ್ ಕತೆಯಲ್ಲಿ ಚಕ್ರವರ್ತಿ ಅವನನ್ನು, "ಬೀರಬಲ್ ನೀನು ನನಗೆ ಇದನ್ನು ಹೇಳು, ದೇವರೆಲ್ಲಿದ್ದಾನೆ, ಅವನೆಲ್ಲಿ ಜೀವಿಸುತ್ತಾನೆ, ಏನು ತಿನ್ನುತ್ತಾನೆ?" ಎಂದು ಕೇಳಿದ. ಬೀರಬಲ್ ಅದಕ್ಕೆ ಉತ್ತರವಾಗಿ, "ಪ್ರಭು! ದೇವರು ನಿಮಗೆ ಬಹಳ ಹತ್ತಿರದಲ್ಲಿದ್ದಾನೆ. ಅವನೆಂದೂ ಪ್ರಾಮಾಣಿಕ ವಾಗಿರುವವರಿಗೆ ಹತ್ತಿರವಾಗಿರುತ್ತಾನೆ. ಅವನಿಗೆ ಆಹಾರ, ಸಹನೆ, ಕ್ಷಮೆ ಎಂಬುವು ಎರಡೇ" ಎಂದು ಹೇಳಿದ. ಅವನು ಪ್ರಪಂಚವನ್ನು ಗಂಭೀರವಾಗಿ ಗಮನಿಸುತ್ತಾ ಅದರಲ್ಲಿನ ಸಮಸ್ತ ಪಾಪಗಳನ್ನು ಕ್ಷಮಿಸುತ್ತ ಇರುತ್ತಾನೆಂದು ಅದರ ಅರ್ಥ. ಹೀಗೆ ಮಾಡದೆ ಅವನು ಚಿಕ್ಕವು, ದೊಡ್ಡವು ಪ್ರತಿಯೊಂದು ದೋಷವನ್ನು ದಂಡಿಸುತ್ತ ಹೋದರೆ ಏನಾಗುತ್ತದೆ? ನೂರಾರು, ಸಾವಿರಾರು ಜನ ಅವನ ಮುಂದೆ ಹೋಗುವ ನಿಮ್ಮ ಸೋದರರನ್ನು ಪ್ರತಿಕ್ಷಣ ವಿಚಾರಣೆ ಮಾಡುತ್ತ ಒಂದು ದಿನ ಗುಮಾಸ್ತನಾಗಿ ಮತ್ತೊಂದು ದಿನ ನ್ಯಾಯಾಧಿಕಾರಿಯಾಗಿ, ಇನ್ನೊಂದು ದಿನ ಕಾರಾಗೃಹದ ಅಧಿಕಾರಿಯಾಗಿ, ಮತ್ತೊಂದು ದಿನ ಸಿಪಾಯಿಯಾಗಿ, ಸೈನ್ಯಾಧಿಕಾರಿಯಾಗಿ

ಅವರೆಲ್ಲರಿಗಾಗಿ ಸಾಕ್ಷಿಗಳನ್ನು ಕೂಡಿಸುತ್ತ, ಉಳಿದ ಕೆಲಸಗಳನ್ನು ಮಾಡುತ್ತ ಕಳೆಯಬೇಕಾಗಿ ಬರುತ್ತದೆ. ಅವನಿಗೆ ಗೊಲ್ಲಭಾಮೆಯರ ಜೊತೆ ಕಾಲಕ್ಷೇಪ ಮಾಡುವುದಕ್ಕೆ, ರಾಧ, ಚಂದ್ರಾವಳಿ ಉಳಿದ ಗೋಪಿಕೆಯರೊಂದಿಗೆ ಸರಸಸಲ್ಲಾಪಕ್ಕೆ ಸಮಯವಿರುವುದಿಲ್ಲ. ಅಷ್ಟೇ ಅಲ್ಲವೇ!

ಯಾರಾದರೂ "ಅಗೋ ಅವನ ತಾಯಿ ನರಕಕ್ಕೆ ಬಾಗಿಲಿನಂತವಳು" ಎಂದರೆ ನಿಮಗೆ ಹೇಗೆನಿಸುತ್ತದೆ? ಇಲ್ಲದೆ ಹೋದರೆ ನಿಮ್ಮ ಅಕ್ಕನನ್ನು ತೋರಿಸಿ, "ಅಗೋ ಅವಳ ಅಕ್ಕ, ಆಕೆ ಕುಲ್ಲು ಕುತಂತ್ರಕ್ಕೆ ಆಗರ" ಎಂದರೆ! ಇಲ್ಲದೆ ಹೋದರೆ ನಿಮ್ಮ ಹೆಂಡತಿಯನ್ನು ತೋರಿಸಿ "ಅವನಿದ್ದಾನೆ ನೋಡಿದ್ದೀರಾ? ಅವನ ಹೆಂಡತಿ ಸುಗುಣಗಳ ವೃಕ್ಷವನ್ನು ಕತ್ತರಿಸಿ ಹಾಕುವ ಕೊಡಲಿಯಂತವಳು" ಎಂದರೆ, ನೀವು ಕಿಮಕ್ಕೆನ್ನದೆ ಕುಳಿತುಕೊಂಡು ಆ ದೂಷಣೆಗಳನ್ನು ಕೇಳುತ್ತೀರಾ? ಓ ಮೂರ್ಖರೇ! ನಿಮ್ಮ ತಾತಂದಿರು ಯಾರೂ ಸ್ವರ್ಗವನ್ನು ಕೂಡ ನೋಡಲಿಲ್ಲ. ಆದರೆ ನೀವು ಅಲ್ಲಿಗೆ ಹೋಗೋಣವೆಂದುಕೊಳ್ಳುತ್ತಿದ್ದೀರಾ? ನಿಮ್ಮನ್ನು ಸ್ವರ್ಗಕ್ಕೆ ಬರಗೊಡದಿದ್ದರೂ ಸರಿ ನೀವೊಬ್ಬ ಮಹಿಳೆಗಾದರೂ ಧೈರ್ಯ ಹೇಳಿದರೆ ಅದೇ ಒಳ್ಳೆಯ ಕೆಲಸ. ನೀವು ಮಾಡುವ ಕೆಟ್ಟ ಕೆಲಸಗಳೆಲ್ಲಕ್ಕೂ ಮಹಿಳೆಯ ಕಾರಣದಿಂದಲೇ ಎಂದುಕೊಂಡರೆ ಸರಿ, ದೋಷ ಅವರ ಮೇಲೆಯೇ ಹಾಕಿರಿ. ಆದರೆ ನಿಜಕ್ಕೂ ನಡೆಯುವುದು ಅದಲ್ಲ. ನೀವು ಸತ್ತು ಹೋಗುವ ದಿನದವರೆಗೂ ಒಬ್ಬ ಹೆಣ್ಣಿನ ಮುಖವನ್ನೇ ನೋಡುತ್ತ ಇರಿ, ಆದರೂ ಅದು ನಿಮ್ಮನ್ನು ಅಸಂತೃಪ್ತರನ್ನಾಗಿಯೇ ಉಳಿಸುತ್ತದೆ. ನಿಮ್ಮಲ್ಲಿ ಪ್ರತಿಯೊಬ್ಬರೂ ಹಾಗೆಯೇ. ಅದೇ ದೋಷದಿಂದ ಕೂಡಿದ್ದೀರಿ. ಆದರೂ ನೀವೆಷ್ಟು ಆನಂದವನ್ನು ಅನುಭವಿಸುತ್ತೀರಿ?

ಇನ್ನು ಒಂಬತ್ತನೆಯ ಅಂಶ : ಮಹಿಳೆಯರೇ ಎಲ್ಲ ಬಗೆಯ ಮೋಸಗಳಿಗೆ ಆಗರ. ನೀವು ಈ ವಿಷಯದಲ್ಲಿ ನಿಮ್ಮನ್ನೇ ಬಣ್ಣಿಸುತ್ತಿದ್ದೀರೇನೋ! ಮಹನೀಯರೆ! ನಿಮ್ಮಷ್ಟು ಕುತಂತ್ರ ತುಂಬಿದವರು, ನೀವು ಭೂಮಿಯಲ್ಲಿ ಪಾತಾಳದವರೆಗೆ ಹುಡುಕಿದರೂ ಯಾರೂ ಕಾಣಿಸುವುದಿಲ್ಲ. ಮಹಿಳೆಯರಿಗೆ ನೀವೆಂದರೆ ತಮ್ಮ ಪ್ರಾಣಕ್ಕಿಂತ ಹೆಚ್ಚು ಎಂಬುದು ಅಲ್ಲವೆನ್ನಲಾರರಲ್ಲವೇ! ಒಂದು ಸಾರಿ ಹೆಣ್ಣಿನ ಮನಸು ಯಾರ ಮೇಲಾದರೂ ನೆಲೆಸಿದರೆ ಅದಿನ್ನು ಚಲಿಸುವುದಿಲ್ಲ. ಆದರೆ ನಿಮ್ಮ ಗಂಡಸರು ಜೇನುಹುಳುವಿನಂತವರು. ಒಂದು ಹೂವಿನಿಂದ ಮತ್ತೊಂದು ಹೂವಿನ ಮೇಲೆ ತಿರುಗುತ್ತಲೇ ಇರುತ್ತಾರೆ. ಮಹಿಳೆಯರು ಈ ವಿಷಯದಲ್ಲಿ ಎಷ್ಟು ಭಿನ್ನವಾಗಿ ಇರುತ್ತಾರೋ ನೀವೇ ಯೋಚಿಸಿರಿ.

ಮನಸಾ ವಾಚಾ ನೀವೇ ಸರ್ವಸ್ವವೆಂದುಕೊಳ್ಳುವ ಒಂದು ಹೆಣ್ಣನ್ನು ಪಕ್ಕದಲ್ಲೇ ಇಟ್ಟುಕೊಂಡು ನಿಮ್ಮ ಕಣ್ಣು ಎರಡನೇ ಹೆಣ್ಣಿನ ಮೇಲೆ ಬೀಳುತ್ತದೆ. ಮೂರನೇ ಹೆಣ್ಣಿನ ಜೊತೆ ಹೋಗಿ ಬರುವುದು. ಜೋರಾಗಿ ನಡೆದ ಮೇಲೆ, ನೀವು ನಾಲ್ಕನೇ ಹೆಣ್ಣಿನ ಹಿಂದೆ ಬೀಳುತ್ತೀರಿ. ಬ್ರಹ್ಮನು ಸ್ತ್ರೀಯರ ಜೀವನದ ಬಗ್ಗೆ, ಪುರುಷರ ಭವಿಷ್ಯತ್ತಿನ ಬಗ್ಗೆ ಹೇಳಲಾರನೆಂದು ಹೇಗನ್ನುತ್ತೀರಿ ನೀವು, ನಿಮ್ಮ ಮನಸ್ಸುಗಳೇ ಬಹಳ ಚಂಚಲವಾಗಿರುವಾಗ? ನಿಜಕ್ಕೂ ಭಗವಂತ ಮನುಷ್ಯ ಹುಟ್ಟಿದಾಗಲೇ ಅವನ ಯೋಗ ಒಳ್ಳೆಯದೋ ಕೆಟ್ಟದೋ ಹಣೆಯಲ್ಲಿ

ಬರೆಯುತ್ತಾನೆ. ಆದರಿಂದ ಬ್ರಹ್ಮನಿಗೇನು ಕೆಲಸ. ಗಡಿಗೆ ಮಾಡಿ ಅವುಗಳಿಗೆ ಒಂದು ರೂಪ ಕೊಡುವುದು ಕುಂಬಾರನೇ ಅಲ್ಲವೇ! ಒಳ್ಳೆಯದೋ ಕೆಟ್ಟದ್ದೋ ಮುದ್ರೆ ಹಾಕುವುದು ನಾರಾಯಣನ ಕೈಯಲ್ಲೇ ಇದೆ. ಒಂದು ಸಾರಿ ಆ ಅಕ್ಷರಗಳು ಒಬ್ಬರ ಹಣೆಯ ಮೇಲೆ ಬರೆದರೆಂದರೆ, ದೇವರು ಕೂಡ ಅವನ್ನು ಬದಲಾಯಿಸಲಾರ ನೀವ್ಯಾರು ಸತ್ಯವೇನೆಂದು ಹೇಳುವುದಕ್ಕೆ?

ಪಾಂಡವರು ಶ್ರೀಕೃಷ್ಣನಿಗೆ ಬಹಳ ಪ್ರಿಯವಾದ ಸಹಚರರು. ವಿರಾಟನ ಮನೆಯಲ್ಲಿ ಮಾರುವೇಷದಲ್ಲಿದ್ದು ಮತ್ತೆ ಅವರ್‍ಯಾಕೆ ಕಸ ಗುಡಿಸುವ, ನೆಲ ಸ್ವಚ್ಛ ಮಾಡುವ ಮೊದಲಾದ ಕೆಲಸಗಳನ್ನು ಮಾಡುತ್ತ ಇರಬೇಕಾಗಿ ಬಂತು? ಅರ್ಜುನನು ಇಂದ್ರನ ಪ್ರತಿರೂಪವಾದ ಶಂಕರನನ್ನು ಕೂಢ ಯುದ್ಧದಲ್ಲಿ ಸೋಲಿಸಿದ. ಮತ್ತೆ ಅವನು ಬೃಹನ್ನಳೆ ರೂಪ ಧರಿಸಿ ಹುಡುಗಿಯರ ಜೊತೆ ಅಂತಃಪುರದಲ್ಲಿ ಸರಸ ಸಲ್ಲಾಪಗಳು ನಡೆಸಲಿಲ್ಲವೇ? ಹೆಂಗಸರ ಬದುಕು ಹೀಗೇ ಇರುತ್ತವೆ. ಆದರೆ ಮಹಿಳೆಯರು ನಿಮ್ಮಂತೆ ಒಬ್ಬ ವ್ಯಕ್ತಿಗೆ ತಮ್ಮ ಕೈಯನ್ನು ನೀಡುತ್ತ ಇನ್ನೊಬ್ಬ ವ್ಯಕ್ತಿಯನ್ನು ಒದೆಯಲು ಆರಂಭಿಸುವುದಿಲ್ಲ. ಒಬ್ಬ ಸ್ತ್ರೀ ಒಬ್ಬ ಪುರುಷನಿಗೆ ಕಟ್ಟುಬಿದ್ದಿರುತ್ತಾಳೆ. ಇಲ್ಲದೆ ಹೋದರೆ ಆಕೆಗೆ ತನ್ನ ಮನಸ್ಸಿಗೆ ಸರಿಹೋಗುವ ಮನಸ್ಸುಳ್ಳವನು ಬೇಕು. ಆಕೆ ಎಷ್ಟು ಆರಾಟ ಪಟ್ಟರೂ ಅವನು ಹಾಗಿರದೆ ಹೋದರೆ ಖಾಲಿಯಾಗಿರುವ ಮನಸ್ಸನ್ನು ಮುಳ್ಳುಗಳು ತುಂಬುವುದಿಲ್ಲವಲ್ಲ! ಮತ್ತೆ ನೀವೋ ಅವಸಾನ ಸ್ಥಿತಿಯಲ್ಲಿರಬಹುದು, ಆದರೆ ನೀವು ಯಾರೋ ಒಬ್ಬ ಹೆಣ್ಣನ್ನು, ಆಕೆ ಎಷ್ಟು ವಿಕಾರವಾದ ಮುದುಕಿಯಾದರೂ ಸರಿ ಹಿಡಿದುಕೊಂಡು ನೇತಾಡುತ್ತೀರಿ-ತಿಳಿವಳಿಕೆಯುಳ್ಳ ಮೂರ್ಖರು ನೀವು, ನಂಬುಗೆದ್ರೋಹಿಗಳು, ಸ್ನೇಹಿತರಿಗೇ ಮೋಸ ಮಾಡುವವರು, ರಾಜದ್ರೋಹಿಗಳು. ಎಂತಹ ಬಯ್ಗುಳನ್ನಾದರೂ ಹೇಳಿರಿ. ಅವೆಲ್ಲ ನಿಮಗೆ ಅನ್ವಯಿಸುತ್ತವೆ.

ನಿಮ್ಮ ಸ್ನೇಹಿತನನ್ನೇ ನೋಡಿರಿ, ನಿಮ್ಮೊಂದಿಗೆ ಎಷ್ಟು ಮುಗ್ಧವಾಗಿ ಕಲ್ಮಶವಿಲ್ಲದೆ ಇರುತ್ತಾನೆ. ಅವನೆದುರು ನೀವು ಸೌಮ್ಯದಿಂದ ಒಳ್ಳೆಯವರಾಗಿ ಇರುತ್ತೀರಿ. ಅವನ ಅಂದ ವಾದ ಹೆಂಡತಿ, ಅವನ ಉಸಿರು, ಗೃಹಲಕ್ಷ್ಮಿ, ಅವನ ಗೌರವ ಖಡ್ಗದಂತಹದು. ಕಷ್ಟ ಸುಖ ಗಳಲ್ಲಿ ಅವನ ಒಡನಾಡಿ, ಅವನ ಐಶ್ವರ್ಯಕ್ಕೆ ಅಧಿಕಾರಿಣಿ, ಅವನ ಹೃದಯವನದಲ್ಲಿ ಮಧುರವಾದ ಹೂವು, ದೇವರು ಶ್ರಮಪಟ್ಟು ಅವನಿಗೆ ಮಾಡಿಕೊಟ್ಟ ಎಳೆಯ ಫಲ. ನೀವು ಯಾವಾಗಲೂ ಸಿದ್ಧವಾಗಿರುತ್ತೀರಿ ಅದನ್ನು ದಕ್ಕಿಸಿಕೊಂಡು ಒಲಿಸಿಕೊಳ್ಳೋಣವೆಂದು. ಇನ್ನು ಒಂದು ಜಹಗೀರೋ, ರಾಜ್ಯವೋ ಅದನ್ನು ದಕ್ಕಿಸಿಕೊಳ್ಳುವುದಕ್ಕೆ, ಯಾರನ್ನೋ ಕೆಳಕ್ಕೆ ಎಳೆಯುವುದಕ್ಕೆ ನೀವು ಸ್ವಲ್ಪವೂ ಸಂದೇಹಪಡುವುದಿಲ್ಲ. ಆದರೆ ನೀವು ಹೆಣ್ಣುಗಳು ಎಲ್ಲ ಕುತಂತ್ರಗಳಿಗೆ ಆಗರವೆಂದು ಅನ್ನುತ್ತಲೇ ಇರುತ್ತೀರಿ. ದಾರಿಗಳ್ಳರೇ, ನಿಮಗೆ ಜೈ! ಹೆಣ್ಣಿನ ಪ್ರೇಮಕ್ಕಾಗಿ ನಾಶವಾಗಿ ಹೋದ ಒಬ್ಬ ಗಂಡಸನ್ನಾದರೂ ನೀವು ತೋರಿಸಬಲ್ಲಿರಾ?

ಹೆಣ್ಣಿನ ಕಾರಣದಿಂದ ಎಷ್ಟೋ ಉಪದ್ರವಗಳು ನಡೆಯುವುದಿಲ್ಲವೇ ಎಂದು ನೀವು ಕೇಳಬಹುದು. ಹೌದು ನಡೆದಿವೆ. ಯಾರು ಇಲ್ಲವೆನ್ನುತ್ತಾರೆ? ಆದರೆ ನಿಜಕ್ಕೂ ಅದರಲ್ಲಿ

ಅವರು ಮಾಡಿದ್ದೇನು? ನೀವೇ ದಿನವೂ ಜಹಗೀರರಿಗಾಗಿ, ವತನದಾರರಿಗಾಗಿ, ದೇಶಮುಖರಿಗಾಗಿ ಒಬ್ಬರನ್ನೊಬ್ಬರು ಕೊಂದುಕೊಳ್ಳುವುದು, ಒಂದು ಚಿಕ್ಕ ಪಾಟೀಲ್ ಪದವಿಗಾಗಿ ಒಬ್ಬರಿಗೊಬ್ಬರು ವಿಷವೂಡಿಸುವುದನ್ನು ಮಾಡುತ್ತೀರಿ. ಇದಕ್ಕೂ ಮಹಿಳೆಯರೇ ಕಾರಣವೇ? ಅವರದೇ ತಪ್ಪೇ? ಒಂದು ಸಾರಿ ನ್ಯಾಯಾಲಯದಲ್ಲಿ ವ್ಯಾಜ್ಯ ನಡೆಯುತ್ತಿದೆಯೆಂದರೆ ಸಾವಿರಾರು ರೂಪಾಯಿ ಖರ್ಚು ಮಾಡಿ, ಸಣ್ಣ ಪೊಲೀಸ್ ಕಾನ್‌ಸ್ಟೇಬಲ್ ಕಾಲ ಬಳಿ ಬೀಳುವುದು ಇವೆಲ್ಲ ಏತಕ್ಕೆ? ನೀವು ಸತ್ತು ಹೋಗುವುದು ನಡೆದರೆ ಈ ಬಳಲಿಕೆಯ ಅಥವಾ ನೀವು ಮಾಡುವ ಪಾಪಗಳ ಮೂಲವೇ?

ಒಂದು ವೇಳೆ ಮಹಿಳೆಯರೇ ಇಂತಹ ಪಾಪ ಕಾರ್ಯಗಳಿಗೆಲ್ಲ ಪೂರ್ತಿಯಾಗಿ ಕಾರಣವಾದರೆ ಅವರನ್ನು ನಿಂದಿಸುವುದರಲ್ಲಿ ತಪ್ಪಿಲ್ಲ. ಆದರೂ, ಸರಿ, ನಿಮ್ಮ ಶರೀರವನ್ನು ಮಹಿಳೆಗೆ ಅರ್ಪಿಸುವುದು ಎಂಬುದು ಬಹಳ ಸಹಜವಾದ ವಿಷಯವೇ - ನಿಮ್ಮ ಶಾರೀರಿಕ ಬದುಕನ್ನೇ ಅಲ್ಲದೆ, ನಿಮ್ಮ ಪೂರ್ಣ ಜೀವನವನ್ನು ಕೂಡ! ದೇವರುಗಳೇ ಮಹಿಳೆಯರಿಗಿಷ್ಟವಾದ ಕೆಲಸ ಮಾಡಿ, ಸಂತೋಷಪಡಿಸುವುದಕ್ಕೆ ಪ್ರಯತ್ನಿಸಿದರು. ಅವರ ಮುಂದೆ ನೀವೆಷ್ಟು? ಮರಗಳಿಂದ ಬೀಳುವ ಎಲೆಗಳಂತವರು. ಒಬ್ಬ ಹೆಣ್ಣು ಎಲ್ಲ ವಿಷಯಗಳಲ್ಲೂ ಉನ್ನತವಾದವಳೇಕೆ ಆಗುತ್ತಾಳೆಂದರೆ ಆಕೆ ಎಲ್ಲವನ್ನು ತನ್ನ ಸಂರಕ್ಷಣೆಯಲ್ಲಿ ಇಡುತ್ತಾಳೆ. ಆದ್ದರಿಂದ ಘನವಾದವು ತೇಜೋವಂತವಾದುವು ಎಲ್ಲ ಆಕೆಗಾಗಿಯೇ. ಒಂದು ವೇಳೆ ಮಹಿಳೆಯರೇ ಇಲ್ಲದಿದ್ದರೆ ನೀವು ಕಾಡಿನಲ್ಲಿ ಅಲೆಯುತ್ತ, ಮರಗಳಿಂದ ಎಲೆಗಳನ್ನು ಕಿತ್ತುಕೊಂಡು ತಿನ್ನುತ್ತ, ಅದರಿಂದಲೇ ಔತಣ ಮಾಡಿಕೊಳ್ಳುತ್ತ ಕಾಲ ಕಳೆಯುತ್ತಿದ್ದಿರಿ.

ದೇವರು ಹೆಣ್ಣುಗಳನ್ನು ಸಹಜವಾಗಿಯೇ ನಾಜೂಕಾಗಿ ರೂಪಿಸಿದ್ದಾನೆ. ಅದಕ್ಕೇ ಆಕೆಗಾಗಿ ಅವನು ಈ ದೊಡ್ಡ ದೊಡ್ಡ ಮನೆಗಳು, ಭವನಗಳು, ಉದ್ಯಾನವನಗಳು, ಧನಧಾನ್ಯಗಳು, ಸೊಗಸಾದ ವಸ್ತ್ರಗಳು, ಅನೇಕ ಸೌಕರ್ಯಗಳನ್ನೆಲ್ಲ ಮಾಡಿದ್ದಾನೆ. ನಿಮ್ಮಂತಹ ಚಾಟಿ ಬುಗುರಿ ಇಲ್ಲದವರನ್ನು ಯಾರು ಗಮನಿಸುತ್ತಾರೆ. ಚಿಕ್ಕ ಮಕ್ಕಳೂ ಗಮನಿಸುವುದಿಲ್ಲ. ನೀವು ಬೇಕಾದರೆ ಒಂದು ಮರದ ಕೆಳಗೆ ತಲೆಮರೆಸಿಕೊಳ್ಳಬಹುದು. ಅದು ಯಾರಿಗೂ ಬೇಕಾಗಿಲ್ಲ. ಆದ್ದರಿಂದ ಹೆಣ್ಣಿನ ಅರ್ಧ ಶರೀರದಲ್ಲಿ ಬಹಳ ಶಕ್ತಿ ಇದೆಯೆಂದಾಯ್ತು. ನಿಮ್ಮ ಅರ್ಧ ಶರೀರ ಸತ್ತು ಬಿದ್ದರೆ ಏನು ಮಾಡುತ್ತೀರಿ. ಒಂದು ಕೈಯಿಂದ ಜೀವನ ನಡೆಸಬಲ್ಲಿರಾ? ಅದು ಮಾಯೆಯ ದೊಡ್ಡ ಶಕ್ತಿಯೇ ಈ ಜಗತ್ತನ್ನು ಸೃಷ್ಟಿಸಿದೆ. ಹೆಣ್ಣಿನ ಶರೀರದಲ್ಲಿ ಆಕೆ ತನ್ನಂತಹುದೇ ಒಂದು ಚಂಚಲವಾದ ಶಕ್ತಿಯೊಂದಿಗೆ ತುಂಬಿದೆ, ಆಕೆಯನ್ನೇ ಭೌತಿಕ ಜೀವನ ಎಂಬ ಗಾಡಿಯನ್ನು ಎಳೆಯೆಂದು ನಿಯಮಿಸಿದೆ. ನಿಮ್ಮ ಗಂಡಸರಿಗೆ ಒಂದೇ ಕೆಲಸ ಇದೆ. ಅದೇನೆಂದರೆ ಆ ಗಾಡಿಯನ್ನು ತುಂಬುವುದು. ಆ ಗಾಡಿಯನ್ನು ಸಂರಕ್ಷಿಸುವುದು, ಮುಂದಕ್ಕೆ ನಡೆಸುವುದು ಆಕೆಯ ಕೈಯಲ್ಲೇ ಇದೆ. ಹೆಣ್ಣುಗಳಿಗಿರುವ ಒಂದೇ ಒಂದು ಶಕ್ತಿ ಅದು. ಆಕೆಯಿಲ್ಲದೆ ನಿಮಗೆ ಔನ್ನತ್ಯವಾಗಲಿ, ಸೌಮ್ಯತೆಯಾಗಲಿ, ಗೆಲುವಾಗಲಿ ಮತ್ತೇನೂ ಇಲ್ಲ. ನನ್ನನ್ನು ನೇರವಾಗಿ ಈ ವಿಷಯ ಹೇಳಲು ಬಿಡಿ, ಆಕೆಯಿಲ್ಲದ ಮನೆ ಹಾಳುಬಿದ್ದು

ಹೋಗಿ ಉರಿಯುತ್ತಿರುವ ಮೈದಾನದಂತಹುದು. ಎಲ್ಲ ಐಶ್ವರ್ಯ ತುಂಬಿದ ವೈಭವದಿಂದ ಕೂಡಿದ ರಾಜಭವನವಾದರೂ ಆಕೆ ಅದಕ್ಕೆ ತುಂಬುತನ ತರಬಲ್ಲಳು.

ಆಕೆ ತನ್ನ ಮನೆ ಯಾವುದೆಂದುಕೊಳ್ಳುತ್ತಾಳೋ, ಅದು ಅರ್ಧ ಕುಸಿದು ಎರಡು ಕಂಬಗಳ ಮೇಲೆ ನಿಂತ ಗುಡಿಸಲಾದರೂ, ಅದು ಬಹಳ ಬೆಳಕು ತುಂಬಿದ ಗುಡಿಯಂತಹುದು. ಅದಕ್ಕೆ ಜನ ಹೆಣ್ಣನ್ನು ಲಕ್ಷ್ಮಿ ಎನ್ನುತ್ತಿರುತ್ತಾರೆ. ಅದಕ್ಕೆ ಈ ವಿಷಯದ ಬಗ್ಗೆ ನೀವು ಜಾಗರೂಕತೆಯಿಂದ ಯೋಚಿಸಬೇಕು. ಬ್ರಹ್ಮ ಹೆಣ್ಣನ್ನು ವಿಷದಂತಹ ಜೇನಾಗಿ, ಪುರುಷರನ್ನು ವ್ಯಾಮೋಹದಲ್ಲಿ ಬಂದಿ ಮಾಡುವವಳಂತೆ ಸೃಷ್ಟಿಸಿದ್ದಕ್ಕೆ ನಿಂದಿಸುವ ಬದಲು, ನೀವು ಕೃತಜ್ಞರಾಗಿರಬೇಕು ಅವನಿಗೆ. ನಿಜಕ್ಕೂ ಮಹಿಳೆಯರು ಗೋವುಗಳಿಗಿಂತಲೂ ನಿಸ್ಸಹಾಯಕರು.

ಹಸುವಿಗೆ ದೇವರು ತನ್ನನ್ನು ತಾನು ರಕ್ಷಿಸಿಕೊಳ್ಳುವುದಕ್ಕೆ ಶೂಲದಂತಹ ಕೊಂಬುಗಳು, ನಾಲ್ಕು ಕಾಲುಗಳು, ಚಿಗರೆಗಿರುವಂತಹ ವೇಗ ಯಾಕೆ ಕೊಟ್ಟಿದ್ದಾನೆಂದರೆ, ದೊಡ್ಡದಾದ ಹುಲಿಯಂತಹ ಕ್ರೂರ ಮೃಗಗಳಿಂದ ತಪ್ಪಿಸಿಕೊಳ್ಳುವುದಕ್ಕೆ. ಆದರೆ ಮಹಿಳೆಗೆ ಅಂತಹವು ಕೂಡ ಇಲ್ಲವಲ್ಲ!

ದೇವರು ನಿಮಗೂ ಅವನ್ನು ಕೊಡಲಿಲ್ಲ. ಅವನು ನಿಮಗೆ ಕೊಟ್ಟಿದ್ದೇನೆಂದರೆ ದೊಡ್ಡ ತಿಳಿವಳಿಕೆ. ಜಗತ್ತಿನಲ್ಲಿರುವ ಜೀವಿಗಳೆಲ್ಲದರಲ್ಲಿ ನಿಮ್ಮನ್ನು ಉನ್ನತಮಟ್ಟದವನಾಗಿ, ಶ್ರೇಷ್ಠನನ್ನಾಗಿ ಮಾಡಿದ. ಆದ್ದರಿಂದ ನೀವು ನಿಮ್ಮ ವರ್ತನೆಯಲ್ಲಿ ಆ ಗೌರವ ಸ್ಥಿತಿಗೆ ತಕ್ಕಂತೆ ಪರಿವರ್ತನೆಯಾಗಬೇಕು. ಆದರೆ ಅದು ಅತ್ಯಾಸೆಯೇ ಆಗುತ್ತದೆ. ಅಲ್ಲವೆನ್ನುತ್ತೀರಾ ಇನ್ನು ನಿಮ್ಮ ಬ್ರಹ್ಮದೇವನ ವಿಷಯಕ್ಕೆ ಬಂದರೆ ಎಷ್ಟು ಉನ್ನತವಾಗಿರಬೇಕಾದ ಅವನು, ಅವನ ಬಗ್ಗೆಯೇ ಹೇಳಬಲ್ಲೆವು! ಯಾವ ರೀತಿಯ ಪವಿತ್ರನಾದ ಮನುಷ್ಯ ಅವನು? ಅವನು ನಿಮಗಿಂತ ಅಧಮ.

ಭಿಲ್ಲ ಮಹಿಳೆಯರ ಹಿಂದೆ ಹೋಗುವುದಕ್ಕೆ ಶಿವನು ಪ್ರಾಯಶ್ಚಿತ್ತ ಬಿಟ್ಟುಬಿಟ್ಟ. ವಿಶ್ವಾಮಿತ್ರ ನಾಯಿ ರೂಪ ಧರಿಸಿದ. ಅಂದಿನಿಂದ ಅವನು ನಿಮ್ಮೆಲ್ಲರನ್ನು ಕೊಂಚ ನಾಯಿಯಂತೆ ಮಾಡುತ್ತಿದ್ದಾನೆ. ಬಹಳ ಮಂದಿ ದೇವರುಗಳ ಹೆಸರುಗಳನ್ನು ನೀವು ಹೇಳಿಕೊಳ್ಳಬಹುದು. ಇಂದ್ರ, ಚಂದ್ರ ಈ ಎಲ್ಲರೂ ಅವರ ಪಕ್ಕದಲ್ಲಿ ಮನುಷ್ಯರು ಸರಿಸಾಟಿಯಾಗಲಾರರು.

ಅದಕ್ಕೆಂದು ನೀವು ಮೊಟ್ಟಮೊದಲು ನಿಮ್ಮ ಮನಸ್ಸನ್ನು ಮರದ ಬುಡದಂತ ಬಲವುಳ್ಳ ನಿಮ್ಮ ವಿವೇಕಕ್ಕೆ ಕಟ್ಟಿ ಹಾಕಿ, ಭೀಷ್ಮನಂತೆ ವರ್ತಿಸುತ್ತೇವೆಂದು ಪ್ರತಿಜ್ಞೆ ಮಾಡಿಕೊಳ್ಳಿರಿ. ಮದ್ದಾನೆಯಂತಹ ನಿಮ್ಮ ವಾಂಛೆಗಳು ಬಾಳೆಯ ತೋಟವನ್ನು ತುಳಿದು ಹಾಕಿ, ನಾಶ ಮಾಡದಂತೆ ಕಾಪಾಡಿರಿ. ನೀವು ಮೊದಲು ಒಳ್ಳೆಯತನದಿಂದಲೂ, ಪ್ರಾಮಾಣಿಕತೆಯಿಂದಲೂ ವರ್ತಿಸುತ್ತಾ ಅನಂತರ ಸ್ವಚ್ಛವಾದ ಪತಿವ್ರತಾ ಧರ್ಮವೆಂಬ ಬಾವುಟವನ್ನು ಜಗತ್ತಿನಲ್ಲಿ ಪ್ರತಿಯೊಂದು ಮನೆಯ ಮೇಲೆ ಹಾರಿಸಬೇಕು-ಪ್ರತಿಯೊಂದು ಮನೆಯಲ್ಲೂ ಸಂತೋಷ, ಉಲ್ಲಾಸದಿಂದ ತುಂಬಿದ ತೃಪ್ತಿಯನ್ನು ನೀಡುವ ಬಾವುಟ! ಆಗ ತಲೆಯೆತ್ತಿ ನೋಡಿರಿ, ಚಂದಮಾಮ ಕೂಡ ಅದರ ಪಕ್ಕದಲ್ಲಿ ಬಿಳಿಚಿಕೊಂಡಂತಿರುವುದಿಲ್ಲವೆ!

ಆದರೂ ನಾನಿಲ್ಲಿ ಮಹಿಳೆಯರಿಗೆ ಅವರಿಗೆ ತೋಚಿದ್ದೆಲ್ಲ ಮಾಡುವ ಪರಿಧಿಗಳಿಲ್ಲದ ಸ್ವಾತಂತ್ರ್ಯವಿರಬೇಕೆಂದು ನಿಜಕ್ಕೂ ಹೇಳುತ್ತಿಲ್ಲ. ಅವರೆಲ್ಲ ಓದಿಕೊಳ್ಳದವರು, ಮೂರ್ಖರು, ದುರ್ಬಲರಿರಬಹುದು. ಆದರೂ ಸರಿ ಅವರು ಬಲ ತಂದುಕೊಂಡು, ತಾವು ಮರ್ಯಾದೆಯಿಂದ ವರ್ತಿಸುತ್ತೇವೆಂದು ದೃಢವಾಗಿ ನಿರ್ಣಯಿಸಿಕೊಂಡು, ಒಳಗೆ ಹೊರಗೆ ಬೆಂಕಿಯಂತೆ ಪವಿತ್ರವಾಗಿರುತ್ತೇವೆಂದುಕೊಂಡು, ಗಂಡಸರು ನಾಚಿಕೆಯಿಂದ ತಮ್ಮನ್ನು ನೋಡಿ ಕಣ್ಣು ಇಳಿಸಿಕೊಳ್ಳುವಂತೆ ಮಾಡಬೇಕು. ಇವೆಲ್ಲ ಅಲ್ಲದೆ, ಅವರಿಗೆ ದೊಡ್ಡ ಆಭರಣವೇನೆಂದರೆ ಲಕ್ಷ್ಮಿ ಎಂಬ ಹೆಸರಿಗೆ ತಕ್ಕಂತೆ ಬದುಕುವುದು. ಹಾಗಿರಬೇಕೆಂದು ನಾನು ಶ್ರೇಷ್ಠನಾದ ಭಗವಂತನನ್ನು, ಎಲ್ಲವನ್ನು ನಿರ್ಣಯಿಸುವವನನ್ನು, ಶಾಶ್ವತನಾದವನನ್ನು, ನಿಜವಾದ ದಯಾರ್ದ್ರ ಹೃದಯದವನನ್ನು, ಕರುಣಾ ಸಮುದ್ರನನ್ನು, ಕ್ಷಮಾ ಸಮುದ್ರನನ್ನು, ಬಡವರ ಸಹೋದರನನ್ನು ಪ್ರಾರ್ಥಿಸುತ್ತೇನೆ. ಮಹಿಳೆಯರು ಪತಿವ್ರತಾ ಧರ್ಮದಿಂದ ತಮ್ಮ ಅತ್ತೆಯ ಮನೆಯಲ್ಲೂ, ಹುಟ್ಟಿದ ಮನೆಯಲ್ಲೂ ಮಿಂಚಿನಂತೆ ಬೆಳಗಬೇಕೆಂದು ಪ್ರಾರ್ಥಿಸುತ್ತೇನೆ. ಆನಂದದ ಬಾವುಟ ಅವರ ಎರಡು ಕಡೆಯ ಮನೆಗಳ ಮೇಲೆ ಹಾರಬೇಕೆಂದು, ಲಕ್ಷ್ಮಿ ಕೀರ್ತಿಯಿಂದ ಎಲ್ಲ ಮಹಿಳೆಯರು, ಮಕ್ಕಳು ಸಂತೋಷದಿಂದ ಇರಬೇಕೆಂದು, ಎಲ್ಲರೂ ಹೆಣ್ಣುಗಳನ್ನು ಪ್ರೀತಿಸಬೇಕೆಂದು, ಅವರ ಹಣೆಯ ಮುತ್ತೈದೆತನದ ಕುರುಹುಗಳು ತುಂಬಿರಬೇಕೆಂದು ಪ್ರಾರ್ಥಿಸುತ್ತೇನೆ. ಈ ಲೋಕದಲ್ಲಿ ಎಲ್ಲ ಮಹಿಳೆಯರ ಬದುಕು ಸುಲಭವಾಗಿ, ಸರಳವಾಗಿ ನಡೆಯಬೇಕೆಂದು ಎಲ್ಲ ಮಹಿಳೆಯರು ಈ ಲೋಕದಲ್ಲೂ, ಮೇಲಿನ ಲೋಕದಲ್ಲೂ ಸಂತೋಷ ಹೊಂದಬೇಕೆಂದು ಪ್ರಾರ್ಥಿಸುತ್ತೇನೆ. ಹೀಗೆ ಭಗವಂತನನ್ನು ಮನಸ್ಫೂರ್ತಿಯಿಂದ ಪ್ರಾರ್ಥಿಸುತ್ತ ಅವನ ಕುಶಲವನ್ನು ಕೋರಿಕೊಳ್ಳುತ್ತ ಈ ಪುಸ್ತಕವನ್ನು ಇಲ್ಲಿ ಮುಗಿಸುತ್ತಿದ್ದೇನೆ.

ವಿಜಯಲಕ್ಷ್ಮಿಯ ವ್ಯಾಜ್ಯವನ್ನು, ಆಕೆಗೆ ನ್ಯಾಯಾಲಯ ವಿಧಿಸಿದ ಶಿಕ್ಷೆಯನ್ನು, ಪತ್ರಿಕೆಗಳಲ್ಲಿ ಮತ್ತು ಬಹಿರಂಗವಾಗಿ ಆಕೆ ಅನುಭವಿಸಿದ ಅವಮಾನವನ್ನು ಗಮನಿಸಿದ ತಾರಾಬಾಯಿ ಶಿಂದೆ ಅಂದಿನ ಸಾಂಪ್ರದಾಯಿಕ ಕಟ್ಟುಪಾಡುಗಳ ಸ್ತ್ರೀ ಜೀವನವನ್ನು ಅವಲೋಕಿಸಿ ಆವೇಶದಿಂದ ಕುದಿದು **ಪುರುಷರ ಅಹಂಕಾರಕ್ಕೆ ಸವಾಲ್** ಎಂಬ ಕಿರುಪುಸ್ತಕವನ್ನು ಮರಾಠಿಯಲ್ಲಿ ೧೮೮೨ರಲ್ಲಿ ಬರೆದಳು.

ಮಹಾರಾಷ್ಟ್ರದ ಒಂದು ಚಿಕ್ಕ ಪಟ್ಟಣ ಬುಲ್‌ಟಾಣದಲ್ಲಿದ್ದ ನಾಲ್ಕು ದೊಡ್ಡ ಕುಟುಂಬಗಳಲ್ಲಿ ತಾರಾಬಾಯಿ ಶಿಂಧೆ ಅವರದು ಒಂದು. ನಗರದ ಹೊರಗೆ ಅವರಿಗೆ ಭೂಮಿಯಿದ್ದರೂ ಆಕೆಯ ತಂದೆ ಹರಿಶಿಂದೆ ಡಿ.ಸಿ. ಕಚೇರಿಯಲ್ಲಿ ಮುಖ್ಯ ಗುಮಾಸ್ತನಾಗಿ ಕೆಲಸ ಮಾಡುತ್ತಿದ್ದ. ಮಹಾತ್ಮ ಫುಲೆ ೧೮೭೩ರಲ್ಲಿ ಸ್ಥಾಪಿಸಿದ ಬ್ರಾಹ್ಮಣ ವಿರೋಧಿ, ಸಮಾಜ ಸುಧಾರಣಾ ಸಂಘ, ಸತ್ಯಶೋಧಕ ಸಮಾಜದಲ್ಲಿ ಮೊಟ್ಟಮೊದಲು ಸೇರಿದ ಸದಸ್ಯರಲ್ಲಿ ಅವರ ತಂದೆ ಒಬ್ಬ.

ಫುಲೆ ಇವರ ಕುಟುಂಬಕ್ಕೆ ಹತ್ತಿರದ ಸ್ನೇಹಿತರಾದ್ದರಿಂದ ತಾರಾಬಾಯಿ ಮರಾಠಿ ಓದಲು, ಬರೆಯಲು ಕಲಿತುಕೊಂಡಳು.

ಆಕೆ ಈ ಪುಸ್ತಕದಲ್ಲಿ ಬಳಸಿದ ಪದಗಳ ಆಯ್ಕೆ, ಶೈಲಿ, ವಾದಿಸಿದ ವಿಧಾನವನ್ನು ಗಮನಿಸಿದರೆ ಆಕೆ ಬಳಸಿದ ಭಾಷೆ ಮೊನಚಿನಿಂದ ಕೂಡಿರುವುದು ಕಂಡು ಬರುತ್ತದೆ. ಮರಾಠಿ ನುಡಿಗಟ್ಟು, ಸಾಮಾನ್ಯರ ಆಡುಮಾತಿನಂತಿದ್ದು ಹಲವು ಪುಸ್ತಕಗಳನ್ನು, ಪುರಾಣಗಳನ್ನು ಚರ್ಚಿಸುತ್ತ, ವ್ಯಂಗ್ಯದಿಂದ ಹರಿತವಾಗಿರುವುದು ತಿಳಿಯುತ್ತದೆ. ಈ ಅನುವಾದ ಪುರುಷರ ಅಹಂಕಾರಕ್ಕೆ ಸವಾಲ್ ಪುಸ್ತಕದ ಎರಡನೇ ಭಾಗವಾಗಿದೆ.

## ಈ ಸಂಚಿಕೆಯ ಲೇಖಕರು

೧. ಸಬಿತಾ ಬನ್ನಾಡಿ, ಹಿರಿಯಶ್ರೇಣಿ ಕನ್ನಡ ಉಪನ್ಯಾಸಕರು, ಸರ್.ಎಂ.ವಿ. ಸರ್ಕಾರಿ ಕಲಾ ಮತ್ತು ವಾಣಿಜ್ಯ ಕಾಲೇಜು, ನ್ಯೂಟೌನ್, ಭದ್ರಾವತಿ.

೨. ಆರ್. ತಾರಿಣಿ ಶುಭದಾಯಿನಿ, ಹಿರಿಯಶ್ರೇಣಿ ಇಂಗ್ಲಿಷ್ ಉಪನ್ಯಾಸಕಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ ೫೭೭ ೫೨೭.

೩. ಡಾ. ಎಲ್.ಸಿ. ಸುಮಿತ್ರಾ, ಕನ್ನಡ ಪ್ರಾಧ್ಯಾಪಕಿ, ತುಂಗಾ ಕಾಲೇಜು, ತೀರ್ಥಹಳ್ಳಿ.

೪. ಡಾ. ಸುಕನ್ಯಾ ಕಣಾರಳ್ಳಿ, ಬಿ.ಎಂ.ಎಸ್. ಮಹಿಳಾ ಮಹಾವಿದ್ಯಾಲಯ, ಬಸವನ ಗುಡಿ, ಬೆಂಗಳೂರು.

೫. ಡಾ. ಆರ್.ಜಿ. ಮಠಪತಿ, ಉಪನ್ಯಾಸಕರು, ಸ್ನಾತಕೋತ್ತರ ಇಂಗ್ಲೀಷ್ ವಿಭಾಗ, ಬಿ.ವಿ.ವ. ಸಂಘ, ಬಾಗಲಕೋಟೆ ೫೮೭ ೧೦೧.

೬. ವಿಜಯಾ ಗುತ್ತಲ, ಇಂಗ್ಲಿಶ್ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭. ವೀಣಾ ಬನ್ನಂಜೆ, ಸುಮ್ಮನೆ, ಕಲ್ಲಹಳ್ಳಿ, ಜಮಖಂಡಿ ತಾಲೂಕು, ಬಾಗಲಕೋಟೆ ಜಿಲ್ಲೆ.

೮. ಡೊಮಿನಿಕ್.ಡಿ., ೭೧೦, ಎ-೩, ಕೃಷ್ಣ ಬ್ಲಾಕ್, ಎನ್.ಜಿ.ವಿ.ಸಿ, ಕೋರಮಂಗಲ, ಬೆಂಗಳೂರು ೫೬೦ ೦೪೭.

೯. ಡಾ. ಟಿ.ಆರ್. ಚಂದ್ರಶೇಖರ, ಪ್ರಾಧ್ಯಾಪಕರು, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೦. ಡಾ. ವಿಠಲರಾವ್ ಗಾಯಕ್ವಾಡ್, ಪ್ರಾಧ್ಯಾಪಕರು, ಭಾಷಾಂತರ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೧. ಶ್ರೀ ಬಿ. ಸುಜ್ಞಾನಮೂರ್ತಿ, ಸಹಾಯಕ ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

## ಮಹಿಳಾ ಅಧ್ಯಯನ

ಮಹಿಳೆಯ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ, ಅವಳ ಬದುಕನ್ನು ಸುಗಮವಾಗಿಸುವ ದಿಸೆಯಲ್ಲಿ ಚಿಂತನೆ ನಡೆಸುವ ಮಾಧ್ಯಮಗಳಿಗಾಗಿ ಹುಡುಕಾಟ ನಡೆಸಬೇಕಿದೆ. ಏಕೆಂದರೆ ಈವರೆಗೂ ಈ ಪುರುಷಪ್ರಧಾನ ಸಮಾಜಕ್ಕೆ ಮಹಿಳೆಯನ್ನು ದುಡಿಸಿಕೊಳ್ಳುವುದು ಹೇಗೆ ಎಂಬುದು ಚಿಂತೆಯಾಗಿದೆಯೇ ಹೊರತು ಅವಳ ಅಗತ್ಯಗಳನ್ನು ಗಮನಿಸಬೇಕೆಂದು ಅನಿಸಿದ್ದಿಲ್ಲ. ಇಂದಿನ ಜಾಗ್ರತ ಮಹಿಳೆ ತನ್ನ ವರ್ತಮಾನ, ಭವಿಷ್ಯಗಳನ್ನು ತಿದ್ದಿ ರೂಪಿಸುವ ಸಾಮರ್ಥ್ಯವನ್ನು ಕ್ರಮೇಣ ಪಡೆಯುತ್ತಿದ್ದಾಳೆ. ಈ ಹಂತದಲ್ಲಿ ಗಂಭೀರವಾದ ಚಿಂತನೆ, ಚರ್ಚೆ, ಸಲಹೆ, ಸೂಚನೆಗಳನ್ನು ಕೊಡುತ್ತಾ ಅವಳ ಪ್ರಯತ್ನಕ್ಕೆ ನೆರವಾಗುವ ಪತ್ರಿಕೆಗಳ ಅಗತ್ಯವನ್ನು ಪೂರೈಸುವ ಪ್ರಯತ್ನವಾಗಿ ಈ ಮಹಿಳಾ ಅಧ್ಯಯನ ಪತ್ರಿಕೆ ಕೆಲಸ ಮಾಡುತ್ತಿದೆ. ಇಲ್ಲಿನ ಚಿಂತನೆ, ಚರ್ಚೆಗಳು ತಾತ್ತ್ವಿಕ ನೆಲೆಯ ಶೋಧಗಳಲ್ಲಿರುವ ವಿದ್ವಾಂಸರೂ ಕ್ರಿಯಾಕ್ಷೇತ್ರಗಳಲ್ಲಿರುವ ಕಾರ್ಯಕರ್ತರೂ ಪರಸ್ಪರ ಸಂವಾದ ನಡೆಸಲು ನೆರವಾಗುವಂತಿರಲಿ ಎಂಬ ಆಶಯ ಹೊಂದಿವೆ.